ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

# ಸಂಸಾರ-ಸುಖ.

ಅಥವಾ

## ಲೋಕಭ್ರಮ-ವಿಲಾಸ.







ಲೇಖಕರು

ವೇ. ತ್ರಿ. ಗಳಗನಾಥರು.

೨-೮-೦

ಗಳಗನಾಥ ಸುರಸ ಗ್ರಂಥಮಾಲೆ
ಜವಳೀಪೇಟೆ ೬೬ ಧಾರವಾಡ.

ಪ್ರಕಾಶಕರು :
ಎಸ್. ಎಮ್. ಜೋಶಿ
ಗಳಗನಾಥ ಸುರಸ ಗ್ರಂಥಮಾಲಾ, ಧಾರವಾಡ.



ಮೊದಲನೆಯ ಮುದ್ರಣ ೧೯೨೬
ಎರಡನೆಯ ಮುದ್ರಣ ೧೯೫೯





ಮುದ್ರಕರು :
ಎಸ್. ಎಮ್. ಜೋಶಿ
ಗಳಗನಾಥ ಮುದ್ರಣಾಲಯ, ಜವಳೀಪೇಟೆ
ಧಾರವಾಡ

# ಪ್ರಸ್ತಾವನೆ



ಕಾದಂಬರಿಗಳು ಸುಖಪರ್ಯವಸಾಯಿಗಳೆಂತಲೂ, ದುಃಖಪರ್ಯವಸಾಯಿಗಳೆಂತಲೂ ಎರಡುವಿಧಗಳಾಗಿರುವವು. ಕಾದಂಬರಿಯು ಕಡೆಯಲ್ಲಿ, ಅದರೊಳಗಿನ ಮುಖ್ಯ ಪಾತ್ರಕ್ಕೆ ಸುಖ ಉಂಟಾಗಿದ್ದರೆ ಆ ಕಾದಂಬರಿಯು ಸುಖ ಪರ್ಯವಸಾಯಿಯೆನಿಸಿಕೊಳ್ಳುವದು; ದುಃಖ ಉಂಟಾಗಿದ್ದರೆ ದುಃಖ ಪರ್ಯವಸಾಯಿಯೆನಿಸುವದು. ಈ ದೃಷ್ಟಿಯಿಂದ ನೋಡಿದರೆ ಈ ಕಾದಂಬರಿಯು ಪ್ರಧಾನ ಪಾತ್ರವಾದ ಖುಸರುವು ಬಾದಶಹನಾಗುವದರ ಬದಲು, ತನ್ನ ದುಷ್ಕರ್ಮದಿಂದ ಅಂಧನಾದದ್ದರಿಂದ ಈ ಕಾದಂಬರಿಯು ದುಃಖ ಪರ್ಯವಸಾಯಿಯೆಂತಲೇ ಹೇಳಬೇಕಾಗುವದು; ಒಟ್ಟಿನ ಮೇಲೆ ಅಕಬರನೇ ಮೊದಲಾದ ಈ ಕಾದಂಬರಿಯೊಳಗಿನ ಎಲ್ಲ ಪಾತ್ರಗಳು ಒಂದಿಲ್ಲೊಂದು ಬಗೆಯ ದುಃಖವನ್ನೂ, ತಾಪವನ್ನೂ ಪಟ್ಟಿರುವವು. ಮಾನಸಿಂಹ–ಅಜಿಮಖಾನರಿಗೆ ಖುಸರುವಿನ ಪಟ್ಟದ ಸಲುವಾಗಿ ಕೃಷ್ಣ ಕಾರಸ್ಥಾನ ಮಾಡುವಾಗ ತಾಪವಾಗಿದ್ದರೆ, ಖುಸರುವಿನ ಹೆಂಡತಿಯಾದ ಪ್ಯಾರಿಬಾನುಗೆ ಗಂಡನ ದುರ್ವ್ಯಸನಕ್ಕಾಗಿಯೂ, ಖುಸರುವಿನ ತಾಯಿಯಾದ ಜೋಧಬಾಯಿಗೆ ಮಗನ ಭಾವೀ ದುಸ್ಥಿತಿಯ ವಿಷಯವಾಗಿಯೂ, ಸೇಲೀಮನಿಗೆ ತನಗೆ ದಿಲ್ಲಿಯ ಸಿಂಹಾಸನವು ಎಲ್ಲಿ ದೊರೆಯದೆ ಹೋಗುವದೊ ಎಂಬದರ ವಿಷಯವಾಗಿಯೂ, ತಾಪವಾಗಿತ್ತು. ಒಟ್ಟಿಗೆ ಈ ಕಾದಂಬರಿಯು ಸಂಸಾರವು ದುಃಖಮಯವೆಂಬದನ್ನು ಚನ್ನಾಗಿ ತೋರಿಸುತ್ತದೆ. ಹೀಗಿದ್ದರೂ ಈ ಕಾದಂಬರಿಯ ಪಾತ್ರಗಳೆಲ್ಲ ಸುಖಲೋಲುಪವಾಗಿರುವಂತೆ ಲೋಕಕ್ಕೆ ತೋರುತ್ತಿದ್ದದ್ದರಿಂದ ಸಂಸಾರಸುಖವು ಲೋಕಭ್ರಮಕಾರಕವಿರುತ್ತದೆಂದು

ಹೇಳಬೇಕಾಗುವದು. ಮನುಷ್ಯನಿಗೆ ಪ್ರಕೃತಕ್ಕೊದಗಿರುವ ಸುಖವು ಭಾವೀ ಸುಖಾಭಿವೃದ್ಧಿಯ ಕಲ್ಪನೆಯ ಮೂಲಕ ಅತೃಪ್ತಿಕರವು, ಅತ ಏವ ಅಶಾಂತಿ ಕರವು ಆಗುವದರಿಂದ " ಅಶಾಂತಸ್ಯ ಕುತಃಸುಖಂ " ಎಂಬಂತೆ ಅದು ಅನುಭವದಲ್ಲಿ ತತ್ವತಃ ದಃಖರೂಪವೇ ಆಗಿರುವದು. ಇನ್ನು ಪ್ರತ್ಯಕ್ಷ ದುಃಖವಂತೂ ಅನುಭವದಲ್ಲಿ ಸುಖರೂಪವಾಗಲಾರದು ; ಆದ್ದರಿಂದಲೇ ಜ್ಞಾನಿಗಳೂ, ತತ್ವಜ್ಞರೂ, ಸಾಧುಸಂತರೂ ಸಂಸಾರವನ್ನು ಅಶಾಂತಿ ಕರವಾದದ್ದರಿಂದ ದುಃಖರೂಪವೆಂತಲೇ ಹೇಳಿರುವರು.

ಈ ಕಾದಂಬರಿಯು ಬಂಗಾಲದ ಪ್ರಸಿದ್ಧ ಕಾದಂಬರಿಕಾರರಾದ ಶ್ರೀಯುತ ಬಾಬುಹರಿ ಸಧನ ಮುಕರ್ಜಿ ಇವರ "ಖುಸರು" ಎಂಬ ಉತ್ಕೃಷ್ಟಕಾದಂಬರಿಯ ಭಾಷಾಂತರದ ಆಧಾರದಿಂದ ಬರೆದದ್ದಾಗಿದ್ದರೂ ಅಲ್ಲಲ್ಲಿ ಮಾಡಿರುವ ಸೀಕಿಬೋಧವನ್ನು ವಾಚಕರ ಸಲುವಾಗಿಹೊಸದಾಗಿ ಸೇರಿಸಿರುತ್ತೇವೆ. ಇದರಲ್ಲಿ ಶಹಾಜಾದಾ ಖುಸರುವಿನ ಯೋಗದಿಂದ ವಿಷಯ ಲಂಪಟತೆಯ ದುಷ್ಪರಿಣಾಮವೂ, ಅಕಬರ ಬಾದಶಹನ ಯೋಗದಿಂದ ಕ್ಷಮಾಶೀಲನಾದ ಉದಾರ ಹೃದಯದ ತಂದೆಯ ಪುತ್ರವಾತ್ಸಲ್ಯವೂ, ಜೋಧಬಾಯಿಯ ಯೋಗದಿಂದ ಆರ್ಯ ಸ್ತ್ರೀಯರ ಪತಿಭಕ್ತಿಯ ಪ್ರಭಾವವೂ, ಮಾನಸಿಂಹ-ಅಮೀರಖಾನರ ಪರಸ್ಪರ ಸ್ನೇಹದ ರೀತಿಯಿಂದ ರಾಜತಂತ್ರದ ಕೌಟಿಲ್ಯದ ಪಡಿಕಟ್ಟೂ, ಮಂದಾಕಿನಿಯ ಯೋಗದಿಂದ ರಜಪೂತ ಸ್ತ್ರೀಯರ ಕೆಚ್ಚೆದೆಯು, ಹಾಗು ಆತ್ಮವಿಶ್ವಾಸ-ಪತಿನಿಷ್ಠೆಗಳ ಪ್ರಭಾವವೂ ಚನ್ನಾಗಿ ವ್ಯಕ್ತವಾಗುವವು.

ಈ ಕಾದಂಬರಿಯ ವಾಚನದಿಂದ ವಾಚಕರಲ್ಲಿ ಒಬ್ಬರಾದರೂ ಸಂಸಾರದ ಯೋಗ್ಯಮಾರ್ಗವನ್ನು ಕಂಡುಹಿಡಿದು ನಡೆಯಲು ಯತ್ನಿಸಿದರೆ, ನನ್ನ ಶ್ರಮವು ಸಾರ್ಥಕವಾಯಿತೆಂದು ತಿಳಿಯುವೆನು.

ಹಾವೇರಿ
ತಾ. ೧೧—೧—೧೯೨೬

ಕನ್ನಡಿಗರ ಸೇವಕ,
**ಗಳಗನಾಥ**

ಗಳಗನಾಥ ಸುರಸ ಗ್ರಂಥಮಾಲೆ, ಧಾರವಾಡ

# ಸಂಸಾರ-ಸುಖ.

ಅಥವಾ

# ಲೋಕಭ್ರಮ-ವಿಲಾಸ.



## ೧ ನೆಯ ಪ್ರಕರಣ

## ತಾರುಣ್ಯದ ತೀವ್ರತೆ!

ಅಮಾವಾಸ್ಯೆಯ ಕಗ್ಗತ್ತಲೆಯು. ನಿರ್ಮಾನುಷವಾದ ಅಡವಿಯೊಳಗಿನದೊಂದು ಗುಹೆಯಲ್ಲಿ ಒಬ್ಬ ಸುಂದರ ತರುಣನು ಯಾರದೋ ಹಾದಿಯನ್ನು ನೋಡುತ್ತ ದೀವಿಗೆಯ ಮಂದಪ್ರಕಾಶದಲ್ಲಿ ಕುಳಿತುಕೊಂಡಿದ್ದನು. ಆ ತರುಣನು ಸರ್ವಸಾಮಾನ್ಯ ಮನುಷ್ಯನಲ್ಲ; ಜಗದ್ವಿಖ್ಯಾತನಾದ ಅಕಬರ ಬಾದಶಹನ ಮೊಮ್ಮಗನು, ಜಹಂಗೀರ ಬಾದಶಹನೆಂದು ಪ್ರಸಿದ್ಧನಾಗಿರುವ ಸಲೀಮನ ಹಿರಿಯ ಮಗನು; ಅದರಂತೆ ಆತನು, ಅಕಬರ ಬಾದಶಹನ ವಿಜಯಶಾಲಿತ್ವದ ಕೀರ್ತಿಯ ಅರ್ಧಕ್ಕರ್ಧ ಪಾಲಿಗೆ ಕಾರಣನಾದ ವೀರಶ್ರೇಷ್ಠ ಮಾರವಾಡಾಧಿಪತಿ, ಮಾನಸಿಂಗನ ತಂಗಿಯಾದ ಲೋಕಸುಂದರಿಯೆನಿಸಿದ ಜೋಧಬಾಯಿಗೆ ಅಕ್ಕರೆಯ ಒಬ್ಬನೇ ಒಬ್ಬ ಮಗನಾಗಿದ್ದನು. ಹೀಗೆ ತಂದೆಯ ವಂಶದಿಂದಲೂ, ತಾಯಿಯ ವಂಶದಿಂದಲೂ ಅತ್ಯಂತ

ನಿಮ್ಮ ಸೋದರ ಮಾವಂದಿರಾದ ಮಾನಸಿಂಹರವರ ಕೊಲೆ ಮಾಡಬೇಕೆಂದು ಯೋಚಿಸಿರುತ್ತೀರಿ; ಆದರೆ ಹೀಗೆ ವಿಚಾರದಲ್ಲಿ ಬದಲು ಆಗಲಿಕ್ಕೆ ಕಾರಣವೇನು?

ಖುಸ್ರು—ದುರ್ಜಯ, ನಿನ್ನ ಮಾತು ಸುಳ್ಳೆಂದು ನಾನು ಹೇಳುವದಿಲ್ಲ; ಮೊದಲು ನಾನು ನನ್ನ ತಂದೆಯ ಕೊಲೆ ಮಾಡಬೇಕೆಂದು ನಿಶ್ಚಯಿಸಿದ್ದು ನಿಜವು; ಆದರೆ ನನ್ನ ಪೂಜ್ಯ ತಾಯಿಯವರಾದ ಜೋಧಬಾಯಿಯವರು ಅತ್ಯಂತ ಕನಿಕರದಿಂದ ನನಗೆ—"ವತ್ಸಾ, ತಂದೆಗೆ ಮಗನು ಸ್ವರ್ಗದೊಳಗಿನ ದೇವತೆಯಂತೆ ಅತ್ಯಂತ ಪೂಜ್ಯನಾಗಿರುವನು; ಆದ್ದರಿಂದ ಆತನ ರಕ್ತದಿಂದ ಕೈಯನ್ನು ಅಪವಿತ್ರ ಮಾಡಿಕೊಂಡು ಪಾಪಿಯಾಗುವದು ಸರಿಯಲ್ಲ; ಪಿತೃಘಾತಕಿಯು ನರಕಕ್ಕೆ ಇಳಿಯುವನಲ್ಲದೆ, ಅವನು ಈ ಲೋಕದಲ್ಲಿ ಅಕ್ಷಯ ಅಪಕೀರ್ತಿಗೆ ಗುರಿಯಾಗಬೇಕಾಗುವದು" ಎಂದು ಹೇಳಿದ್ದರಿಂದ ನಾನು ತಂದೆಯ ಖೂನು ಮಾಡುವದನ್ನು ಬಿಟ್ಟುಕೊಟ್ಟೆನು.

ದುರ್ಜಯ—ಹಾಗಾದರೆ ಸೋದರ ಮಾವನನ್ನು ಕೊಂದ ಕಲಂಕವು ತೊಳೆದು ಹೋಗುತ್ತದೆಂದಹಾಗಾಯಿತಲ್ಲ! ರಾಜಕುಮಾರ, ಮಾನಸಿಂಹರವರು ನಿಮ್ಮ ಪೂಜ್ಯ ತಾಯಿಯ ಅಣ್ಣಂದಿರಾಗಿರುವದರಿಂದ, ಆ ನಿಮ್ಮ ತಾಯಿಗೂ ಅವರು ಪೂಜ್ಯರಾಗಿರಲು, ನಿಮಗೆ ಅವರು ಅತ್ಯಂತ ಪೂಜ್ಯರಾಗಲಿಲ್ಲವೆ? ಮುಂದೆ ಮೊಗಲ ಸಾರ್ವಭೌಮ ಸಿಂಹಾಸನವನ್ನೇರುವ ನಿಮಗೆ ಈ ಕ್ರೂರತನವು ಒಪ್ಪುವದಿಲ್ಲ; ನಿಮ್ಮನ್ನು ಮನಃಪೂರ್ವಕವಾಗಿ ಪ್ರೀತಿಸುವ ಮಾನಸಿಂಹರವರನ್ನು ಕೊಲ್ಲಿಸಲಿಕ್ಕೆ ಸೋದರಳಿಯಂದಿರಾದ ನಿಮ್ಮ ಮನಸ್ಸಾದರೂ ಹೇಗೆ ಒಪ್ಪುವದು! ಶಿವ ಶಿವ! ಎಂಥ ಕ್ರೂರತನವಿದು! ಸರಕಾರ! ನಿಮ್ಮ ವಿಚಾರವು ಏನೇ ಇರಲಿ, ನೀವು ಯಾರ ಕೊಲೆಯನ್ನೇ ಮಾಡಿಸಲಿಚ್ಛಿಸಿರಿ; ಆದರೆ ಮಾನಸಿಂಹರವರ ಸೇವಕನಾದ ನಾನು ಅವರ ಕೊಲೆಯನ್ನು ಸರ್ವಥಾ ಮಾಡಲಾರೆನು! ಮಹಾರಾಜರ ಅಂಗರಕ್ಷಕನಾದ ನಾನು ಅವರ ಪ್ರಾಣಹರಣ ಮಾಡಲಾ? ಇದಲ್ಲದೆ ಗುಪ್ತರೀತಿಯಿಂದ ಒಬ್ಬರ ಕೊಲೆ ಮಾಡುವದು ತೀರಾ ಮುಡದಾರತನದ ಕೆಲಸವು! ಅಂಥ ನೀಚ ಕೆಲಸವನ್ನು ಅಚ್ಚ ರಜಪೂತರು ಸರ್ವಥಾ ಮಾಡಲಾರರು!

ಖುಸ್ರು—ಆದರೆ ರಾಜಪುತ್ರರಾದ ನನ್ನ ತಂದೆ ಸೇಲೀಮರ ಕೊಲೆ ಮಾಡಲು ನೀನು ಈ ಮೊದಲೆ ಒಪ್ಪಿಕೊಂಡಿದ್ದಿಲ್ಲವೆ?

ದುರ್ಜಯ—ಅಹುದು, ಒಪ್ಪಿಕೊಂಡದ್ದು ನಿಜವು. ಒಂದು ದಿನ ಆಗ್ರಾ ಶಹರದಲ್ಲಿ ಯುವರಾಜ ಸೇಲೀಮಸಾಹೇಬರು ಒಂದು ಕ್ಷುಲ್ಲಕ ತಪ್ಪಿಗಾಗಿ ನನ್ನನ್ನು ಬಹಳವಾಗಿ ಅವಮಾನಗೊಳಿಸಿದರು. ರಜಪೂತ ವೀರರು ತಮಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳದೆ ಸರ್ವಥಾ ಬಿಡರು; ಆದ್ದರಿಂದ ನಾನು ಸೇಲೀಮಸಾಹೇಬರ ಸೇಡು ತೀರಿಸಿಕೊಳ್ಳುವದಕ್ಕಾಗಿ ಅವರ ಕೊಲೆ ಮಾಡಲು ಒಪ್ಪಿಕೊಂಡಿದ್ದೆನು; ಆದರೆ ಯುವರಾಜ, ನಿಮ್ಮ ತಂದೆಯ ಕೊಲೆಯನ್ನು ನಾನು ಮೋಸದಿಂದ ಮಾಡುತ್ತಿದ್ದೆನೆಂದು ತಿಳಿಯಬೇಡಿರಿ; ಶಸ್ತ್ರವಿಲ್ಲದಿದ್ದರೆ ಅವರಿಗೂ ಶಸ್ತ್ರಕೊಟ್ಟು, ಅದು ಸಾಧಿಸದಿದ್ದರೆ ಅವರೊಡನೆ ದ್ವಂದ್ವ ಯುದ್ಧಮಾಡಿ ಅವರನ್ನು ಕೊಲ್ಲುತ್ತಿದ್ದೆನು; ಆದರೆ ನಾನು ವೀರವರರಾದ ಮಾನಸಿಂಹರವರ ಅಂಗರಕ್ಷಕನಾಗಿರಲು, ಆ ನನ್ನ ಸ್ವಾಮಿಯ ಕೊಲೆಯನ್ನು ನಾನು ಸರ್ವಥಾ ಮಾಡಲಾರೆನು; ಈ ಮಾತನ್ನಾದರೂ ತಾವು ನನ್ನ ಪ್ರತಿಜ್ಞೆಯೆಂದೇ ತಿಳಿಯಿರಿ.

ಈ ಮೇರೆಗೆ ದುರ್ಜಯನು ನುಡಿಯಲು ಖುಸ್ರುವು ಸಂತಾಪಗೊಂಡನು. ಆತನು ತನ್ನ ಖಡ್ಗವನ್ನು ಹಿರಿದು ದುರ್ಜಯನನ್ನು ಕುರಿತು—"ದುರ್ಜಯ, ಸಾಕು ತೆಪ್ಪಗಾಗು, ಇನ್ನು ಹಿಟ್ಟೆಂದು ಮಾತಾಡಬೇಡ. ನಿನ್ನ ಮಾತನ್ನು ನಾನು ಕಿವಿಯಿಂದ ಕೇಳಲಾರೆನು. ನಿನಗೆ ನನ್ನ ಅಪ್ಪಣೆಯು ಮಾನ್ಯವಿಲ್ಲ, ನನ್ನ ಉದ್ದೇಶವಂತು ನಿನಗೆ ಗೊತ್ತಾಗಿ ಹೋಯಿತು; ಅಂದಬಳಿಕ ನಿನ್ನನ್ನು ಇನ್ನು ಜೀವದಿಂದಿರಗೊಡುವ ಬಗೆಹೇಗೆ? ನಿನ್ನನ್ನು ಮೊದಲು ಪರಲೋಕಕ್ಕೆ ಅಟ್ಟಿ ಆಮೇಲೆ ಮುಂದಿನ ದುರ್ಘಟ ಕಾರ್ಯಕ್ಕೆ ನಾನು ಕೈಹಾಕುವೆನು. ದುರ್ಜಯ, ಯುದ್ಧಮಾಡಲು ನೀನು ಸಿದ್ಧನಾಗಿರದಿದ್ದರೆ, ಶಸ್ತ್ರತ್ಯಾಗ ಮಾಡಿ ಸುಮ್ಮನೆ ನನ್ನ ಅಧೀನನಾಗು, ಅಂದರೆ ಗುಪ್ತ ಸ್ಥಳದಲ್ಲಿ ನಿನ್ನನ್ನು ಸೆರೆಯಲ್ಲಿರಿಸಿಬಿಡುವೆನು. ಅದಕ್ಕೆ ನಿನ್ನ ಒಪ್ಪಿಗೆಯಿಲ್ಲದಿದ್ದರೆ ನೀನು ಮರಣಕ್ಕೆ ಸಿದ್ಧನಾಗು" ಅನ್ನಲು, ದುರ್ಜಯಸಿಂಹನು ನಗುತ್ತ—"ಯುವರಾಜ, ಮರಣವೆಂಬುದು, ಯುದ್ಧಕ್ಕಾಗಿ ಯಾವಾಗಲೂ ಹಸಿವಿರುವ ರಜಪೂತವೀರರ ಕಟ್ಟಿಟ್ಟ ರುಚಿಕರವಾದ ಬುತ್ತಿಯಾಗಿರುವದು.

ಅಂದಬಳಿಕ ಅದಕ್ಕಾಗಿ ಈ ದುರ್ಜಯನು ಯಾಕೆ ಅಂಜುವನು? ಆದರೆ ಯುದ್ಧಮಾಡದೆ ಸೆರೆಯಲ್ಲಿ ಬೀಳುವದಕ್ಕಾಗಲಿ, ಕುರಿಯಂತೆ ಕರಕರ ಕುತ್ತಿಗೆಯನ್ನು ಕೊಯಿಸಿಕೊಂಡು ಸಾಯುವದಕ್ಕಾಗಲಿ ರಜಪೂತರು ಒಪ್ಪಲಾರರು; ಯಾಕಂದರೆ ನಿಜವಾದ ರಜಪೂತರು ಅದನ್ನು ಮಹತ್ಪಾಪವೆಂದು ತಿಳಿಯುವರು; ಆದ್ದರಿಂದ ರಾಜಪುತ್ರಾ, ನಾನು ಯುದ್ಧಕ್ಕೆ ಸಿದ್ಧವಾಗಿರುವೆನು; ನನ್ನ ಕೈಯೊಳಗಿನ ಈ ಖಡ್ಗವೂ ನನಗೆ ಸಹಾಯಮಾಡಲಿಕ್ಕೆ ಸಿದ್ಧವಾಗಿದೆ. ನಾನು ಬದುಕಿರುವವರೆಗೆ ಈ ತೀಕ್ಷ್ಣ ಖಡ್ಗವು ಅನ್ಯರಕೈಗೆ ಹತ್ತಲಾರದು. ಆಗಲಿ, ಇನ್ನು ಒಮ್ಮೆ ನಮ್ಮಿಬ್ಬರ ಸಾಮರ್ಥ್ಯದ, ಹಾಗು ರಣಪಾಂಡಿತ್ಯದ ಪರೀಕ್ಷೆಯು ಆಗಿಹೋಗಲಿ?

ಈ ಮೇರೆಗೆ ನುಡಿದ ದುರ್ಜಯಸಿಂಹನ ಧಿರ್ಾರದ ಮಾತುಗಳನ್ನು ಕೇಳಿ ಶೂರನಾದ ಖುಸ್ರುವು ಶಾಂತವೃತ್ತಿಯಿಂದ—“ದುರ್ಜಯಾ, ಇಂಥ ಸಾಹಸಕ್ಕೆ ನೀನು ಹೋಗಬೇಡ; ಇನ್ನೊಮ್ಮೆ ವಿಚಾರಮಾಡು. ಇನ್ನು ನೀನು ಬದುಕಲಾರೆ—ಅಲ್ಲಾನ ಆಣೆಯೆಂದರೂ ನೀನು ಬದುಕಲಾರೆ; ಆದ್ದರಿಂದ ಕಡದಿಗೆ ಬೀಳದೆ ಖಡ್ಗವಿಟ್ಟು ನನ್ನಧೀನನಾಗಿ ಬದುಕು!” ಎಂದು ಹೇಳುತ್ತಿರಲು, ದುರ್ಜಯನು—“ರಾಜಪುತ್ರಾ, ಇಂಥ ಅಮಂಗಲ ಮಾತುಗಳನ್ನಾಡುವದು ನಿನಗೆ ಭೂಷಣವಲ್ಲ. ಇದರಿಂದ ನಮ್ಮಂಥ ವೀರ ರಜಪೂತರ ಸ್ವರೂಪಜ್ಞಾನವೇ ನಿನಗೆ ಆಗಿರುವದಿಲ್ಲವೆಂದು ಅನ್ನಬೇಕಾಗುತ್ತದೆ; ಇಲ್ಲವೆ ನನ್ನೊಡನೆ ಯುದ್ಧಮಾಡಲು ಹಿಂಜರಿಯುತ್ತಿರುವ ನಿನ್ನ ಪುಕ್ಕತನವನ್ನು ಮುಚ್ಚಿಕೊಳ್ಳುವದಕ್ಕಾಗಿ ಅಕಬರ ಬಾದಶಹರವರ ಅಚ್ಚಿಯ ಮೊಮ್ಮಗನು ನೀನು ಹೀಗೆ ದೊಡ್ಡಿಸ್ತನದ ಸೋಗಿನ ಮಾತುಗಳನ್ನಾಡುವೆಯೆಂದಾದರೂ ಅನ್ನಬೇಕಾಗುತ್ತದೆ.” ಎಂದು ನುಡಿದು ಕೂಡಲೆ ತನ್ನ ಖಡ್ಗವನ್ನು ಹಿರಿದು ಶಹಾಜಾದಾನ ಮೇಲೆ ದುಮುಕಲು ಅವರಿಬ್ಬರ ದ್ವಂದ್ವಯುದ್ಧಕ್ಕೆ ಆರಂಭವಾಯಿತು. ಆ ಮಂದ ಪ್ರಕಾಶದ ಗುಹೆಯಲ್ಲಿ ಅವರಿಬ್ಬರ ತರುಣ ವೀರರ ಖಡ್ಗಗಳು ಹೊಳೆಯಹತ್ತಿದವು. ಅವರಿಬ್ಬರು ಯುದ್ಧ ಕೌಶಲ್ಯದಿಂದ ಕಾದುತ್ತಿರಲು, ಅಕಸ್ಮಾತ್ ದುರ್ಜಯನ ಖಡ್ಗವು ಖುಸ್ರುವಿನ ಖಡ್ಗದಿಂದ ಖಂಡಿತವಾಗಿ ಅದರ ಎರಡು ತುಂಡುಗಳು ಝಣಝಣಗುಟ್ಟುತ್ತ ಗುಹೆಯೊಳಗಿನ ಕಲ್ಲಿಗೆ ಅಪ್ಪಳಿಸಿದವು! ಆಗ ನಿಶ್ಶಸ್ತ್ರನಾದ

ದುರ್ಜಯನನ್ನು ನೋಡಿ ಖುಸ್ರುವು ಉಪಹಾಸದಿಂದ ಗರ್ಜಿಸಿದನು; ಆದರೆ ವೀರನಾದ ದುರ್ಜಯನು ಬೆದರಲಿಲ್ಲ; ತಾನು ನಿಶ್ಶಸ್ತ್ರನಾದರೂ ಒಂದು ಹೆಜ್ಜೆಯಾದರೂ ಹಿಂದಕ್ಕೆ ಸರಿಯಲಿಲ್ಲ; ಮಹಾ ಧೈರ್ಯದಿಂದ ಖುಸ್ರುವಿನ ಮುಂದೆ ನಿಂತುಬಿಟ್ಟನು! ಆತನ ಆ ಮಹಾಧೈರ್ಯಕ್ಕಾಗಿ ಖುಸ್ರುವು "ಶಸ್ತ್ರರಹಿತನ ಮೇಲೆ ಶಸ್ತ್ರವೆತ್ತುವದು ಧರ್ಮವಲ್ಲವೆಂ"ದು ತನ್ನ ಖಡ್ಗವನ್ನು ಒರೆಗಾಣಿಸಬೇಕಾಗಿತ್ತು; ಆದರೆ ಸಿಟ್ಟಿನಿಂದ ವೈಮರೆತಿದ್ದ ಖುಸ್ರುವು ಹಾಗೆ ಮಾಡದೆ, ದುರ್ಜಯನ ಮೇಲೆ ದುಮುಕಿದನು; ಆದರೂ ದುರ್ಜಯನು ನಿಂತ ಸ್ಥಳಬಿಟ್ಟು ಕದಲದೆ ತಿರಸ್ಕಾರದಿಂದ ನಕ್ಕು ಖುಸ್ರುವನ್ನು ಕುರಿತು—"ಖುಸ್ರು, ನಾವು ರಜಪೂತರು ಮರಣವನ್ನು ಆಟಿಗೆಯೆಂದು ತಿಳಿಯುತ್ತಿರುವೆವು ಕಂಡೆಯಾ? ಆದರೆ,"

ಈ ಮೇರೆಗೆ ದುರ್ಜಯನು ನುಡಿದು ಸುಮ್ಮನಾಗಲು, ಖುಸ್ರುವು ನಾಚಿ ತನ್ನ ಖಡ್ಗವನ್ನು ಹಿಂದಕ್ಕೆ ತಕ್ಕೊಂಡು ಗಾಂಭೀರ್ಯದಿಂದ—"ದುರ್ಜಯ, "ಆದರೆ" ಎಂದು ನುಡಿದು ಸುಮ್ಮನಾದೆಯಲ್ಲ? ನಿಶ್ಶಸ್ತ್ರನಾದ ನೀನು ಏನಾದರೂ ಹೇಳಿಕೊಳ್ಳುವದಿದ್ದರೆ ಹೇಳಿಕೊಳ್ಳು! ನಿನಗೆ ಖಡ್ಗವು ಬೇಕಾಗಿದ್ದರೆ ಬೇರೆ ಖಡ್ಗವು ಇಲ್ಲಿ ದೊರೆಯುವಹಾಗಿಲ್ಲ. ಅಂದಬಳಿಕ ನನ್ನ ಖಡ್ಗವನ್ನೂ ನಾನು ಚಲ್ಲಿಕೊಟ್ಟು ನಿನ್ನೊಡನೆ ಮಲ್ಲಯುದ್ಧಕ್ಕೆ ಬರುವೆನು, ಮುಂದಕ್ಕೆ ಬಾ; ಇಲ್ಲದಿದ್ದರೆ ಸುಮ್ಮನೆ ವ್ಯರ್ಥ ಹೇವವಾದರೂ ಯಾತಕ್ಕೆ? ಶರಣು ಬಾ, ನಿನಗೆ ಜೀವದಾನ ಕೊಟ್ಟು ಪ್ರತಿಬಂಧದಲ್ಲಿರಿಸುವೆನು," ಎಂದು ಹೇಳಿದನು. ಅದಕ್ಕೆ ದುರ್ಜಯನು ತಿರಸ್ಕಾರದಿಂದ ನಕ್ಕು—"ರಾಜಪುತ್ರಾ, ಖುಸ್ರೂ, ನಾನು "ಆದರೆ" ಎಂದು ನುಡಿದು ಸುಮ್ಮನಾದದ್ದು ನಿನ್ನನ್ನು ಏನಾದರೂ ಪ್ರಾರ್ಥಿಸುವದಕ್ಕಾಗಿಯಲ್ಲ; ನೀನು ಕ್ಷುದ್ರನೆಂದು ನಿನ್ನ ಮುಂದೆ ಹೇಳಲಿಕ್ಕೆ ನನಗೆ ಸಂಕೋಚ ಉಂಟಾದದ್ದಕ್ಕಾಗಿಯೆಂದು ತಿಳಿದುಕೋ! ಅಲ್ಲೋ, ನಾಳೆ ನೀನು ದಿಲ್ಲಿಯ ಪಟ್ಟಕ್ಕೆ ಕುಳಿತು ಭರತಖಂಡದ ಬಾದಶಹನೆನಿಸಿಕೊಳ್ಳತಕ್ಕವನು, ಅಂಥವನು ನೀನು ನಿಶ್ಶಸ್ತ್ರನಾದ ನನ್ನನ್ನು ವಧಿಸಲು ಮುಂದುವರಿದೆಯಲ್ಲ? ಇದು ನಿನ್ನ ಕ್ಷುದ್ರತನವಲ್ಲದಿದ್ದರೆ ಮತ್ತೇನು? ನಿನ್ನ ತಾಯಿಯಾದ ಜೋಧಬಾಯಿಯ ದ್ವಾರದಿಂದ ನಿನ್ನ ದೇಹದಲ್ಲಿ ರಜಪೂತರ ರಕ್ತವು ಆಡುತ್ತಿರಲು, ನಿಶ್ಶಸ್ತ್ರ ಪ್ರತಿ

ಸ್ಪರ್ಧಿಯ ಮೇಲೆ ಶಸ್ತ್ರವೆತ್ತುವದು ಧರ್ಮವೆ? ಎತ್ತು ಎತ್ತು, ನಿನ್ನ ಖಡ್ಗವನ್ನೆತ್ತಿ ನನ್ನನ್ನು ಯಥೇಚ್ಛವಾಗಿ ಸಂಹರಿಸು! ನಿನ್ನಂಥ ಕ್ಷುದ್ರನಲ್ಲಿ ಏನಾದರೂ ಕೇಳಿಕೊಳ್ಳುವಷ್ಟು ಕ್ಷುದ್ರನು ನಾನಿರುವದಿಲ್ಲ.

ಒಬ್ಬ ಸಾಮಾನ್ಯ ರಜಪೂತನು ಈ ಮೆರೆಗೆ ತನ್ನನ್ನು ತಿರಸ್ಕರಿಸಿ ಮಾತಾಡುವದನ್ನು ಕೇಳಿ ಅಸಹಿಷ್ಣುವಾದ ಖುಸ್ರುವು ಕ್ರೋಧಸಂತಪ್ತನಾಗಿ ತನ್ನ ಖಡ್ಗವನ್ನು ಎತ್ತಿ—"ಎಲೈ ವಂಚಕನೇ, ನಿನ್ನ ಹೇಡಿತನವನ್ನು ಇಂಥ ಹುರುಳಿಲ್ಲದ ಪೌರುಷದ ಮಾತುಗಳನ್ನಾಡಿ ಮುಚ್ಚಿಕೊಳ್ಳುವೆಯಾ? ನನ್ನ ಕ್ಷುದ್ರತನವನ್ನು ತೋರಿಸುವದಕ್ಕಿಂತ ನಿನ್ನ ಹೇಡಿತನವನ್ನು ಬೈಲಿಗಿಟ್ಟಿದ್ದರೆ, ಅದಕ್ಕಾಗಿ ನಿನ್ನನ್ನು ನಾನು ಕ್ಷಮಿಸಿ ಬಿಡಬಹುದಾಗಿತ್ತು; ಆದರೆ ಮೋಸಗಾರನಾದ ನೀನು ಸರ್ವಥಾ ಕ್ಷಮೆಗೆ ಪಾತ್ರನಲ್ಲ. ನಿನ್ನನ್ನು ಜೀವದಿಂದರಗೊಟ್ಟರೆ ನನ್ನ ಘಾತವಾಗುವದು ನಿಶ್ಚಯವು. ನಾನು ವಿಚಾರಮಾಡದೆ ನಿನ್ನಂಥ ಹೇಡಿಯ ಮೇಲೆ ವಿಶ್ವಾಸವಿಟ್ಟು, ನನ್ನ ಮನಸ್ಸಿನೊಳಗಿನ ಮಾತನ್ನು ನಿನ್ನಮುಂದೆ ಹೇಳಿದೆನು; ಆದರೆ ನೀನು ವಿಶ್ವಾಸಕ್ಕೆ ಯೋಗ್ಯನಲ್ಲದ್ದರಿಂದ ನಿನ್ನ ಶಿರಸ್ಸನ್ನು ತುಂಡರಿಸುವದೇ ಯೋಗ್ಯವು" ಎಂದು ನುಡಿದು ಖುಸ್ರುವು ತನ್ನ ತೀಕ್ಷ್ಣಖಡ್ಗವನ್ನು ಎತ್ತಿ ದುರ್ಜಯನನ್ನು ತುಂಡರಿಸತಕ್ಕವನು, ಅಷ್ಟರಲ್ಲಿ ಯಾವಳೋ ಒಬ್ಬ ತರುಣ ಸುಂದರಿಯು ಖುಸ್ರುವಿನ ಖಡ್ಗವೆತ್ತಿದಕೈಯನ್ನು ತನ್ನ ಎರಡೂಕೈಗಳಿಂದ ಗಟ್ಟಿಯಾಗಿ ಹಿಡಿದಳು! ಆ ಸುಂದರಿಯ ಧೈರ್ಯ-ಸಾಹಸಗಳನ್ನು ನೋಡಿ ಖುಸ್ರುವು ಬೆರಗಾಗಿ ಆಕೆಯ ಅತ್ಯಂತ ಮನೋಹರವಾದ ರೂಪವನ್ನು ನೋಡುತ್ತ—"ಇವಳಾರು ಸೌಂದರ್ಯ ದೇವತೆಯು! ಈಕೆಯ ಕೋಮಲ ಹಸ್ತಗಳಲ್ಲಿ ಇಷ್ಟು ವಿಲಕ್ಷಣ ಸಾಮರ್ಥ್ಯವೇ! ರಜಪೂತ ವೀರರಿಗಿಂತ ರಜಪೂತ ಸ್ತ್ರೀಯರು ಹೆಚ್ಚು ಶೂರರಿರುವರೆಂಬದು ನಿಜವು!"

ಈ ಮೇರೆಗೆ ಖುಸ್ರುವು ಮನಸ್ಸಿನಲ್ಲಿ ಯೋಚಿಸುತ್ತಿರುವಾಗ, ಆತನ ತಾಯಿಯಾದ ಜೋಧಬಾಯಿಯ ಮೂರ್ತಿಯು ಆತನ ಕಣ್ಣಿಗೆ ಕಟ್ಟಿತು. ಮಾರವಾಡದ ವೀರ ರಜಪೂತನಾದ ಮಾನಸಿಂಹನ ತಂಗಿ ಆ ಜೋಧಬಾಯಿಯನ್ನು ಅಕಬರನ ಮಗ ಸಲೀಮನಿಗೆ ಕೊಟ್ಟಿತ್ತೆಂದು ಇತಿಹಾಸ ಬಲ್ಲವರಿಗೆ ಹೇಳಲವಶ್ಯವಿಲ್ಲ. ಖುಸ್ರುವು ಹೀಗೆ ಮನಸ್ಸಿನಲ್ಲಿ ಯೋಚಿಸುತ್ತ

ಸುಮ್ಮನೆ ನಿಂತಿರುವ ಸಂಧಿಯನ್ನು ಸಾಧಿಸಿ ಆ ತರುಣಿಯು ತನ್ನ ಟೊಂಕದಲ್ಲಿ ಅಲೆದಾಡುತ್ತಿರುವ ಖಡ್ಗವನ್ನು ಮುಂದಕ್ಕೆ ಚಾಚಿ ದುರ್ಜಯನನ್ನು ಕುರಿತು—"ಹಾ! ದುರ್ಜಯಾ, ಇನ್ನು ತಡಮಾಡಬೇಡ; ಇನ್ನು ನಿನ್ನ ಸರತಿಯು ಬಂದಿರುವದು. ಈಗ ನೀನು ಈ ಖಡ್ಗವನ್ನು ತಕ್ಕೊಂಡು ರಾಜಕುಲಕಲಂಕನಾದ ಈ ಶಹಾಜಾದಾನನ್ನು ತುಂಡರಿಸು. ಇಂಥ ಸಂಧಿಯು ಪುನಃ ಒದಗಿ ಬರಲಿಕ್ಕಿಲ್ಲ. ಇದರಿಂದ ಮೊಗಲ ಸಾಮ್ರಾಜ್ಯದಲ್ಲಿ ಉಂಟಾಗಿರುವ ಎರಡಿಟ್ಟು ನಷ್ಟವಾಗಿ ಹೋಗುವದು." ಎಂದು ನುಡಿದಳು; ಆದರೆ ಅದರಿಂದ ಖುಸ್ರುವಿನ ಚಿತ್ತವೃತ್ತಿಯು ಆ ಸುಂದರಿಯಿಂದೆತ್ತಲೂ ಚಲಿಸಲಿಲ್ಲ. ಆತನು ಆ ಮನಮೋಹಿನಿಯ ರೂಪವನ್ನು ಕಣ್ಣುಗಳಿಂದ ಹೀರಹತ್ತಿದನು. ಅಕಬರ ಬಾದಶಹನಂಥ ಘನವಂತನ ಮೊಮ್ಮಗನಾದರೂ ಆತನು ಈವರೆಗೆ ಅಂಥ ಮೋಹಕ ರೂಪವನ್ನು ನೋಡಿದ್ದಿಲ್ಲ. ಆ ತರುಣಿಯ ವಿಶಾಲ ನೇತ್ರಗಳನ್ನೂ, ಆಕೆಯ ಪೃಷ್ಠಭಾಗದ ಮೇಲೆ ಅಸ್ತವ್ಯಸ್ತವಾಗಿ ಪಸರಿಸಿರುವ ಕುಂತಲ ಭಾರವನ್ನೂ, ಭಾಲ ಪ್ರದೇಶದಲ್ಲಿ ಮುತ್ತುಗಳಂತೆ ಹೊಳೆಯುತ್ತಿರುವ ಬೆವರಹನಿಗಳನ್ನೂ, ವಿಜಯಶ್ರೀಯಿಂದ ಮಿನುಗುತ್ತಿರುವ ಆಕೆಯ ಮುಖಚಂದ್ರವನ್ನೂ ನೋಡಿ ಆ ತರುಣ ರಾಜಪುತ್ರನು ಹುಚ್ಚಾಗಿ, ಆತುರದಿಂದ ಆ ತರುಣಿಯನ್ನು ಕುರಿತು—"ಸುಂದರೀ, ನೀನು ಯಾರು" ಎಂದು ಪ್ರಶ್ನಮಾಡಿದನು.

ಶಹಾಜಾದಾನ ಮೇಲೆ ತನ್ನ ರೂಪದ ಪರಿಣಾಮವು ಈಪರಿ ಆದದ್ದಕ್ಕಾಗಿ ಆ ರಮಣಿಗೆ ಬಹಳ ಸಮಾಧಾನವಾಯಿತು. ಆಕೆಯು ತನ್ನ ತೇಜಃಪುಂಜ ನೇತ್ರಗಳಿಂದ ಕೆಲಹೊತ್ತು ಆತನನ್ನು ನೋಡುತ್ತ ನಿಂತು, ಆಮೇಲೆ ಮುಗುಳುನಗೆ ನಗುತ್ತ ಗಂಭೀರ ಸ್ವರದಿಂದ—"ನಾನು ಯಾರೆಂದು ಕೇಳುವಿರೋ, ರಾಜಪುತ್ರರೇ, ರಜಪೂತ ರಮಣಿಯರ ಗುರುತು ಅವರ ಕೃತಿಯಿಂದಲೇ ಆಗುತ್ತಿರುವದು. ಅವರು ತಮ್ಮ ಪ್ರೇಮ ಸರ್ವಸ್ವದ ಸಲುವಾಗಿ ಏನು ಮಾಡಿಯಾರೆಂಬದನ್ನು ಹೇಳಲಾಗುವದಿಲ್ಲ. ನಾನು ಈ ದುರ್ಜಯಸಿಂಹನ ವಾಗ್ದತ್ತ ವಧುವಾಗಿರುವೆನು. ಈತನೊಡನೆ ನನ್ನ ಲಗ್ನವಾಗಿರದಿದ್ದರೂ, ಈತನೇ ನನ್ನ ಪತಿಯಾಗತಕ್ಕವನೆಂದು ನಿಶ್ಚಯವಾಗಿರುವದರಿಂದ, ಇಂಥ ಪ್ರಸಂಗದಲ್ಲಿ ನನ್ನ ಪ್ರೇಮಸ್ಥಾನದ ರಕ್ಷಣ ಮಾಡುವದು

ನನ್ನ ಕರ್ತವ್ಯವಲ್ಲವೋ? ಆದ್ದರಿಂದ ಮಹಾರಾಜ, ನಾನು ತಮಗೆ ಇದಕ್ಕೂ ಹೆಚ್ಚಿಗೆ ಏನು ಹೇಳಲಿ? ನನ್ನ ಈ ವಾಗ್ದತ್ತ ಪತಿಯ ರಕ್ಷಣಕ್ಕಾಗಿ ನಾನು ನಿಮ್ಮೊಡನೆ ಕಾದಲು ಸಿದ್ಧಳಾಗಿದ್ದೇನೆ. ಅವರು ಮಾಡಿರುವ ಅಪ ರಾಧವು ನನ್ನದೆಂದು ತಿಳಿಯಿರಿ. ನಾನು ವೀರಪುತ್ರಿಯಾಗಿದ್ದು, ಮುಂದೆ ವೀರ ಪತ್ನಿಯಾಗತಕ್ಕವಳು. ನನ್ನ ಈ ಕಠಾರಿಯು ನನ್ನ ಹಾಗು ನನ್ನ ಪತಿಯ ಸಂರಕ್ಷಣದ ಸಾಧನವಾಗಿರುತ್ತದೆ, ಎಂದುನುಡಿದು ಆ ತರುಣಿಯು ತನ್ನ ಕಠಾರಿಯನ್ನು ತಕ್ಕೊಂಡು ಖುಸ್ರುವಿನೊಡನೆ ಕಾದಲು ಸಿದ್ಧಳಾಗಲು, ಆಕೆಯ ಕಣ್ಣುಗಳು ಕೆಂಪಡರಿದವು! ಅದನ್ನು ನೋಡಿ ಖುಸ್ರುವು ಆಶ್ಚ ರ್ಯದಿಂದ ಬೆಪ್ಪಾಗಿ ತನ್ನ ಮನಸ್ಸಿನಲ್ಲಿ—"ಧನ್ಯನು ಧನ್ಯನು! ಈ ದುರ್ಜ ಯಸಿಂಹನು ಪರಮ ಧನ್ಯನು! ದೇವ ದುರ್ಲಭಳಾದ ಇಂಥ ಸುಂದರ ತರುಣಿಯು ಈತನ ಸಲುವಾಗಿ ಹೀಗೆ ತನ್ನ ಪ್ರಾಣವನ್ನರ್ಪಿಸಲಿಕ್ಕೂ ಸಿದ್ಧ ಳಾಗಿರುವದರಿಂದ, ಈತನು ಪರಮ ಧನ್ಯನೇ ಸರಿ! ಆದರೆ ಈಗ ನಾನು ಮಾಡಲೇನು? ಸ್ತ್ರೀಯ ಮೇಲೆ ಶಸ್ತ್ರಹಿಡಿಯುವದೂ ಕಷ್ಟ; ನನ್ನ ಪ್ರಾಣ ರಕ್ಷಣದ ದೃಷ್ಟಿಯಿಂದ ಶಸ್ತ್ರಹಿಡಿಯದಿರುವದೂ ಕಷ್ಟ" ಎಂದು ಯೋಚಿಸು ತ್ತಿರಲು, ಆತನಿಗೊಂದು ಯುಕ್ತಿಯು ಹೊಳೆದು, ಆತನು ತನ್ನ ಖಡ್ಗವನ್ನು ಒರೆಗಾಣಿಸುತ್ತ ಆ ತರುಣಿಯನ್ನು ಕುರಿತು—"ಸುಂದರೀ, ನೀನು ನನ್ನನ್ನು ಸೋಲಿಸಿದೆಯೆಂದೇ ತಿಳಿದುಕೊಳ್ಳುವೆನು. ನಿನ್ನೊಡನೆ ಯುದ್ಧಮಾಡಿ ಜಯ ಶಾಲಿಯಾಗುವ ಇಚ್ಛೆಯು ನನಗಿರುವದಿಲ್ಲ; ಇಗೋ ನೋಡು, ಹೊರ ಟೆನು" ಎಂದು ನುಡಿದು ಗುಹೆಯ ದ್ವಾರದ ಕಡೆಗೆ ಸಾಗುತ್ತಿರಲು, ದುರ್ಜಯ ಸಿಂಹನು ಆತನನ್ನು ಅಡ್ಡಗಟ್ಟಿ ಕರ್ಕಶ ಧ್ವನಿಯಿಂದ— "ಖುಸ್ರು, ಎತ್ತ ಹೊರಟೆ? ಈ ನಿರ್ಜನ ಗುಹೆಯೊಳಗಿನ ಪ್ರಶಸ್ತ ಪ್ರದೇ ಶವು ರಕ್ತಪಾನಕ್ಕಾಗಿ ಆತುರಪಡುತ್ತಿರಲು, ನೀನು ಹೊರಟೆಯೆತ್ತ? ನನ್ನ ಈ ಮುರಕ ಖಡ್ಗವೇ ನನಗೆ ಕಾದಲಿಕ್ಕೆ ಸಾಕಾಗಿರುವದು. ನನ್ನ ಆಯುಷ್ಯ ವಿದ್ದರೆ ಈ ಮುರುಕ ಕತ್ತಿಯೇ ನನ್ನ ಪ್ರಾಣವನ್ನು ರಕ್ಷಿಸುವದು. ಹೋಗು, ರಜಪೂತ ಕನ್ಯೇ ಮಂದಾರಿನೀ, ಹೋಗು; ರಜಪೂತ ವೀರನ ಹೆಸರಿಗೆ ಕುಂದು ತರಬೇಡ. ಸ್ತ್ರೀಯ ಸಹಾಯದಿಂದ ಪ್ರಾಣರಕ್ಷಣ ಮಾಡಿಕೊಳ್ಳ ಲಿಕ್ಕೆ ಈ ದುರ್ಜಯನು ಇಚ್ಛಿಸುವದಿಲ್ಲ. ನನ್ನ ವಿಷಯದ ನಿನ್ನ ಉತ್ಕಟ

ಪ್ರೇಮವು ಈದಿನ ಚನ್ನಾಗಿ ಪ್ರಕಟವಾಯಿತು. ಹೋಗು, ನನ್ನ ಹೃದಯ ದೇವತೆಯೇ ಹೋಗು! ಎಂದಾದರೂ ನಾನು ನಿನ್ನನ್ನು ಅನಾದರದಿಂದ ನೋಡಿದ್ದರೆ ಅದಕ್ಕಾಗಿ ನನ್ನನ್ನು ಕ್ಷಮಿಸು. ನಿನ್ನ ಸಂಬಂಧದಿಂದ ನಾನು ಪರಮ ಭಾಗ್ಯಶಾಲಿಯು, ಇಂದು ನಾನು ಕುಮಾರ ಖುಸ್ರುವಿನ ಖಡ್ಗಕ್ಕೆ ತುತ್ತಾಗದೆ ಉಳಿದರೆ, ನನ್ನ ಈ ಹೃದಯವು ಮೊದಲು ನಿನ್ನ ಆಲಿಂಗನದಿಂದಲೇ ಪವಿತ್ರವಾದೀತು. ನನ್ನ ಮೇಲೆ ನಿನ್ನ ಭಕ್ತಿ ವಿಶ್ವಾಸಗಳಿದ್ದರೆ, ನಾನು ನಿನಗೆ ಪೂಜ್ಯನಾಗಿ ತೋರುತ್ತಿದ್ದರೆ ಇಲ್ಲಿಂದ ನೀನು ಈಗ ತಟ್ಟನೆ ಹೊರಟು ಹೋಗು ನೋಡೋಣ!"

ದುರ್ಜಯನ ಶೌರ್ಯವನ್ನು ಮಂದಾಕಿನಿಯು ಅರಿಯದವಳಿದ್ದಿಲ್ಲ; ಆದ್ದರಿಂದ ಆಕೆಯು ಪಿಟ್ಟೆಂದು ಮಾತಾಡದೆ ಮುಗುಳುನಗೆಯಿಂದ ದುರ್ಜಯನ ಕಡೆಗೆ ನೋಡುತ್ತ ಅಲ್ಲಿಂದ ಹೊರಟು ಹೋದಳು. ಇತ್ತ ಖುಸ್ರುವಿನ ಕಣ್ಣುಗಳು ಆ ಸುಂದರಿಯಲ್ಲಿ ನಟ್ಟು ಹೋಗಿದ್ದವು; ಮೊಗಲ ಬಾದಶಹನ ಜನಾನಖಾನೆಯಲ್ಲಿ ಸುಂದರ ತರುಣಿಯರಿಗೆ ಕೊರತೆಯಿದ್ದಿಲ್ಲ; ಆದರೆ ಅಲ್ಲಿಯ ಅತ್ಯಂತ ಸೌಂದರ್ಯಶಾಲಿನಿಯರಾದ ತರುಣಿಯರು ಮಂದಾಕಿನಿಯ ತೊತ್ತಾಗಲಿಕ್ಕೆ ತಕ್ಕವರೆಂದು ಖುಸ್ರುವು ತರ್ಕಿಸಿದನು. ಇನ್ನು ತನ್ನ ತಾಯಿಯಾದ ಜೋಧಬಾಯಿಯು ಮಂದಾಕಿನಿಗಿಂತಲೂ ಹೆಚ್ಚು ಸೌಂದರ್ಯಶಾಲಿನಿಯಾಗಿದ್ದದ್ದು ಖುಸ್ರುವಿನ ಮನಸ್ಸಿಗೆ ಹೊಳೆಯಿತು; ಮತ್ತು ತನ್ನ ತಾಯಿಯ ಮೇಲೆ ಖುಸ್ರುವಿನ ಶ್ರದ್ಧೆಯೂ ಉತ್ಕಟವಾದದ್ದಿತ್ತು; ಆದರೆ ಮಂದಾಕಿನಿಯನ್ನು ತಾಯಿಯೆಂದು ಭಾವಿಸುವ ಇಚ್ಛೆಯು ಖುಸ್ರುವಿಗೆ ಇದ್ದಿಲ್ಲ. ಆತನು ಮಂದಾಕಿನಿಯ ವಿಷಯವಾಗಿ ಬೇರೆ ಭಾವನೆಯನ್ನು ತಾಳಿದ್ದನು. ಈ ಸ್ಥಿತಿಯಲ್ಲಿ ಆ ಇಬ್ಬರು ವೀರರು ಸ್ತಬ್ಧವಾಗಿದ್ದರು. ಯಾರ ಮುಖದಿಂದಲೂ ಶಬ್ದಗಳು ಹೊರಡಲೊಲ್ಲವು. ಮೊದಲು ಯಾರು ಮಾತಾಡಬೇಕೆಂಬ ಎಣಿಕೆಯಲ್ಲಿ ಅವರು ಇದ್ದರು. ಆಗ ಎಂಟುತಾಸು ರಾತ್ರಿಯಾಗಿತ್ತು. ಹಚ್ಚಿ ಇಟ್ಟಿದ್ದ ದೀವಟಿಗೆಯು ಮೆಲ್ಲ ಮೆಲ್ಲನೆ ಆರುವಹಾದಿಯನ್ನು ಹಿಡಿದಿತ್ತು. ಮರಣೋನ್ಮುಖನಾದ ರೋಗಿಯು ಕ್ರಮವಾಗಿ ಕಾಂತಿಹೀನವಾಗುವಂತೆ ಆ ದೀವಟಿಗೆಯು ಮಂದ

ಪ್ರಕಾಶವನ್ನು ಹೊಂದತೊಡಗಿತ್ತು. ಈ ಸ್ಥಿತಿಯಲ್ಲಿ ದುರ್ಜಯನು ಶಾಂತತೆಯ ಭಂಗಮಾಡಿ ಖುಸ್ರುವನ್ನು ಕುರಿತು--

ದುರ್ಜಯ—ಖುಸ್ರೂ, ಪರಾಭವಪಟ್ಟಿದ್ದ ಈ ರಜಪೂತನು ಇನ್ನು ತನಗಾದ ಅವಮಾನವನ್ನು ಸಹಿಸಲಾರನು.

ಖುಸ್ರು—ದುರ್ಜಯಾ, ನಿನ್ನ ಪರಾಭವವೆಲ್ಲಿ ಆಗಿದೆ?

ದುರ್ಜಯ—ನನ್ನ ಪರಾಭವವಾಗಿರದಿದ್ದರೂ, ಖಡ್ಗವನ್ನು ಖಂಡಿಸಿದವರಿಗೆ ರಜಪೂತ ವೀರರು ಯಾವ ಪ್ರಾಯಶ್ಚಿತ್ತ ಕೊಡುವರೆಂಬದರಗೊತ್ತು ನಿನಗೆ ಆಗಬೇಕಾಗಿರುವದು. ಮೊಗಲ ವಂಶದವರಿಂದಾದ ಅಲ್ಪ ಅಪಮಾನವನ್ನೂ ನಾನು ಸಹಿಸಲಾರೆನು.

ಖುಸ್ರು—(ನಕ್ಕು) ಎಲಾ, ನೀನೊಬ್ಬನು ಸಹಿಸಲಿಕ್ಕಿಲ್ಲ; ಆದರೆ ಎಷ್ಟಾದರೂ ನೀವು ರಜಪೂತರು ನಮ್ಮ ಮಾಂಡಲಿಕರಿರುತ್ತೀರಿ. ನಿಮ್ಮ ಸರ್ವಶ್ರೇಷ್ಠನಾದ ರಾಣಾ ಪ್ರತಾಪಸಿಂಹನ ಖಡ್ಗದ ದೊಡ್ಡಿಸ್ತಿಕೆಯನ್ನು ನಮ್ಮ ಅಜ್ಜನಾದ ಅಕಬರ ಬಾದಶಹನೇ ಇಲ್ಲದಂತೆ ಮಾಡಿದನು. ನಾನು ನನ್ನ ತಂದೆಯ ಕೊಲೆಮಾಡಲು ಒಮ್ಮೆ ಅವಿಚಾರದಿಂದ ಸಿದ್ಧನಾಗಿದ್ದರೂ, ನನ್ನ ಆ ಪೂಜ್ಯ ತಂದೆಯು ಶೌರ್ಯ-ಧೈರ್ಯಗಳನ್ನು ಮರೆಯಲಾರೆನು. ನಿಮ್ಮ ಕೀರ್ತಿ-ದುಂದುಭಿಯ ಧ್ವನಿಯನ್ನು ಅಡಗಿಸಿಬಿಟ್ಟಿದ್ದ ನನ್ನ ಅಜ್ಜನಾದ ಅಕಬರ ಬಾದಶಹನೂ, ನನ್ನ ತಂದೆಯಾದ ಶಹಾಜಾದಾ ಸೇಲೀಮನೂ ಇನ್ನೂ ಜೀವದಿಂದಿರುವರು! ಆದ್ದರಿಂದ ರಜಪೂತರು ನೀವು ಇಲ್ಲದ ಪೌರುಷ ತೋರಿಸುವದು ಭೂಷಣವಲ್ಲ.

ದುರ್ಜಯ—ಕುಮಾರ, ಈ ದುರ್ಜಯನ ಮುಂದೆ ನಿಮ್ಮ ಮೊಗಲರ ದೊಡ್ಡಿಸ್ತನವನ್ನು ತೋರಿಸುವ ಗೊಡವಿಗೆ ಹೋಗಬೇಡ. ನಮ್ಮ ಪೂಜ್ಯ ರಾಣಾರವರಂಥ ರಜಪೂತ ವೀರವರರ ಕೀರ್ತಿ ಧ್ವನಿಯನ್ನು ಅಡಗಿಸುವದು ನಿಮ್ಮ ಅಜ್ಜನ ಅಥವಾ ತಂದೆಯ ಯೋಗ್ಯತೆಯಲ್ಲ. ನಮ್ಮ ಒಡೆಯರಾದ ಮಾನಸಿಂಹರವರ ಪುಣ್ಯದಿಂದಲೇ ಮೊಗಲರು ನೀವು ಈಗಿನ ಉತ್ಕರ್ಷ ಹೊಂದಿರುವಿರೆಂಬದನ್ನು ಮರೆಯಬೇಡಿರಿ. ನಾನು ಮಾನಸಿಂಹರವರ ಅಂಗರಕ್ಷಕನಾಗಿದ್ದರೂ, ಆದರಂತೆ ಅವರ ಅತುಲ ಪರಾಕ್ರಮದ ವಿಷಯವಾಗಿ ಪೂಜ್ಯ ಬುದ್ಧಿಯುಳ್ಳವನಾಗಿದ್ದರೂ ಅವರ ಸ್ವದೇಶದ್ರೋಹದ ಪಾತಕ

ವನ್ನು ಈಗ ಬಾಯಿಂದ ಉಚ್ಚರಿಸದೆ ಇರಲಾರೆನು. ನಮ್ಮ ಆ ಮಾನಸಿಂಹ ರವರ ಪ್ರತಾಪದ ದರ್ಪದಿಂದಲೇ ನಿಮ್ಮ ಅಜ್ಜನೂ-ತಂದೆಯೂ ಈಗಿನ ಸ್ಥಿತಿಯಲ್ಲಿ ಬದುಕಿ ಉಳಿದಿರುವರೆಂದು ತಿಳಿದುಕೋ." ಎಂದು ನುಡಿಯಲು, ಅದನ್ನು ಕೇಳಿ ಖುಸ್ರುವು ಅತ್ಯಂತ ಕ್ರುದ್ಧನಾದನು. ತನ್ನ ಗುರು ಜನರ ನಿಂದೆಯ ನುಡಿಗಳಿಂದ ಅವನ ವೈಮೋಲಿನ ಎಚ್ಚರ ತಪ್ಪುತ್ತಿರಲು, ಆತನು ದುರ್ಜಯನನ್ನು ಕುರಿತು--"ದುರ್ಜಯಾ, ಬಾಯಿಮುಚ್ಚು, ನಮ್ಮ ಹಿರಿಯರನ್ನು ಅವಮಾನಗೊಳಿಸಿದ ನೀನು ಇನ್ನು ಸತ್ತೆಯೆಂದು ತಿಳಿ." ಎಂದು ದುರ್ಜಯನ ಮೇಲೆ ದುಮುಕಿ ಹೋಗುತ್ತಿರಲು, ಅತ್ತ ದುರ್ಜಯನೂ ಖುಸ್ರುವನ್ನು ಕುರಿತು—"ತಂದೆಯು ಕೊಲೆಮಾಡಹೋದ ನಿನ್ನ ಪಿತೃಭಕ್ತಿಯು ನಾನು ಅರಿಯದ್ದಲ್ಲವೆ"ಂದು ನುಡಿಯುತ್ತ ಸಮರ ಸನ್ನದ್ಧನಾದನು. ಅದರೆ ಅಷ್ಟರಲ್ಲಿ ಯಾರೋ ಗಂಭೀರ ಧ್ವನಿಯಿಂದ—"ದುರ್ಜಯಾ, ನಿನ್ನ ಉದ್ಧಟತನವನ್ನು ಸಾಕುಮಾಡು!" "ರಾಜಕುಮಾರಾ, ನೀನು ಎಂಥ ದುರ್ದೈವಿಯೋ" ಎಂದು ಉಚ್ಚರಿಸಲು, ಆ ಇಬ್ಬರು ತರುಣ ವೀರರು ಬೆಪ್ಪಾಗಿ ಅತ್ತಿತ್ತ ನೋಡತೊಡಗಿದರು!



## ೨ ನೆಯ ಪ್ರಕರಣ

# " ನಮಾತುಃಪರದೈವತಂ "

ಹೀಗೆ ನುಡಿದ ಕರ್ಕಶ ಧ್ವನಿಯು ಗುಹೆಯನ್ನು ತುಂಬಿ ಹೊರಸೂಸುತ್ತಿರಲು ಅದರ ಗುರುತು ಆ ಇಬ್ಬರೂ ತರುಣರಿಗೂ ಹತ್ತಿ, ಅವರು ಭಯದಿಂದ ಮುಂದುಗಾಣದಾದರು. ಆ ಗಂಭೀರ ಧ್ವನಿಯು ಪ್ರತಿಧ್ವನಿಗಳು ಆ ಗುಹೆಯಲ್ಲಿ ಉಂಟಾದದ್ದರಿಂದ ಹಲವು ಜನರು ಅದೇ ಮಾತನ್ನು ಮತ್ತೆ ಮತ್ತೆ ಅಂದಂತಾಗಿ, ಆ ತರುಣರ ಮಸ್ತಕಗಳು ಭ್ರಮಿಸತೊಡಗಿದವು. ಅವರಲ್ಲಿ ಖುಸ್ರುವಿನ ದುರವಸ್ಥೆಯನ್ನಂತು ವರ್ಣಿಸಲಾಸಲ್ಲ. ಆ ಭಯಂ

ಕರವಾದ ಗುಹೆಯು ತನ್ನ ಕರಾಲವದನವನ್ನು ತೆರೆದು ತನ್ನನ್ನು ನುಂಗಬರು ವದೋ ಎನ್ನುವಹಾಗೆ ಆತನಿಗೆ ಆಯಿತು! ಅಲ್ಲಿ ಎಣ್ಣೆತೀರಿ ಶಾಂತವಾಗತೊಡಗಿದ್ದದೀವಟಿಗೆಯು ಒಮ್ಮೆಲೆ ದೊಡ್ಡದಾಗಿ ಗುಹೆಯ ಭಯಂಕರತೆಯನ್ನು ಮತ್ತಿಷ್ಟುಹೆಚ್ಚಿಸಿ, ಮತ್ತೆ ಮಂದಪ್ರಕಾಶಉಳ್ಳದ್ದಾಯಿತು. ಆ ಮಂದಪ್ರಕಾಶದಲ್ಲಿ ಅಕಸ್ಮಾತ್ತಾಗಿ ಬಂದ ಆ ಭೀಮಕಾಯದ ವ್ಯಕ್ತಿಯೂ, ಅದರ ಮುಖದಿಂದಹೊರಟಗಂಭೀರಧ್ವನಿಯೂ ಕುಮಾರನನ್ನು ಗದಗುಟ್ಟಿ ನಡುಗಿಸಿದವು! ಆ ನುಡಿಯ ಪ್ರತಿಧ್ವನಿಗಳಿಂದ ತನ್ನ ಕಿವಿಗಳು ಗಡಚಿಕ್ಕಿ ಕಿವುಡಾಗುವವೋ ಅನ್ನುವಹಾಗೆ ಆ ಕುಮಾರನಿಗೆ ತೋರಿತು: ಆದ್ದರಿಂದ ಪಿತೃದ್ರೋಹಿಯೂ, ಭಾವೀ ಮೊಗಲ ಬಾದಶಹನೂ, ಸದ್ಯಕ್ಕೆ ಅಂಬರಾಧೀಶ ಮಾನಸಿಂಹನ ಅಭ್ಯಾಗತನೂ ಆದ ಖುಸ್ರುವು ಮಂತ್ರಮುಗ್ಧನಂತೆ ಉಲುಕದೆ ಸುಮ್ಮನೆ ನಿಂತುಬಿಟ್ಟನು. ಆತನಿಗೆ ತನ್ನ ಜೀವನ ಶಕ್ತಿಗಳ ಲೋಪವಾಗುವಂತೆ ತೋರಿತು. ಆತನು ಉದ್ಭ್ರಾಂತನೇತ್ರಗಳಿಂದ ಆ ಬಂದ ವ್ಯಕ್ತಿಯನ್ನು ಎವೆಯಿಕ್ಕದೆ ನೋಡುತ್ತಿರುವಾಗ, ಆ ಸ್ವಭಾವ ಸುಂದರನಾದಖುಸ್ರುವಿನ ಮುಖದಲ್ಲಿ ಪ್ರೇತಕಳೆಯು ಸುರಿಯುತ್ತಿರುವಂತೆ ಆ ಮಂದ ಪ್ರಕಾಶದಲ್ಲಿ ತೋರುತ್ತಿತ್ತು; ಆದರೆ ಆ ಖುಸ್ರುವಿನ ಆ ದುರವಸ್ಥೆಯಲ್ಲಿ ಬಂದ ಆ ವ್ಯಕ್ತಿಯು ಸುಮ್ಮನೆ ನಿಂತುಕೊಳ್ಳುವ ಬಗೆಯೆತ್ತ? ಆ ವ್ಯಕ್ತಿಯು ಖುಸ್ರುವಿನ ಎದುರಿಗೆ ಬಂದು ಗಂಭೀರ ಧ್ವನಿಯಿಂದ—"ಖುಸ್ರೊ, ಇದೇನು ಸಮಾಚಾರವು?" ಎಂದು ಪ್ರಶ್ನೆ ಮಾಡಿದನು; ಆದರೂ ಖುಸ್ರುವಿನ ಮುಖದಿಂದ ಶಬ್ದಗಳು ಹೊರಡಲಿಲ್ಲ. ಆ ಪ್ರಶ್ನವು ಖುಸ್ರುವಿಗೆ ಪ್ರಲಯಕಾಲದ ಸಿಡಿಲಿನಂತೆ ತೋರಿ, ಅದರ ಆಘಾತದಿಂದ ಆತನ ವೀರ ಹೃದಯವು ಕಂಪಿಸತೊಡಗಿತು.

ಹೀಗೆ ಮಿಟ್ಟದೆ ಮಿಸುಕದೆ ಪಿಟ್ಟೆಂದು ಮಾತಾಡದೆ ಕಂಬದಂತೆ ನಿಂತುಬಿಟ್ಟಿರುವ ಖುಸ್ರುವನ್ನು ನೋಡಿ ಆ ವ್ಯಕ್ತಿಯು ಮತ್ತೆ ಗಂಭೀರ ಧ್ವನಿಯಿಂದ—"ಕುಮಾರಾ ಖುಸ್ರೊ! ಅಕಬರ ಬಾದಶಹನ ವಂಶವನ್ನು ಉಜ್ವಲವಾಗಿ ಮಾಡುವ ಕುಲದೀಪಕಖುಸ್ರುವು ನೀನೇಯೇನು? ನನ್ನ ಸಾವಿಗಾಗಿ ನೀನೇಕೆ ಇಷ್ಟು ಆತುರನಾದೆ? ನಿಜವಾಗಿ ನೀನು ದುರ್ದೈವಿಯಾಗಿದ್ದು, ಮನುಷ್ಯನ ಪರೀಕ್ಷೆಯು ನಿನಗೆ ಸರ್ವಥಾ ಆಗುವದಿಲ್ಲೆಂದು

ಅನ್ನಬೇಕಾಗುತ್ತದೆ. ಅಲ್ಲೋ, ನಿನ್ನ ಹಿತಕ್ಕಾಗಿ ನಾನು ಸರ್ವಸ್ವದ ತ್ಯಾಗಮಾಡಲು ಸಿದ್ಧನಾಗಿರುವಾಗ, ನೀನು ನನ್ನನ್ನು ಕೊಲ್ಲಲು ಸಿದ್ಧನಾಗಿರುವೆಯೆಂದಬಳಿಕ ಮಾತಾಡುವದಾದರೂ ಏನು? ಐಶ್ವರ್ಯ, ಮಾನ ಮರ್ಯಾದೆ, ಸಾಮ್ರಾಜ್ಯದ ಸೂತ್ರಗಳು ಇವೆಲ್ಲ ನನ್ನ ಕೈ ಸೇರಿದ್ದು, ಕೇವಲ ನಿನ್ನ ಹಿತದ ಸಲುವಾಗಿಯೇ ಅವನ್ನೆಲ್ಲ ನಾನು ಬಿಟ್ಟುಬಿಡುತ್ತಿರುವಾಗ, ನೀನು ನನಗೆ ಕೃತಜ್ಞನಾಗುವದು ಒತ್ತಟ್ಟಿಗುಳಿದು, ನನ್ನ ಪ್ರಾಣ ಹಿಂಡಲು ಹೊಂಚುಹಾಕಿರುವೆಯಾ? ಕುಮಾರಾ, ನನ್ನ ಮರಣದಿಂದ ನಿನ್ನ ಇಚ್ಛೆಯು ಪೂರ್ಣವಾಗುವಹಾಗಿದ್ದರೆ, ನನ್ನನ್ನು ಕೊಲ್ಲುವದಕ್ಕೆ ಅನ್ಯರಿಗೆ ಹೇಳುವದೇಕೆ? ಇಗೋ ನಾನೇ ನಿನ್ನಮುಂದೆ ಈಗ ಬಂದು ನಿಂತಿದ್ದೇನೆ, ಯಥೇಚ್ಛವಾಗಿ ನಿನ್ನ ಖಡ್ಗದಿಂದ ನನ್ನನ್ನು ನುಚ್ಚುನುಚ್ಚಾಗಿ ಕಡಿದು ಚಲ್ಲು.” ಹೀಗೆ ನುಡಿದು ಆ ವ್ಯಕ್ತಿಯು ಕ್ಷಣಮಾತ್ರ ಸುಮ್ಮನಿದ್ದು ಮತ್ತೆ ಖುಸ್ರುವನ್ನು ಕುರಿತು--“ಖುಸ್ರೂ, ನಿನ್ನ ಕಲ್ಯಾಣದ ಸಲುವಾಗಿ ಯತ್ನಿಸುವದರಿಂದಲೇ ನಾನು ಅಕಬರ ಬಾದಶಹರ ರೋಷಕ್ಕೆ ಪಾತ್ರನಾಗಿರುವೆನು. ಅದೇ ಕಾರಣದಿಂದಲೇ ನಿನ್ನ ತಂದೆಯಾದ ಶಹಾಜಾದಾ ಸಲೀಮನು ನನ್ನನ್ನು ವಕ್ರದೃಷ್ಟಿಯಿಂದ ನೋಡುತ್ತಿರುವನು! ನೀನಂತು ನನ್ನ ರಕ್ತ ಹೀರುವದಕ್ಕಾಗಿ ಹಸಿದು ಕಕ್ರಾಂತನಾಗಿರುವೆ! ಆದರೆ ಕುಮಾರಾ, ನನ್ನ ರಕ್ತ ಹೀರದೆ ನಿನ್ನ ಕಾರ್ಯವು ಸಾಧಿಸದ ಹಾಗಿದ್ದರೆ, ಇಗೋ, ಆಗಲೇ ಹೇಳಿದಂತೆ ನಾನು ನಿನ್ನ ಮುಂದೆ ನಿಂತುಬಿಟ್ಟಿದ್ದೇನೆ. ನಿನ್ನ ಸೋದರಮಾವನಾದ ಈ ಮಾನಸಿಂಹನ ಕಂಠನಾಲದ ರಕ್ತವನ್ನು ಈ ಗುಹೆಯಲ್ಲಿ ಚಲ್ಲಾಡಿಬಿಡು!

ಇಷ್ಟಾದರೂ ಖುಸ್ರುವಿನ ಮುಖದಿಂದ ಶಬ್ದಗಳು ಹೊರಡಲಿಲ್ಲವು. ಮಾನಸಿಂಹನ ಒಂದೊಂದು ಮಾತಿನಿಂದ ಆ ರಾಜಕುಮಾರನ ಹೃದಯಕ್ಕೆ ಒಂದೊಂದು ಬರೆ ಕೊಟ್ಟಂತಾಗುತ್ತಿತ್ತು. ಆತನು ನಾಚಿಕೆಯಿಂದ ಮೃತಪ್ರಾಯನಾದನು. ಇಂಥ ಪ್ರಸಂಗವು ಆತನ ಆಯುರ್ಮಾನದಲ್ಲಿ ಎಂದೂ ಬಂದಿದ್ದಿಲ್ಲ! ಇಂಥ ಆಕಸ್ಮಿಕವಾದ ಘೋರ ಪ್ರಸಂಗವು ಒದಗಿದ್ದರಿಂದ ಏನುಮಾಡಿದರೂ ಆತನ ಮುಖದಿಂದ ಶಬ್ದಗಳು ಹೊರಡದಾದವು. ಆಗ ಮಾನಸಿಂಹನು ಮತ್ತೆ ಖುಸ್ರುವನ್ನು ಕುರಿತು--“ನನ್ನ ಅಕ್ಕರೆಯ ಖುಸ್ರೂ!

ಬಾ, ಸುಮ್ಮನೆ ಯಾಕೆ ನಿಂತುಕೊಂಡೆ? ಮಾತಾಡು ಮಾತಾಡು! ನಿನ್ನ ಸೋದರಮಾವನಾದ ನನ್ನನ್ನು ಕೊಲ್ಲಲಿಕ್ಕೆ ಸಿದ್ಧನಾಗಿ ನಿಂತಿದ್ದ ನಿನಗೆ ಈ ಮೌನವೂ, ಕಾರ್ಯಹೀನತೆಯೂ ಒಪ್ಪುವದಿಲ್ಲ! ಇಂಥ ಸುಸಂಧಿಯು ನಿನಗೆ ಪುನಃ ಒದಗಿ ಬರಲಾರದು. ನಿನ್ನ ಹಿತಕ್ಕೆ ಅಡ್ಡಾಗಿರುವ ನನ್ನನ್ನು ಈ ಲೋಕದೊಳಗಿಂದ ಹೊರಡಿಸಿ ಬಿಡು! ನಿನ್ನ ಸಿಂಹಾಸನ ಪ್ರಾಪ್ತಿಯ ವಿಷಯದಲ್ಲಿ ನಾಲ್ಕೂ ಕಡೆಯಿಂದ ಉಂಟಾಗುತ್ತಿರುವ ಭಯಂಕರ ಸೊಂಟರ ಗಾಳಿಗಳ ಧೂಳಿಯು ನನ್ನ ರಕ್ತ ಸೇಚನದಿಂದ ನೆಲಕ್ಕೆ ಕೂಡುತ್ತಿದ್ದರೆ, ನನ್ನ ಸಂತೋಷದಿಂದಲೇ ನಾನು ನಿನಗೆ ನನ್ನ ರಕ್ತದಾನ ಮಾಡಲು ಸಿದ್ಧ ನಾಗಿರುವೆನು! ಖುಸ್ರೂ, ನಿನ್ನ ತಾಯಿಯನ್ನು ನಾನು ಇದೇ ದೇಹದಿಂ ದಲೇ ಎತ್ತಿ ಆಡಿಸಿರುವೆನು. ನೀನು ತೆಕ್ಕೆಬಿದ್ದು ಆಡಿ ಓಡಿ ದೊಡ್ಡವನಾದ ದ್ದಾದರೂ ಇದೇ ದೇಹದಿಂದಲೇ! ನಿನ್ನ ತಾಯಿಗೆ ನಾನು ಎದೆತಟ್ಟಿ— "ತಂಗೀ, ಜೋಧಾ, ಚಿಂತೆಮಾಡಬೇಡ. ನಿನ್ನ ಅಣ್ಣನು ನಾನು ಬದುಕಿ ರುವವರೆಗೆ ನಿನ್ನ ಮಗ ಖುಸ್ರುವಿನ ಕಲ್ಯಾಣಕ್ಕಾಗಿ ನನ್ನ ದೇಹದ ಪರವೆಯಿ ಲ್ಲದೆ ಯತ್ನಿಸುವೆನೆ"ಂದು ವಚನಕೊಟ್ಟಿರುವೆನು. ಅದರಂತೆ ನಿನ್ನ ಕಲ್ಯಾಣ ಮಾಡುವಾಗ ನನ್ನ ದೇಹಪಾತವಾದರೂ ಚಿಂತೆಯಿಲ್ಲ, ನನ್ನ ಅಕ್ಕರೆಯ ತಂಗಿಗೆ ಕೊಟ್ಟಿದ್ದ ವಚನವನ್ನು ಪಾಲಿಸಿ ಆಕೆಯ ಮನಸ್ಸನ್ನು ಸಂತೋಷ ಪಡಿಸುವೆನು; ಆದರೆ ಕೊಲೆಗಡಕನಾದ ನಿನ್ನ ಮುಂದೆ ಇವೆಲ್ಲ ಪುರಾಣ ಓದಿ ಕೊಳ್ಳುವದರಿಂದ ಪ್ರಯೋಜನವೇನು? ಖುಸ್ರೂ, ಹಿಡಿ, ನನ್ನ ಈ ವಜ್ರ ಮುಷ್ಟಿಯ ಖಡ್ಗವನ್ನು ನಿನ್ನ ಕೈಯಲ್ಲಿ ಕೊಡುವೆನು ತೆಗೆದುಕೋ! ಇಗೋ, ತಿವಿ ಇದರಿಂದ ನನ್ನ ಹೃದಯಕ್ಕೆ" ಎಂದು ನುಡಿದು, ಆ ಗುಹೆಯನ್ನು ಪ್ರಕಾಶಿತವಾಗಿ ಮಾಡುವ ತನ್ನ ರತ್ನಖಚಿತ ಖಡ್ಗವನ್ನು ಒರೆಯಿಂದ ಹಿರಿದು ಖುಸ್ರುವಿನ ಮುಂದೆ ಹಿಡಿದು—"ಇಗೋ, ಇದೇ, ನೋಡು ಈ ಖಡ್ಗವು! ತನ್ನ ಪ್ರಖರ ತೇಜಸ್ಸಿನಿಂದ ಈ ಕ್ಷುದ್ರ ಗುಹೆಯನ್ನು ಪ್ರಕಾಶಿತ ವಾಗಿ ಮಾಡುವ ನನ್ನ ಈ ಅಸಿಲತೆಯನ್ನು ನಿನ್ನ ಅಜ್ಜ ಅಕಬರನು, ನಾನು ಚಿತ್ತೂರನ್ನು ಗೆದ್ದು, ನಿನ್ನ ಅಜ್ಜನ ಸಾರ್ವಭೌಮತ್ವವನ್ನು ಅಬಾಧಿತವಾಗಿ ಮಾಡಿದ್ದಕ್ಕಾಗಿ ನನಗೆ ಉಚಿತವಾಗಿ ಕೊಟ್ಟಿರುವನು! ಸ್ವಜನದ್ರೋಹ, ಸ್ವದೇಶ ದ್ರೋಹಗಳನ್ನು ಮಾಡಿ ಸಂಪಾದಿಸಿದ ಈ ಅಸಿ ಪತ್ರದಿಂದ ನಾನು

ದೇಶದ್ರೋಹದ, ಹಾಗು ಸ್ವದೇಶಬಂಧು ದ್ರೋಹದ ಕಾರ್ಯಗಳನ್ನು ಒಂದೆರಡೆಂದು ಹೇಳಲಾಗುವದಿಲ್ಲ! ಸ್ವಾತಂತ್ರ್ಯ ಪ್ರಿಯರಾದ ನಮ್ಮ ರಜಪೂತ ವೀರರನ್ನು ಒಬ್ಬೊಬ್ಬರನ್ನಾಗಿ ನಿಮ್ಮ ಅಜ್ಜನಿಗೆ ಅಂಕಿತರಾಗವಾಡಿದ್ದು ಇದೇ ಖಡ್ಗದ ದರ್ಪದಿಂದಲೇ; ನಿನ್ನ ತಂದೆ ಸೇಲೀಮುನನ್ನು ಮುಂದೆಮಾಡಿ ವೀರವರ ಪೂಜ್ಯ ರಾಣಾ ಪ್ರತಾಪಸಿಂಹನನ್ನು ಸ್ವದೇಶಭ್ರಷ್ಟವಾಗಮಾಡಿದ್ದು ಈ ಖಡ್ಗದ ತೀಕ್ಷ್ಣಧಾರೆಯ ಬಲದಿಂದಲೇ; ಪ್ರಿಯ ಸೋದರಳಿಯಾ ಖುಸ್ರು, ಬಂಗಾಲ ಪ್ರಾಂತದ ವೀರಪಠಾಣರನ್ನು ಹೊಡೆದೋಡಿಸಿ ಆ ಪ್ರಾಂತವನ್ನು ನಿನ್ನ ಅಜ್ಜನ ಸಾರ್ವಭೌಮತ್ವಕ್ಕೆ ಒಳಪಡಿಸಿದ್ದು ಇವೇ ಖಡ್ಗದ ಪ್ರಖರ ಕಾಂತಿಯ ದರ್ಪದಿಂದಲೇ! ಆದರೆ ಆ ಹಿಂದಿನ ಸಂಗತಿಗಳನ್ನೆಲ್ಲ ತಕ್ಕೊಂಡು ಮಾಡುವದೇನೆಂದು ನೀನು ಅನ್ನುತ್ತಿದ್ದರೆ, ವಿಷಯಲಂಪಟನಾದ ನಿನ್ನ ತಂದೆ ಸೇಲೀಮುನ–ನನ್ನ ಬೀಗ ಅಕಬರ ಪುತ್ರನ–ನನ್ನ ತಂಗಿಯಗಂಡ ಶಹಾಜಾದಾನ ಹಕ್ಕು ಹಾರಿಸಿ ನಿನ್ನನ್ನು ದಿಲ್ಲಿಯ ಬಾದಶಾಹೀ ಸಿಂಹಾಸನದ ಮೇಲೆ ಏರಿಸಬೇಕೆಂದು ಈಗ ನಾನು ಯತ್ನಿಸುತ್ತಿರುವದಾದರೂ ಈ ತೀಕ್ಷ್ಣ ಖಡ್ಗದ ಬಲದಿಂದಲೇ; ಆದರೆ ನನ್ನ ಪ್ರಿಯಖುಸ್ರೂ, ಸ್ವದೇಶದ್ರೋಹಿಯೂ, ಸ್ವಜನದ್ರೋಹಿಯೂ ಆಗಿರುವ ನಾನು, ಸ್ವಜನರ ರಕ್ತದಿಂದ ದೂಷಿತವಾಗಿರುವ ಈ ಖಡ್ಗದಿಂದ ಯಾವ ಮಹತ್ಕಾರ್ಯ ಮಾಡಿದರೂ, ಆದರಿಂದ ನನಗೆ ಪಶ್ಚಾತ್ತಾಪವಾಗಿ ಈ ಖಡ್ಗವನ್ನೂ, ಅದರೊಡನೆ ನನ್ನ ಈ ಕಲಂಕಿತ ದೇಹವನ್ನೂ ತ್ಯಜಿಸಲು ಇಚ್ಛಿಸುವ ಪ್ರಸಂಗವು ಈಗ ನನಗೆ ಬಂದೊದಗಿದಂತಾಗಿರುತ್ತದೆ. ಇನ್ನು ಈ ಖಡ್ಗವನ್ನು ಕೈಯಲ್ಲಿ ಹಿಡಿಯಲಾರೆನು, ಭೂಮಿಗೆ ಭಾರಭೂತವಾದ ಈ ದೇಹವನು ಇನ್ನು ಇಡಲಾರೆನು! ಹಿಡಿ, ಈ ಖಡ್ಗವನ್ನು ಹಿಡಿ. ಸ್ವಜನದ್ರೋಹದಿಂದ ಈ ಖಡ್ಗಕ್ಕೆ ತಗಲಿದ ಕಲಂಕವನ್ನು ನನ್ನ ರಕ್ತದಿಂದ ಕೈಮುಟ್ಟಿ ತೊಳೆದುಬಿಡು; ಅಷ್ಟಕ್ಕಾಗಿ ನೀನು ದುರ್ಜಯಸಿಂಹನನ್ನು ಪ್ರಾರ್ಥಿಸುವದೇಕೆ?

ಮಾನಸಿಂಹನ ಅಂಗರಕ್ಷಕನಾದ ದುರ್ಜಯಸಿಂಹನು ಇಷ್ಟು ಹೊತ್ತಿನವರೆಗೆ ಮಾನಸಿಂಹನ ಮಾತುಗಳನ್ನು ಕೇಳುತ್ತ ಮೂಢನಂತೆ ಸುಮ್ಮನೆ ನಿಂತುಬಿಟ್ಟಿದ್ದನು; ಆದರೆ ಮಾನಸಿಂಹನು ತನ್ನ ಖಡ್ಗವನ್ನು ತನ್ನ ಶತ್ರುವಾಗಿದ್ದ ಖುಸ್ರುವಿಗೆ ಕೊಡಹೋಗಿ ಗಂಡಾಂತರಕ್ಕೆ ಗುರಿಯಾಗುವದನ್ನು

ನೋಡಿ ತನ್ನ ಕರ್ತವ್ಯವನ್ನು ಸ್ಮರಿಸಿ ಮುಂದಕ್ಕೆ ಬಂದು ಮಾನಸಿಂಹನನ್ನು ಕುರಿತು ಮಂದಸ್ವರದಿಂದ—“ಸ್ವಾಮಿನ್, ಇದೇನು ಮಾಡುವಿರಿ! ತಾವು ತಮ್ಮ ಖಡ್ಗದ ಪರಿತ್ಯಾಗವನ್ನು ತಮ್ಮ ಶತ್ರುವಿನ ಮುಂದೆ ಮಾಡಬಹುದೆ?” ಎಂದು ನುಡಿಯುತ್ತಿರಲು, ಈ ಅಧಿಕ ಪ್ರಸಂಗಕ್ಕಾಗಿ ಮಾನಸಿಂಗನ ಕಣ್ಣುಗಳು ಕೆಂಡದಂತಾದವು. ಆತನು ಸಿಟ್ಟಿನಿಂದ ದುರ್ಜಯಸಿಂಹನನ್ನು ನೋಡುತ್ತ—“ದುರ್ಜಯ, ದೂರ ಸರಿದುನಿಲ್ಲು. ನೀನು ನಿನ್ನ ಯೋಗ್ಯತೆಯ ಅತಿಕ್ರಮಣ ಮಾಡಿದೆ. ನನ್ನ ಅಪ್ಪಣೆಯ ಹೊರತು ಮಾತಾಡುವ ಅಧಿಕಾರವು ನಿನಗಿಲ್ಲೆಂಬದನ್ನು ನೆನಪಿನಲ್ಲಿಡು. ಸ್ವಲ್ಪ ಹೊತ್ತಿನ ಹಿಂದೆ ನನ್ನ ಪ್ರಿಯ ಸೋದರಳಿಯನ ಮೇಲೆ ನೀನು ಶಸ್ತ್ರವನ್ನು ಎತ್ತಿದ್ದೆ! ಶಹಾಜಾದಾ ಖುಸ್ರುವನ್ನು ಕೊಲ್ಲಲು ನೀನು ನಿಶ್ಚಯಿಸಿದ್ದೆ. ಇದು ನಿನ್ನ ಯೋಗ್ಯತೆಯ ಅತಿಕ್ರಮಣವಲ್ಲದೆ ಮತ್ತೇನು? ನಡೆ, ಗುಹೆಯೊಳಗಿಂದ ಹೊರಟು ನಡೆ. ಇಲ್ಲಿ ನೀನು ನಿಲ್ಲುವ ಕಾರಣವಿಲ್ಲ. ಒಂದು ಕ್ಷಣ ನೀನು ಇಲ್ಲಿ ನಿಂತರೆ ನೀನು ನನ್ನ ಶತ್ರುವೆಂದು ತಿಳಿದು, ಕುಮಾರ ಖುಸ್ರುವಿನಿಂದಾಗದೆಯಿದ್ದ ಕಾರ್ಯವನ್ನು ನಾನು ಮಾಡಿಬಿಡುವೆನು! ನಾನು ಮರೆಗೆನಿಂತು ನಿಮ್ಮ ಎಲ್ಲ ಆಟವನ್ನು ನೋಡಿದ್ದೇನೆ.

ಈ ಮೇರೆಗೆ ನುಡಿದ ಮಾನಸಿಂಹನ ನುಡಿಗಳನ್ನು ಕೇಳಿ ದುರ್ಜಯಸಿಂಹನು ಅವಮಾನಿತನಾಗಿ ಬಾಡಿದ ಮೋರೆಯಿಂದ ಒಂದು ಶಬ್ದವನ್ನೂ ನುಡಿಯದೆ ಗುಹೆಯಿಂದ ಹೊರಟು ಹೋದನು. ಹೋಗುವಾಗ ಆತನು ಮಾನಸಿಂಹನನ್ನುದ್ದೇಶಿಸಿ ಮನಸ್ಸಿನಲ್ಲಿ—“ಮಹಾರಾಜ, ನನ್ನನ್ನು ಹೀಗೇಕೆ ತಿರಸ್ಕರಿಸುವಿರಿ? ನಾನು ತಮ್ಮ ದಾಸಾನುದಾಸನಿರುತ್ತೇನೆ. ನಾನು ಯಾವಾಗಲೂ ತಮ್ಮ ಕಲ್ಯಾಣವನ್ನೇ ಚಿಂತಿಸುತ್ತಿರುವೆನು. ಈವರೆಗೆ ನಾನು ತಮ್ಮ ಖಡ್ಗದ ಸಾಮರ್ಥ್ಯವನ್ನು ಮಾತ್ರ ನೋಡುತ್ತ ಬಂದಿದ್ದೆನು; ಆದರೆ ತಮ್ಮ ಕರ್ತವ್ಯ ಕಠೋರ ಹೃದಯದಲ್ಲಿ ವಾತ್ಸಲ್ಯ-ಪ್ರೇಮಗಳು ಸಂಪೂರ್ಣವಾಗಿ ವಾಸಿಸುತ್ತಿರುವವೆಂಬದಾಗಿ ಇಂದು ಮನಗಂಡೆನು. ಇಲ್ಲದಿದ್ದರೆ ಪ್ರತ್ಯಕ್ಷ ನಿಮ್ಮ ಪ್ರಾಣಹರಣ ಮಾಡಲು ಸಿದ್ಧನಾಗಿದ್ದ ಖುಸ್ರುವಿನ ಅಪರಾಧವನ್ನು ಕ್ಷಮಿಸಿ ಆತನ ಮೇಲೆ ಈ ಪರಿ ವಾತ್ಸಲ್ಯ-ಪ್ರೇಮಗಳನ್ನು ಹೇಗೆ ಮಾಡುತ್ತಿದ್ದಿರಿ? ಆದರೆ ಪ್ರಭುಗಳೇ, ನನ್ನ ಮೇಲೆ ಮಾತ್ರ ತಾವು

ಕಾರಣವಿಲ್ಲದೆ ಸಿಟ್ಟಾದಿರಿ. ತಮ್ಮ ಸೇವಕನಾದ ಈ ದುರ್ಜಯ ಸಿಂಹನು ಅವಿಚಾರಿಯಲ್ಲ. ಆತನ ಸ್ವಾಮಿನಿಷ್ಠೆಯು ಶ್ರೇಷ್ಠತರದ್ದಾಗಿರುವದು. ತನ್ನ ಪ್ರಭುವಿನ ಪ್ರಾಣಹರಣ ಮಾಡುವವನ ಪ್ರಾಣವನ್ನು ಹಿಂಡಲು ದುರ್ಜಯನು ಹಿಂದೆ ಮುಂದೆ ನೋಡತಕ್ಕವನಲ್ಲ. ತನ್ನ ಪ್ರಭುವಿನ ಆಯುಷ್ಯವನ್ನು ಹೆಚ್ಚಿಸುವದಕ್ಕಾಗಿಯೇ ಆ ಏಕನಿಷ್ಠ ಸೇವಕನು ಹೆಣಗುತ್ತಿದ್ದನು. ಹಾಗಲ್ಲದಿದ್ದರೆ ಕುಮಾರನ ಮೇಲೆ ಶಸ್ತ್ರವೆತ್ತಲು ಆತನಿಗೆ ಕಾರಣವೇನು? ಆಗಲಿ, ಪ್ರಭುವಿನ ಕ್ರೋಧವು ಈ ದುರ್ಜಯನ ಕ್ಷೋಭಕ್ಕೆ ಎಂದೂ ಕಾರಣವಾಗದು." ಎಂದು ಅಂದುಕೊಳ್ಳುತ್ತ ಅಸಮಾಧಾನದಿಂದ ತಳಮಳಿಸುತ್ತ ಅಭಿಮಾನಿಯಾದ ದುರ್ಜಯಸಿಂಹನು ಗುಹೆಯಿಂದ ದೂರಕ್ಕೆ ಹೋದನು; ಆದರೆ ಆತನ ಮನಸ್ಸಿಗೆ ಏನೋ ಹೊಳೆದು ಮತ್ತೆ ಆತನು ಗುಹೆಯ ಬಾಗಿಲಿಗೆ ಬಂದು ಸುಮ್ಮನೆ ನಿಂತುಕೊಂಡನು.

ಇತ್ತ ಖುಸ್ರುವಿನ ಸ್ಥಿತಿಯು ವಿಲಕ್ಷಣವಾಗಿತ್ತು. ಮಾನಸಿಂಹನ ಮಾತುಗಳಿಂದ ಆ ರಾಜಪುತ್ರನ ಸ್ವಭಾವಸಿದ್ಧ ಕೋಮಲ ಹೃದಯವು ಕರಗಿ ಹೋಗಿ, ಆತನ ಮೊದಲಿನ ಘಾತಕ ವಿಚಾರಗಳೆಲ್ಲ ಅಳಿದು ಹೋಗಿದ್ದವು. ತನ್ನ ದುರಾಲೋಚನೆಯ ಕೃತಿಗಳೆಲ್ಲ ತನ್ನ ಮಾವನಾದ ಮಾನಸಿಂಹನಿಗೆ ಗೊತ್ತಾಗಿದ್ದು, ಆದಕ್ಕಾಗಿ ಆ ಕ್ಷತ್ರಿಯ ವೀರ ಶಿಖಾಮಣಿಯು ತನ್ನ ಕಠೋರ ಹೃದಯಕ್ಕನುಸರಿಸಿ ತನ್ನನ್ನು ದಂಡಿಸದೆ, ವಾತ್ಸಲ್ಯದಿಂದ ತನ್ನನ್ನು ಎಚ್ಚರಗೊಳಿಸುತ್ತಿರುವದನ್ನು ನೋಡಿ ಆ ಉದಾರ ಹೃದಯದ ಖುಸ್ರುವಿನ ನೇತ್ರಗಳು ಅಶ್ರುಪೂರ್ಣವಾಗಿ ಕಣ್ಣೀರ ಬಿಸಿ ಹನಿಗಳು ಭೂಮಿಯಮೇಲೆ ಉದುರಹತ್ತಿದವು. ಅದನ್ನು ನೋಡಿ ಮಾನಸಿಂಹನ ಮತ್ಸರ-ಕಠೋರ ಹೃದಯವು ವಾತ್ಸಲ್ಯಮಯವಾಯಿತು. ಶಹಾಜಾದಾನಿಗೆ ತನ್ನ ದುಷ್ಕರ್ಮದ ಪಶ್ಚಾತ್ತಾಪವಾಗಿರುವದು ಆ ರಜಪೂತ ವೀರನಿಗೆ ಸ್ಪಷ್ಟವಾಗಿ ತೋರಿತು. ಇನ್ನು ಉಪೇಕ್ಷಿಸುವದು ಯೋಗ್ಯವಲ್ಲವೆಂದು ತಿಳಿದು ಆತನು ಅಳಿಯನನ್ನು ತಬ್ಬಿಕೊಂಡು ಎದೆಗವಚಿ ಪ್ರೇಮಭರದಲ್ಲಿ ಆತನನ್ನು ಚುಂಬಿಸಿದನು. ಈಗಂತು ಖುಸ್ರುವಿನ ದುಃಖವು ಒತ್ತರಿಸಿ ಆತನು ಬಿಕ್ಕಿಬಿಕ್ಕಿ ಅಳುತ್ತ ಮಾವನ ಚರಣಗಳ ಮೇಲೆ ಮಸ್ತಕವಿಟ್ಟು—"ಮಾಮಾಸಾಹೇಬ, ನನ್ನನ್ನು ಕ್ಷಮಿಸಿರಿ. ನಾನು ಅತ್ಯಂತ ನೀಚನೂ, ಪಾಪಿಯೂ

ಆಗಿರುವೆನು. ನಾನು ರಾಜಸ್ಥಾನದೊಳಗಿನ ಒಬ್ಬ ಪವಿತ್ರ ಸ್ತ್ರೀಯ ಹೊಟ್ಟೆಯಲ್ಲಿ ಹುಟ್ಟಿ, ಆಕೆಯನ್ನು ವ್ಯರ್ಥವಾಗಿ ದಣಿಸಿದೆನು! ಹಾಯ್! ನಾನು ಎಂಥ ಘೋರ ಪಾಪ ಮಾಡುತ್ತಿದ್ದೆನಲ್ಲ! ಮಾವಾ, ನನ್ನನ್ನು ತಾವು ಕ್ಷಮಿಸಿದಿರೇನು?

ಅಳಿಯನ ಈ ಪಶ್ಚಾತ್ತಾಪದ ಮಾತುಗಳನ್ನು ಕೇಳಿ ಮಾನಸಿಂಹನು ಆತನ ಎರಡೂ ಕೈಗಳನ್ನು ಹಿಡಿದು ಸ್ನೇಹಯುಕ್ತವಾದ ಗಂಭೀರ ಧ್ವನಿಯಿಂದ—"ಕುಮಾರಾ, ನಿಜವಾಗಿಯೇ ನೀನು ದುರ್ದೈವಿಯು! ನಿನ್ನ ಭವಿಷ್ಯಕಾಲದ ಭಯಂಕರ ಸ್ವರೂಪದ ನೆರಳೂ ನಿನ್ನ ಕಣ್ಣಿಗೆ ಇನ್ನೂ ಬಿದ್ದಿರುವದಿಲ್ಲ. ಖುಸ್ರೂ, ನಿನ್ನ ಅದೃಷ್ಟಾಕಾಶದಲ್ಲಿ ಸಂಚರಿಸುತ್ತಿರುವ ಭೀಕರ ಕರಿಯ ಮೋಡಗಳನ್ನು ನೀನು ಅರಿಯೇ ಅರಿಯೇ! ಪಾಪ! ನಿನಗೆ ಅವುಗಳ ಪರಿಜ್ಞಾನವಾಗುವದು ಶಕ್ಯವೇ ಇಲ್ಲ. ನನ್ನ ಹೃದಯದಲ್ಲಿರುವ ನಿನ್ನವಿಷಯದ ಆಶಾ–ಸ್ನೇಹಗಳ ಪರಿಮಿತಿಯ ಕಲ್ಪನೆಯೂ ನಿನಗಿರುವದಿಲ್ಲ. ನಿನ್ನಂಥ ಉಲಕೋಚಿ ಸ್ವಭಾವದ ಸ್ವಚ್ಛಂದವೃತ್ತಿಯ ತರುಣನಿಗೆ ಅದರ ಕಲ್ಪನೆಯಾದರೂ ಹೇಗಾಗಬೇಕು? ಮೊಗಲ ರಾಜ್ಯದ ಸದ್ಯದ ದರ್ಬಾರವೆಂದರೆ ಚಕ್ರವ್ಯೂಹವೆಂದು ತಿಳಿ. ಆ ಚಕ್ರವ್ಯೂಹದೊಳಗಿಂದ ನಿನ್ನ ಸಂರಕ್ಷಣವನ್ನು ನಾನು ಯಥಾಶಕ್ತಿ ಮಾಡುತ್ತಿರುವೆನು; ಆದರೆ ನಿನ್ನ ದೈವದಲ್ಲೇನಿರುವದೋ ಯಾರಿಗೆ ಗೊತ್ತು! ನನ್ನ ತಂಗಿಯಾದ ಜೋಧಬಾಯಿಯ ದೀನವದನವನ್ನು ನೋಡಿ ನನಗೆ ಕನಿಕರ ಹುಟ್ಟಿ ನಿನ್ನನ್ನು ನನ್ನ ಬೆನ್ನಿಗೆ ಹಾಕಿಕೊಂಡಿದ್ದೇನೆ. ಇದರ ಕಾಲಲ್ಲಿ ಸರ್ವಸ್ವವನ್ನೂ ಕಳೆದುಕೊಳ್ಳಲಿಕ್ಕೆ ನಾನು ಸಿದ್ಧನಾಗಿದ್ದೇನೆ; ಆದರೆ ಮೂಢಮನದ ಖುಸ್ರೂ, ಇದನ್ನಾವದನ್ನೂ ಮನಸ್ಸಿನಲ್ಲಿ ತಾರದೆ ನನ್ನ ಪ್ರಾಣಹರಣ ಮಾಡಲು ಸಿದ್ಧನಾಗಿರುವೆ! ಇಂದಿಲ್ಲನಾಳೆಯಾದರೂ ನನ್ನ ಪರೀಕ್ಷೆಯು ನಿನಗೆ ಆದೀತು; ನನ್ನ ಬೆಂಬಲವಿಲ್ಲದಿದ್ದರೆ ನಿನ್ನ ಗತಿಯೇನಾಗುತ್ತಿತ್ತೆಂಬದಾದರೂ ನಿನ್ನ ಮನಸ್ಸಿಗೆ ಹೊಳೆದೀತು; ಆದರೆ ಅಂಥ ಪರೀಕ್ಷೆಯ ಪ್ರಸಂಗವು ಬರಬೇಕೆಂದು ನಾನು ಇಚ್ಛಿವದಿಲ್ಲ; ಯಾಕಂದರೆ ನನ್ನವಿಷಯವಾಗಿ ನಿನಗೆ ಸಂಶಯವು ಉತ್ಪನ್ನವಾಗವಂತಹ ನಡತೆಯು ನನ್ನದಿರುವದೇ ಇಲ್ಲ. ಚಿತ್ತೂರ ಕೋಟೆಯನ್ನು ಕೈಸೇರಿಸಿಕೊಳ್ಳುವ, ಹಾಗು ಮಹಾರಾಣಾ ಪ್ರತಾಪಸಿಂಹನನ್ನು ದೇಶಭ್ರಷ್ಟ

ವಾಗಮಾಡುವ ಕಾಲದಲ್ಲಿಯೇ ನಾನು ನನ್ನ ಪ್ರಾಮಾಣಿಕತನವನ್ನೂ, ಮಾನ–ಮರ್ಯಾದೆಗಳನ್ನೂ ಕಳೆದುಕೊಂಡು ಕುಳಿತಿದ್ದೇನೆ. ಆ ಕಳೆದು ಹೋಗಿದ್ದ ನನ್ನ ಗೌರವವನ್ನು ನಾನು ಆಜನ್ಮ ಸಂಪಾದಿಸಲಾರೆನು. ಖುಸ್ರೂ, ಇಲ್ಲಪ್ಪಾ, ಇದರಲ್ಲಿ ನಿನ್ನ ಅಪರಾಧವೇನೂ ಇರುವದಿಲ್ಲ. ಇದೆಲ್ಲ ನನ್ನ ವೈಷಯಿಕ ಲಾಭೇಚ್ಛೆಯ ದೋಷವಾಗಿದೆ! ಅಂಥ ದೋಷದಿಂದ ಪರಿಪುಷ್ಟವಾಗಿ ತೋರುತ್ತಿರುವ ನನ್ನ ಐಶ್ವರ್ಯ–ಮಾನಗಳಿಂದ ಅಲಂಕೃತವಾದ ಹೇಯ ಸಂಸಾರದ ಸುಖವನ್ನು ನಾನು ಉಣ್ಣುತ್ತಿರುವೆನು. ತಮ್ಮಾ, ನೀನು ಇನ್ನೂ ಕೂಸು! ನನ್ನಹಾಗೆ ದ್ರೋಹಗಳ ಮಾಲಿಕೆಯಿಂದ ಸಂಸಾರದ ಸುಖವನ್ನು ಹೆಚ್ಚಿಸಹೋದ ಪಾಮರ ಜೀವಿಗಳು ಯಾರಿದ್ದರೂ ನನ್ನ ಹಾಗೆಯೇ ಸಂಸಾರಸುಖವನ್ನು ಎರಡೂ ಕೈಗಳಿಂದ ಉಣ್ಣುವರೆಂಬದನ್ನು ನೀನೇನು ಬಲ್ಲೆ? ಮಂದಿಯ ಕಣ್ಣು ಕುಕ್ಕಿ, ನೋಡಲಿಕ್ಕೆ ಮಾತ್ರ ಮನೋಹರವಾಗಿರುವ ನಮ್ಮಂಥವರ ಸಂಸಾರದ ಸುಖವು ದುಃಖರೂಪವಾಗಿದ್ದು, ಅದು ಅಂತಃಕರಣವನ್ನು ಹೇಗೆ ಸುಡುತ್ತಿರುವದೆಂಬದು ನಿನಗೆ ಹೇಗೆ ಗೊತ್ತಾಗಬೇಕು? ನೋಡಿದೆಯಾ ಸೋದರಳಿಯನಾದ ನಿನ್ನಿಂದ ಮರಣ ಹೊಂದಲು ಯೋಗ್ಯನಾಗಿದ್ದ ನನ್ನ ಸಂಸಾರದ ಸುಖವನ್ನು! ಇರಲಿ, ಖುಸ್ರೂ, ನಿನ್ನ ಕೃತಿಯಿಂದ ನನ್ನ ಕಣ್ಣುಗಳು ಚನ್ನಾಗಿ ತೆರೆದು, ನನ್ನ ಕೃತಿಯ ಭೀಷಣಸ್ವರೂಪವು ನನ್ನ ಕಣ್ಣಿಗೆ ಕಟ್ಟಿ ನಾನು ಎಚ್ಚತ್ತಿರುವೆನು. ಈ ಉಪಕೃತಿಗಾಗಿ ನಾನು ನಿನ್ನ ಅಪರಾಧವನ್ನು ಸಂಪೂರ್ಣವಾಗಿ ಕ್ಷಮಿಸಿದ್ದೇನೆ; ಬಾ, ನನ್ನ ಸಂಗಡ ಬಾ! ನಿನ್ನ ಮಾವನು ಒಮ್ಮೆ ಮಾಡಿದ ಪ್ರತಿಜ್ಞೆಯನ್ನು ಏನಾದರೂ ಬಿಟ್ಟುಕೊಡಲಾರನು. ನಾನಿರುವತನಕ ನಿನ್ನ ಕೂದಲು ಕೊಂಕಲಾರದು, ಅದಾವ ವೀರನು ನಿನ್ನ ಮೇಲೆ ಕೈ ಮಾಡಲು ಸಮರ್ಥನಾದಾನು?

ತನ್ನ ಮಾವನ ಈ ಕರುಣಾಶಾಲಿತ್ವವನ್ನೂ, ವಾತ್ಸಲ್ಯವನ್ನೂ ನೋಡಿ ಖುಸ್ರುವು ಅತ್ಯಂತ ನಮ್ರನಾಗಿ ಮನಸ್ಸಿನಲ್ಲಿ—"ಅಹಹ! ಎಂಥ ಘನತರವಾದ ಔದಾರ್ಯವಿದು! ಅಭಿಮಾನಿಯೂ, ಪ್ರತಿಹಿಂಸಾಪರಾಯಣನೂ, ಮಮತಾಹೀನನೂ ಆದ ರಾಜಾ ಮಾನಸಿಂಹನಲ್ಲಿ ಈ ಪರಿಯ ಔದಾರ್ಯ–ಪ್ರೇಮಗಳು ಇದ್ದಾವೆಂದು ನನಗೆ ಸ್ವಪ್ನದಲ್ಲಿಯೂ ಕಂಡುಬಂದಿ

ದ್ದಿಲ್ಲ! ಸ್ನೇಹಪೂರ್ಣ ಹೃದಯವು ಕ್ಷಮಾಶೀಲವಿರುತ್ತದೆಂಬದನ್ನು ನಾನು ಬಲ್ಲೆನು; ಆದರೆ ಮಮತೆಗಾಗಲಿ, ಕ್ಷಮೆಗಾಗಲಿ ಏನಾದರೂಮರ್ಯಾದೆಯು ಇರಬಹುದೋ ಇರಲಿಕ್ಕಿಲ್ಲವೋ? ಮಾವನನ್ನು ಕೊಲ್ಲಲು ಸಿದ್ಧನಾಗಿದ್ದ ಸೋದರಳಿಯನ ವಿಷಯವಾಗಿ ದಯಾ-ಕ್ಷಮೆಗಳನ್ನು ತಾಳುವದೆಂದರೆ ಎಂಥ ಔದಾರ್ಯವು!" ಎಂದು ವಿಚಾರಮಾಡುತ್ತ ಖುಸ್ರುವು ತನ್ನ ಮಾವನ ಕಡೆಗೆ ನೋಡುತ್ತ ದೀನ ಮುಖದಿಂದ—"ಮಹಾರಾಜ, ನಾನು ಇನ್ನು ತಮ್ಮ ಸಂಗಡ ಎಲ್ಲಿಗೆ ಬರಲಿ? ನನಗೆ ಬರಲಿಕ್ಕೆ ಇನ್ನು ಯಾವ ಸ್ಥಳವು ತೆರವಾಗಿರುವದು? ನನ್ನ ತಾಯಿಗೆ-ನಿಮ್ಮ ತಂಗಿಗೆ ಈ ಕರಿಯ ಮೋರೆಯನ್ನು ಹ್ಯಾಗೆ ತೋರಿಸಲಿ? ಬೇಡ, ಈ ನರಾಧಮನ ಮೇಲೆ ತಾವು ಇಷ್ಟು ಪ್ರೇಮಮಾಡುವದು ಸರ್ವಥಾ ಬೇಡ. ನಾನು ಆ ಪವಿತ್ರ ಪ್ರೇಮಕ್ಕೆ ಪಾತ್ರನಿಲ್ಲ. ನನಗೆ ಆ ಅರಮನೆಯೂ ಬೇಡ; ಬಾದಶಾಹೀ ಮೊಗಲ ಸಿಂಹಾಸನವೂ ಬೇಡ. ಮಹಾರಾಜ, ಈ ಅಧಮನ ಮಹಾ ಪರಾಧದ ಸೇಡು ತೀರಿಸಿಕೊಳ್ಳುವದನ್ನು ಬಿಟ್ಟು, ನನ್ನನ್ನು ಯಾಕೆ ಕ್ಷಮಿಸು ವಿರಿ? ಕ್ಷತ್ರಿಯರು ತಮ್ಮ ಶತ್ರುವನ್ನು ಎಂದೂ ಕ್ಷಮಿಸುವದಿಲ್ಲ; ಅಂದಬ ಳಿಕ ತಾವು ನನ್ನನ್ನು ಈ ಪರಿ ಕ್ಷಮಿಸುವದೇಕೆ?" ಎಂದು ನುಡಿದು, ಮಾವನ ಮುಖವನ್ನು ನೋಡಿದನು. ಆಗ ಖುಸ್ರುವಿನ ನೇತ್ರಗಳು ಮತ್ತೆ ಅಶ್ರುಪೂ ರ್ಣವಾಗಿದ್ದವು. ಅದನ್ನು ನೋಡಿ ಮಾನಸಿಂಹನು ನಕ್ಕು—"ಖುಸ್ರೂ, ನಿನ್ನನ್ನು ನಾನು ಯಾಕೆ ಕ್ಷಮಿಸುವೆನೆಂಬದು ನಿನಗೆ ಹಿಂದುಗಡೆ ಗೊತ್ತಾ ದೀತು! ಆದರೆ ಈಗ ನೀನು ನನ್ನನ್ನು ಏನೂ ಕೇಳದೆ ನನ್ನ ಬೆನ್ನು ಹತ್ತಿ ಬಾ ನೋಡೋಣ."

ಈ ಮೇರೆಗೆ ನುಡಿದು ಮಾನಸಿಂಹನು ಗುಹೆಯಿಂದ ಹೊರಬೀಳ ತೊಡಗಲು, ಖುಸ್ರುವು ನಿರ್ವಾಹವಿಲ್ಲದೆ ಆತನ ಬೆನ್ನುಹತ್ತಿದನು. ಗುಹೆ ಯಿಂದ ಹೊರಹೊರಟು ಬಂದಕೂಡಲೇ ಹತ್ತುವದೊಂದು ದಿನ್ನೆಯನ್ನು ಇಳಿದು ಆ ಅಳಿಯ-ಮಾವಂದಿರು ಕೋಟೆಯನ್ನು ಹೊಕ್ಕು ಅರಮನೆಯ ಕಡೆಗೆ ನಡೆದರು. ಈ ಕಾಲದಲ್ಲಿ ಆಕಾಶವು ನಿರ್ಮಲವಾಗಿದ್ದು, ಹಿಟ್ಟು ಚಲ್ಲಿದಹಾಗೆ ಬೆಳದಿಂಗಳು ಬಿದ್ದಿತ್ತು. ಚಂದ್ರಮನ ಆ ಸ್ವಚ್ಛ ಪ್ರಕಾಶ ದಲ್ಲಿ ಹೊಳೆಯುವ ಅರಮನೆಯ ಶಿಖರವು ಖುಸ್ರುವಿನ ಕಣ್ಣಿಗೆ ಬೀಳಲು,

ಅವನ ಎದೆಯು ದಸಕ್ಕೆಂದಿತು! ಕಣ್ಣುಗಳು ಕತ್ತಲುಗೂಡಿಸಿದವು. ಇನ್ನು ಮೇಲೆ ತನ್ನ ಮುಂದೆ ಯಾವ ಎಲೆ ಬಡಿಸುವದೆಂಬದರ ಕಲ್ಪನೆಯಿಂದ ಅವನ ಚಿತ್ತವು ಅಸ್ವಸ್ಥವಾಯಿತು. ಪ್ರಾಸಾದದ ಬಾಗಿಲಿಗೆ ಬರುವತನಕ ಆ ಆಳಿಯು-ಮಾವಂದಿರು ಪಿಟ್ಟೆಂದು ಮಾತಾಡಿದ್ದಿಲ್ಲ. ಯಾಕಂದರೆ ಅವರಿಬ್ಬರೂ ತಮ್ಮ ತಮ್ಮ ವಿಚಾರದಲ್ಲಿ ಮಗ್ನರಾಗಿದ್ದರು. ಬಾಗಿಲಿಗೆ ಬಂದಕೂಡಲೆ ಮಹಾರಾಜರು ಶಹಾಜಾದಾನೊಡನೆ ಅಕಸ್ಮಾತ್ ಬಂದದ್ದನ್ನು ನೋಡಿ ಕಾವಲುಗಾರನು ಬೆರಗಾದನು; ಆದರೆ ಕೂಡಲೆ ಆತನು ತಲೆಬಾಗಿಸಿ ಖಡ್ಗವನ್ನು ಕೆಳಗಿಟ್ಟು ಕಬ್ಬಿಣದ ಬಾಗಿಲವನ್ನು ತೆಗೆದನು. ಆಗ ಅವರಿಬ್ಬರು ಆಳಿಯು-ಮಾವಂದಿರು ಒಳಗೆ ಬಂದರು. ಮಾನಸಿಂಹನು ಒಂದು ವಿಸಿಷ್ಟ ಮಂದಿರದ ಬಳಿಗೆ ಬಂದಕೂಡಲೆ ಆತನು ಸ್ನೇಹಪೂರ್ಣ ಸ್ವರದಿಂದ—"ಕುಮಾರಾ, ಹೋಗು, ನಿನ್ನ ಪ್ರೇಮುಲ ಸ್ವಭಾವದ ತಾಯಿಯು ತನ್ನ ಒಬ್ಬನೇ ಒಬ್ಬ ಅಚ್ಚೆಯ ಮಗನ ಹಾದಿಯನ್ನು ನೋಡುತ್ತ ಕುಳಿತಿರುವಳು ಹೋಗು; ಆಕೆಯನ್ನು ಕಂಡು ಸಮಾಧಾನಪಡಿಸು. ಮತ್ತೆ ನಾಳೆ ನಾನು ನಿನ್ನನ್ನು ಕಾಣುವೆನು.

ಮಾನಸಿಂಹನ ಈ ಮಾತುಗಳನ್ನು ಕೇಳಿ ಕುಮಾರನು ಏನೋ ಮಾತಾಡಬೇಕೆನ್ನುತ್ತಿರಲು, ಅದಕ್ಕೆ ಆಸ್ಪದ ಕೊಡದೆ ಅಮಾತ್ಯನು ತಟ್ಟನೆ ಹೊರಟು ಹೋಗಿಬಿಟ್ಟನು; ಆದ್ದರಿಂದ ಹತಾಶನೂ, ಶಂಕಿತನೂ, ನಿರುತ್ಸಾಹಿಯೂ ಆದ ಖುಸ್ರುವು ಏನೂ ಮಾತಾಡದೆ ಅಂತಃಪುರದ ಕಡೆಗೆ ಹೊರಳಬೇಕಾಯಿತು; ಆದರೆ ಆತನು ಅಂತಃಪುರದ ಬಾಗಿಲಿಗೆ ಹೋದಕೂಡಲೆ ಮುಂದಕ್ಕೆ ಹೆಜ್ಜೆಯಿಡದಾದನು; ಯಾಕಂದರೆ ಆತನ ಪ್ರೇಮುಲ ಸ್ವಭಾವದ ತಾಯಿಯು, ಬಿಳಿಯ ಸ್ವಚ್ಛ ಹಾಸಿಗೆ ಹಾಸಿದ್ದ ಪಲ್ಲಂಗದ ಮೇಲೆ ಚಿಂತಾಮಗ್ನಳಾಗಿ ಹಸ್ತದಲ್ಲಿ ಗಲ್ಲವನ್ನಿಟ್ಟುಕೊಂಡು ಕಣ್ಣೀರು ಸುರಿಸುತ್ತ ಕುಳಿತುಕೊಂಡಿದ್ದಳು. ಅಂಥ ತನ್ನ ಪ್ರೇಮಳ ಮಾತೃ ಮೂರ್ತಿಯನ್ನು ನೋಡಿ ಖುಸ್ರುವಿನ ಮನಸ್ಸಿನ ಸ್ಥಿತಿಯು ಏನಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಸ್ವಚ್ಛ ಪ್ರಕಾಶವಿದ್ದದ್ದರಿಂದ ಜೋಧಬಾಯಿಯು ಮಗನನ್ನು ತಟ್ಟನೆ ಗುರುತಿಸಿದಳು. ಆಕೆಯು ತನ್ನ ಕಣ್ಣು ಒರಿಸಿಕೊಳ್ಳುತ್ತ ತೀವ್ರ ಸ್ವರದಿಂದ ಮಗನನ್ನು ಕುರಿತು—"ಖುಸ್ರೂ, ಬಾ, ಇನ್ನು

ಸಾಕು ಬಾ" ಎಂದು ಕರೆದಳು. ತನ್ನ ತಾಯಿಯು ಈ ಕರಿಯೋಣವು ಪ್ರೇಮದ್ದಾಗಿರದೆ, ಸಿಟ್ಟಿನಿಂದುಂಟಾದ ತಿರಸ್ಕಾರದ್ದೆಂದು ಕುಮಾರನು ತಿಳಿದು ಕೊಂಡನು. ಅವ್ವನ ಕರಿಯೋಣದರ ಗುರುತು ಮಗನಿಗೆ ಹತ್ತಿದಷ್ಟು ಬೇರೆ ಯಾರಿಗೂ ಹತ್ತುವದಿಲ್ಲ. ತನ್ನ ತಾಯಿಯು ಕರೆದದ್ದರಿಂದ ಖುಸ್ರುವು ಒಳಗೆ ಹೋಗಲೇಬೇಕಾಯಿತು. ತತ್ತರಿಸುವ ಹೃದಯದೊಡನೆ ಆತನು ಅಂತಗೃಹವನ್ನು ಹೊಕ್ಕು, ತೀರ ಮಂದಸ್ವರದಿಂದ--"ಅವ್ವಾ, ಇನ್ನೂ ನೀನು ಎಚ್ಚತ್ತೇ ಇರುವಿಯೋ?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಜೋಧಬಾಯಿಯು ತಿರಸ್ಕಾರದಿಂದ—"ನಿನ್ನಂಥ ಸದ್ಗುಣಿಯಾದ ಮಗನ ತಾಯಿಗೆ ನಿದ್ದೆಯೂ, ಸ್ವಸ್ಥತೆಯೂ ಉಂಟಾಗುವವೆಂದು ತಿಳಿದಿರುವೆ ಯೇನು ಖುಸ್ರೂ! ಕುಮಾರಾ, ನಿನ್ನ ಜನ್ಮವು ರಾಜಕುಲದಲ್ಲಿ ಆಗತಕ್ಕದ್ದಿದ್ದಿಲ್ಲ. ನೀನು ಅತ್ಯಂತ ನೀಚವೃತ್ತಿಯ ಯಾವದೊಂದು ಹೀನ ಕುಲದಲ್ಲಿ ಹುಟ್ಟಿ ಬಂದಿದ್ದರೆ ನೆಟ್ಟಗಾಗುತ್ತಿತ್ತು! ನೀನು ಕಲ್ಪಿಸಲಶಕ್ಯವಾದ ನೀಚಕೃತ್ಯಗಳನ್ನು ಈ ವಯಸ್ಸಿನಲ್ಲಿ ನನ್ನ ಬಳಿಯಲ್ಲಿರುವಾಗ ಮಾಡಹತ್ತಿರುವೆಯಲ್ಲ! ಇದಕ್ಕಾಗಿ ನಿನಗೆ ಏನು ಅನ್ನಬೇಕು ಖುಸ್ರೂ!

ತಾಯಿಯ ಈ ತಿರಸ್ಕಾರದ ಮಾತುಗಳಿಂದ ಕುಮಾರನ ಅಂತಃಕರಣವು ಅತ್ಯಂತ ವ್ಯಥಿತವಾಗಿ ಮತ್ತೆ ಅವನ ಕಣ್ಣೊಳಗಿಂದ ಬಳಬಳ ನೀರುಗಳು ಸೋರಹತ್ತಿದವು. ಅವನು ಕೆಲಹೊತ್ತಿನ ಮೇಲೆ ಕಣ್ಣು ಒರಿಸಿಕೊಂಡು ಅನುತಾಪವಿದಗ್ಧ ಸ್ವರದಿಂದ ತನ್ನ ತಾಯಿಯನ್ನು ಕುರಿತು—"ಅವ್ವಾ, ನೀನೂ ನನ್ನನ್ನು ಹೀಗೆ ತಿರಸ್ಕರಿಸಿ ದೂರ ದೂಡತೊಡಗಿದೆಯಾ? ನನ್ನನ್ನು ನೋಡಿದ ಕೂಡಲೆ ಅಪ್ಪನು ಅಂಗಾಲಿನಿಂದ ನಡುನೆತ್ತಿಯವರೆಗೆ ಉರಿಯುವನು; ಮಾವನ ಸಿಟ್ಟಿಗಂತು ನಾನು ಗುರಿಯಾಗಿಬಿಟ್ಟಿನು; ಆದರೆ ಅವ್ವಾ, ಈ ಹತಭಾಗ್ಯ ಖುಸ್ರುವನ್ನು ನೀನೂ ಹೀಗೆ ತಿರಸ್ಕರಿಸಿದಬಳಿಕ ನನ್ನವರೆನ್ನುವವರು ಯಾರೂ ಇಲ್ಲದಾಗಿ ನಾನು ಯಾರಿಗೂ ಬೇಡಾಗಿ ಹೋದೆನು! ಅವ್ವಾ, ನೀವೆಲ್ಲರೂ ಹೀಗೆ ಮಾಡಿದ ಬಳಿಕ ನಾನು ಇನ್ನು ಯಾರಬಳಿಗೆ ಹೋಗಲಿ? ರಾಜಕುಲದಲ್ಲಿ ಉತ್ಪನ್ನವಾದದ್ದೊಂದು ಮಹಾಪರಾಧವೇ ಆಯಿತೆಂದು ನನಗೆ ತೋರುವದು" ಎಂದು ನುಡಿಯಲು, ಜೋಧಬಾಯಿಯು ಕಂಪಿತ ಸ್ವರದಿಂದ—"ಹತಭಾಗ್ಯನಾದ ಪೋರನೇ,

ನನ್ನ ಹೊಟ್ಟೆಯಲ್ಲಿ ಹುಟ್ಟಿ ನೀನು ನನಗೆ ವೈಧವ್ಯವನ್ನುಂಟು ಮಾಡುವ ನೀಚತನಕ್ಕೆ ಹೋಗಬೇಕೇನು? ಪ್ರತ್ಯಕ್ಷ ಸೋದರಮಾವನ ಕೊಲೆಮಾಡಲಿಕ್ಕೂ ನಿನ್ನ ಕೈಗಳು ಏಳಬೇಕೇನು? ಅತ್ಯಂತ ದುಷ್ಟನೂ, ನೀಚನೂ ಆದ ನಿನ್ನ ಅಪರಾಧಗಳು ಕ್ಷಮಿಸಲು ನಿಶ್ಚಯವಾಗಿ ಯೋಗ್ಯವಾದವುಗಳಲ್ಲವು. ನೀನು ಇನ್ನೂ ಹುಡುಗನೆಂದು ನಾನು ಮೊದಲಿನ ಅಪರಾಧವನ್ನು ಕ್ಷಮಿಸಿದೆನೆಂದು ತಿಳಿದರೂ, ದುರ್ಜಯಸಿಂಹನೊಡನೆ ನೀನು ಈಗ ನಡೆಸಿದ್ದ ಘಾತಕವಾದ ಒಳಸಂಚಿನ ಅರ್ಥವೇನು?" ಅನ್ನಲು, ಖುಸ್ರುವು ಪಶ್ಚಾತ್ತಾಪಯುಕ್ತ ಸ್ವರದಿಂದ—"ಅವ್ವಾ, ಕೈತಪ್ಪಿ ಆದ ಅಪರಾಧವನ್ನು ಹೊಟ್ಟೆಯಲ್ಲಿ ಹಾಕಿಕೊಂಡು ನನ್ನನ್ನು ಕ್ಷಮಿಸಬಾರದೇನು? ಅವ್ವಾ, ನನ್ನ ಮೊದಲಿನ ಅಪರಾಧವೂ ನನ್ನ ಉಲಕೋಚಿತನದ ಅವಿಚಾರದಿಂದಲೇ ಆಯಿತು; ಎರಡನೆಯ ಅಪರಾಧವೂ ನನ್ನ ಉಲಕೋಚಿತನದ ಅವಿಚಾರದಿಂದಲೇ ಆಯಿತು. ಈಗ ನನ್ನ ಕಣ್ಣುಗಳು ನಿಚ್ಚಳವಾಗಿ ತೆರೆದಿರುವವು, ಆದರೆ ಉತ್ತರ ಕೊಡಲಿಕ್ಕೆ ಬಾರದ ನನಗೆ "ಯಾಕೆ ಮಾಡಿದೆ" "ಹೇಗೆ ಮಾಡಿದೆ" ಇತ್ಯಾದಿ ಪ್ರಶ್ನೆಗಳನ್ನು ಮಾಡಬೇಡ! ಅದರಿಂದ ನನ್ನ ಅಂತಃಕರಣವು ಬಹಳ ವ್ಯಥಿತವಾಗುವದು. ನಾನು ಮಾಡಹೋದ ಎರಡೂ ಅಪರಾಧಗಳೂ ಈಗ ನನ್ನ ಹೃದಯವನ್ನು ಸುಡುತ್ತಿರುವವು; ಪ್ರತ್ಯಕ್ಷ ಜನ್ಮದಾತೃವಿನ, ಅದರಂತೆ ನನ್ನ ಹಿತಕ್ಕಾಗಿ ಸರ್ವಸ್ವದ ತ್ಯಾಗ ಮಾಡಿರುವವನ ಕೊಲೆ ಮಾಡಹೋಗುವ ನೀಚನು ನಾನು ಕಟಕನಲ್ಲದೆ ನಿನ್ನ ಮಗನು ಹ್ಯಾಗಾವೇನು? ಆದರೆ ಅವ್ವಾ, ಅವ್ವಾ! ನನ್ನ ಅಪರಾಧಗಳನ್ನು ಕ್ಷಮಿಸು. ನಾನು ನಿಜವಾಗಿಯೇ ದುರ್ದೈವಿಯು. ನನ್ನಿಂದ ನಿನಗೆ, ಅಪ್ಪನಿಗೆ, ಮಾವನಿಗೆ ಮೂವರಿಗೂ ತ್ರಾಸವಾಗುತ್ತಿರುವದು. ಅವ್ವಾ, ನನಗೆ ಅಪ್ಪಣೆ ಕೊಡು, ನಾನು ಪುನಃ ದಿಲ್ಲಿಗೆ ಹೋಗುವೆನು. ನಾನು ಇಲ್ಲಿ ಇದ್ದು ನಿನಗೆ ಆನಂದವನ್ನುಂಟುಮಾಡುವದೊತ್ತಟ್ಟಿಗುಳಿದು, ನಿನಗೆ ದುಸ್ಸಹ ದುಃಖವನ್ನು ಮಾತ್ರ ಉಂಟುಮಾಡಿದೆನು! ಈ ಅಪರಾಧಕ್ಕಾಗಿ ನನ್ನನ್ನು ಕ್ಷಮಿಸು ಕ್ಷಮಿಸು. ನಾನು ಹೀಗೆಯೇ ಅಜ್ಜನ ಬಳಿಗೆ ಹೋಗಿ ಆತನಮುಂದೆ ಸ್ಪಷ್ಟವಾಗಿ—"ಅಜ್ಜಾ, ನಾನು ಮಹಾ ನೀಚನು. ನಿನ್ನ ಮಗನಾದ ಸಲೀಮನು ನನ್ನ ನನ್ನ ತಂದೆಯೆಂದು ನೋಡದೆ ಆತನ ಕೊಲೆ ಮಾಡಹೋದವನು;

ಅದರಂತೆ ನಿನ್ನ ಮಿತ್ರನಾದ ಮಾನಸಿಂಗನನ್ನು ನನ್ನ ಸೋದರಮಾವನೆಂದು ನೋಡದೆ ಆತನನ್ನು ಕೊಲ್ಲಹೋದವನು. ಇವೆರಡೂ ನೀಚ ಕೃತ್ಯಗಳು ಯಾತರಸಲುವಾಗಿ? ಕೇವಲ ಸಿಂಹಾಸನಪ್ರಾಪ್ತಿಯ ಸಲುವಾಗಿ! ಇಂಥ ದುಷ್ಟನು ನಾನು ನನ್ನ ಈ ಎರಡೂ ಘೋರ ಅಪರಾಧಗಳನ್ನು ನನ್ನ ಬಾಯಿಯಿಂದ ನಾನು ಒಪ್ಪಿಕೊಳ್ಳುವೆನು. ಇವುಗಳಿಗಾಗಿ ನನಗೆ ಘೋರ ಶಾಸನ ಮಾಡಿರಿ. ಎಂದು ಅವ್ವಾ, ಅಜ್ಜನ ಮುಂದೆ ಹೀಗೆ ಸ್ಪಷ್ಟವಾಗಿ ಹೇಳಿಬಿಡುವೆನು. ನನಗೆ ನನ್ನ ಅಪರಾಧಗಳಿಗಾಗಿ ಪಶ್ಚಾತ್ತಾಪವಾಗಿದೆ. ಶಿಕ್ಷೆಯಾದಹೊರತು ಪಶ್ಚಾತ್ತಾಪವು ಶಾಂತವಾಗಲಾರದು. ಇನ್ನು ಮುಂದಿಗೂ ಮನೆಯುವರಿಗೂ ನಾನು ಮೋರೆಯನ್ನು ತೋರಿಸಲಾರೆನು. ನನಗೆ ಬಹಳ ನಾಚಿಕೆ ಬಂದಿದೆ. ಅವ್ವಾ! ನಿಜವಾಗಿ ನಾನು ಭೂಮಿಯಲ್ಲಿ ಹುಟ್ಟದಿದ್ದರೆ ನೆಟ್ಟಗಾಗುತ್ತಿತ್ತು.

ಹೀಗೆ ಮಾತಾಡುತ್ತಾಡುತ್ತ ಕುಮಾರನ ಕಣ್ಣೊಳಗಿಂದ ಅಶ್ರುಗಳು ಧಾರೆಯಿಟ್ಟು ಸುರಿಯಹತ್ತಿದವು. ಆತನು ಆಗಾಗ್ಗೆ ಬಿಕ್ಕಿಬಿಕ್ಕಿ ಅಳುತ್ತ, ತನಗೆ ಇನ್ನು ಯಾರೂ ಗತಿಯಿಲ್ಲೆಂಬ ಭಾವದಿಂದ ನಾಲ್ಕೂ ಕಡೆಗೆ ನೋಡಹತ್ತಿದನು. ಜೋಧಬಾಯಿಯು ಎಷ್ಟಾದರೂ ಹಡೆದ ಕರುಳು. ಮಗನ ಈ ದುರವಸ್ಥೆಯನ್ನು ನೋಡಿ ಆಕೆಯ ಅಂತಃಕರಣವು ಕರಗಿ ನೀರಾಯಿತು. ಇಂಥ ದುಷ್ಟ ಮಗನು ಹುಟ್ಟುವದಕ್ಕಿಂತ ಬಂಜೆಯಾಗಿದ್ದರೆ ನೆಟ್ಟಗಾಗುತ್ತಿತ್ತೆಂಬ ಆಕೆಯ ವಿಚಾರವು ಈಗ ನಷ್ಟವಾಗಿಹೋಯಿತು. ಅಂಗಾಲಿಗೆ ಹೇಸಿಗೆಯಿಲ್ಲ, ಕರಳಿಗೆ ನಾಚಿಕೆಯಿಲ್ಲೆಂಬ ಮಾತು ಸುಳ್ಳಲ್ಲ! ಮಗನ ಕಣ್ಣುಗಳೊಳಗಿಂದ ಸುರಿಯುವ ಅಶ್ರುಗಳನ್ನು ನೋಡಿ ಆಕೆಯ ಹೃದಯ ಕಾಠಿಣ್ಯವೂ, ವಿರಾಗವೂ, ತಿರಸ್ಕಾರವೂ ಎತ್ತೋ ಹೋಗಿಬಿಟ್ಟವು! ಕೂಡಲೆ ಆ ಸಾಧ್ವಿಯ ಕಣ್ಣುಗಳೊಳಗಿಂದ ನೀರುಗಳು ಸುರಿಯಹತ್ತಲು, ಆಕೆಯು ಮಗನನ್ನು ತಬ್ಬಿಕೊಂಡು—"ಬಾಳಾ, ಖುಸ್ರೂ, ಬೇಡಪ್ಪಾ, ಅಳಬೇಡ! ಸಾಕು, ಇನ್ನು ಕಣ್ಣು ಒರಿಸು. ನಿನ್ನ ಕಣ್ಣೀರ ಮುಂದೆ ನನಗೆ ಮೊಗಲ ಸಿಂಹಾಸನದ ಮಹತ್ವವು ತೋರದು; ನಿನ್ನ ಮುಂದೆ ನನಗೆ ಜಗತ್ತೇ ತುಚ್ಛವಾಗಿರುವಾಗ ಆ ಯಕಃಶ್ಚಿತ ಸಿಂಹಾಸನದ ಪಾಡೇನು? ಇಲ್ಲ. ಮುದ್ದುಮಗುವೇ, ಇನ್ನು ನಾನು ನಿನ್ನನ್ನು ಎಂದೂ ತಿರಸ್ಕರಿಸುವ

ದಿಲ್ಲ. ನಿನ್ನ ಯಾವತ್ತು ಅಪರಾಧಗಳನ್ನು ಕ್ಷಮಿಸಿದೆನು. ನೀನು ಉದ್ದಂಡಾಯುಷ್ಯವಂತನಾದರೆ ಸಾಕು. ಬಾಳಾ, ಬೇಡಪ್ಪಾ, ಇನ್ನು ಸರ್ವಥಾ ವ್ಯಥಿತನಾಗಬೇಡ" ಎಂದ ಮೈಮೇಲೆ ಕೈಯಾಡಿಸಿ, ರಮಿಸಲು, ಖುಸ್ರುವು ಅತ್ಯಂತ ಸಮಾಧಾನ ತಾಳಿ ತಾಯಿಯ ಚರಣಗಳ ಮೇಲೆ ಮಸ್ತಕವಿಟ್ಟು ಅವನ್ನು ಅಶ್ರುಗಳಿಂದ ತೊಳೆಯಹತ್ತಿದನು. ಆಗ ಜೋಧಬಾಯಿಯು ಮಗನನ್ನು ಎಬ್ಬಿಸಿ ಅವನ ಎರಡೂ ಕೈಗಳನ್ನು ಹಿಡಿದು—"ಬಾಳಾ, ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿ ಏನು ಸುಖವನ್ನು ಕಂಡೆ? ಹಾಯ್ ಹಾಯ್! ನಿನ್ನ ಜನ್ಮವೆಲ್ಲ ತ್ರಾಸದಲ್ಲಿಯೂ, ದುಃಖದಲ್ಲಿಯೂ ಕಳೆದು ಹೋಗಬೇಕೆಂದು ಈಶ್ವರೀ ಸಂಕೇತವಿರಬಹುದೇ? ಬಾಳಾ, ಖುಸ್ರೂ, ನಾನು ನಿನ್ನ ತಾಯಿಯು ಯಾಕಾಗಿದ್ದೇನು?" ಎಂದು ಒಮ್ಮೆ ಮರ್ಮಭೇದಕವಾದ ನಿಟ್ಟುಸಿರುಬಿಟ್ಟು ಮಗನ ಮೋರೆಯನ್ನು ಕನಿಕರದಿಂದ ನೋಡತೊಡಗಿದಳು! "ನಮಾತುಃಪರದೈವತಂ" ಎಂಬ ಮಾತು ಸುಳ್ಳಲ್ಲ!!



## ೩ ನೆಯ ಪ್ರಕರಣ

# ಕಠೋರ ಪ್ರತಿಜ್ಞೆ!

ಹೀಗೆ ಖುಸ್ರುವು ಅತ್ಯಂತ ವ್ಯಾಕುಲನಾಗಿರಲು, ಅತ್ತ ದುರ್ಜಯಸಿಂಹನೂ ಚಿಂತಾಮಗ್ನನಾಗಿದ್ದನು. ಕರ್ತವ್ಯನಿಷ್ಠುರನಾಗಿದ್ದ ಮಾನಸಿಂಹನು ದುರ್ಜಯಸಿಂಹನ ಉದ್ಧತತನಕ್ಕಾಗಿ ಆತನನ್ನು ಹದ್ದುಪಾರಿನ ಶಿಕ್ಷೆಗೆ ಗುರಿಮಾಡಿದ್ದನು. ಇಪ್ಪತ್ತುನಾಲ್ಕು ತಾಸಿನಲ್ಲಿ ಅಂಬರ ರಾಜಧಾನಿಯನ್ನು ಬಿಟ್ಟು ದುರ್ಜಯನು ಹೋಗಲೇಬೇಕೆಂತಲೂ, ಹಾಗೆ ಹೋಗದಿದ್ದರೆ ಆತನು ಆಜನ್ಮ ಕಾರಾಗೃಹವಾಸದ ಶಿಕ್ಷೆಗೆ ಗುರಿಯಾಗಬೇಕಾಗುವದೆಂತಲೂ ಮಾನಸಿಂಹನ ಕಟ್ಟಪ್ಪಣೆಯಾಗಿತ್ತು. ತಾನು ನಿರಪರಾಧಿಯೆಂದು ಭಾವಿಸಿದ್ದ ದುರ್ಜಯ ಸಿಂಹನು ತನಗಾದ ಶಿಕ್ಷೆಗಾಗಿ ಪಶ್ಚಾತ್ತಾಪಪಡುತ್ತ, ತನ್ನ

ಜನ್ಮಭೂಮಿಯನ್ನು ಬಿಟ್ಟು ಹೋಗಲಾರದೆ, ತಳಮಳಿಸುತ್ತಿದ್ದನು. ಪ್ರಸಂಗವಶಾತ್ ತಾನು ಮಾನಸಿಂಹನ ಮನಸ್ಸನ್ನು ಪುನಃ ಪ್ರಸನ್ನೀ ಕರಿಸಿಕೊಳ್ಳುವೆನೆಂಬ ನಂಬಿಗೆಯು ದುರ್ಜಯಸಿಂಹನಿಗೆ ಇದ್ದಿತು. ಮಂದಾಕಿನಿಯೊಡನೆ ಇನ್ನು ಸ್ವಲ್ಪದಿನಗಳಲ್ಲಿ ಲಗ್ನವಾಗಬೇಕಾಗಿರಲು, ಅಷ್ಟರಲ್ಲಿ ತನ್ನ ಆ ವಾಗ್ದತ್ತ ವಧುವನ್ನು ಅಗಲಿ ಹೋಗುವದೆಂದರೆ ಆತನ ಜೀವದ ಸುತ್ತು ಬಂದಹಾಗಾಗಿತ್ತು. ಅಂದಿನ ಫಾಲ್ಗುಣ ಪೌರ್ಣಿಮೆಯ ಉತ್ಸವದಲ್ಲಿ ಅಂಬರ ರಾಜಧಾನಿಯೊಳಗಿನ ಸ್ತ್ರೀ-ಪುರುಷರೆಲ್ಲ ತೊಡಗಿ ಹೋಗಿ, ರಾತ್ರಿ ನಾಲ್ಕೂ ಕಡೆಯಿಂದ ಜನಸಮೂಹವು ಶ್ರೀ ರಾಧಾಕೃಷ್ಣನ ಮಂದಿರದಕಡೆಗೆ ಸಾಗಿತ್ತು. ಬೆಳದಿಂಗಳ ಸ್ವಚ್ಛ ಪ್ರಕಾಶದಿಂದ ಉತ್ಸವಕ್ಕೆ ವಿಶೇಷವಾಗಿ ಕಳೆಯೇರಿತ್ತು. ಒಟ್ಟಿನಲ್ಲಿ ಅಂಬರ ರಾಜಧಾನಿಯು ಉತ್ಸವ ಮಗ್ನವಾಗಿರುವದೆಂದು ಹೇಳಬಹುದಾಗಿದ್ದರೂ, ಅದರಲ್ಲಿ ದುರ್ಜಯಸಿಂಹನಂಥ ಎಷ್ಟು ಜನ ದುರ್ದೈವಿಗಳು ಒಂದಿಲ್ಲೊಂದು ಬಗೆಯ ಅಸಮಾಧಾನದಲ್ಲಿ ಮಗ್ನರಾಗಿದ್ದರೆಂಬದನ್ನು ಯಾರು ಹೇಳಬೇಕು? ದುರ್ಜಯಸಿಂಹನಂತು ತನಗೊದಗಿದ ಶಿಕ್ಷೆಯ ಮೂಲಕ ಅತ್ಯಂತ ಉತ್ಸಾಹಹೀನನಾಗಿದ್ದನು. ಅಂಬರ ರಾಜಧಾನಿಯಲ್ಲಿ ನಡೆದಿದ್ದ ಉತ್ಸವಗಳಿಂದ ಅವನ ಚಿತ್ತವೃತ್ತಿಯು ಸ್ವಲ್ಪವೂ ಉಲ್ಲಸಿತವಾಗುವಹಾಗಿದ್ದಿಲ್ಲ. ಮಧ್ಯರಾತ್ರಿಯವರೆಗೆ ಅಲ್ಲಿ ಉತ್ಸವವು ನಡೆದಿದ್ದರೂ ಆತನ ದೃಷ್ಟಿಯಿಂದ ಅದು ನಡೆಯದಹಾಗೆಯೇ ಸರಿ! ಆತನಿಗೆ ದೇವರೂ ಬೇಡ, ದಿಂಡರೂ ಬೇಡ; ನೋಡುವದೂ ಬೇಡ, ನಲಿಯುವದೂ ಬೇಡ; ಆತನ ಪಾಲಿಗೆ ನೋಡಿದತ್ತ ಅಸಮಾಧಾನದ ಸಾಮ್ರಾಜ್ಯವು ಪಸರಿಸಿದಂತಾಗಿತ್ತು. ಆತನಿಗೆ ಎಲ್ಲದರಲ್ಲಿಯೂ ಔದಾಸೀನ್ಯವು! ಎಲ್ಲದರಲ್ಲಿಯೂ ಬೇಸರವು! ಸುಂದರ ತರುಣಿಯರು ವಸ್ತ್ರಾಲಂಕಾರವಿಭೂಷಿತರಾಗಿ ಶ್ರೀ ರಾಧಾಕೃಷ್ಣನ ಮಂದಿರಕ್ಕೆ ಸಾಗಿರುವದನ್ನು ಆತನು ನೋಡಲೊಲ್ಲನು; ವೀರತರುಣ ರಜಪೂತ ತಂಡವು ಕ್ಷಾತ್ರತೇಜದ ಒಗರಿನಿಂದ ಆ ಮಂದಿರದತ್ತ ಸಾಗಿರುವದರಕಡೆಗೂ ಆತನ ಮನಸ್ಸು ಹರಿಯಲೊಲ್ಲದು; ಹೀಗೆ ಸ್ತ್ರೀ-ಪುರುಷ ತಂಡವು ದೇವಮಂದಿರವನ್ನು ಪ್ರವೇಶಿಸಿ ಶ್ರೀ ರಾಧಾಕೃಷ್ಣನಿಗೆ ಪನ್ನೀರಿನ ಅಭಿಷೇಕ ಮಾಡಿ, ಬುಕ್ಕಿಟ್ಟು-ಗುಲಾಲುಗಳನ್ನೂ, ಘಮಘಮಿಸುವ ಹೂಮಾಲೆಗಳನ್ನೂ ಸಮರ್ಪಿಸಿ, ಅರ್ಚಕನಿಂದ ತೀರ್ಥ

ಪ್ರಸಾದಗಳನ್ನು ಸ್ವೀಕರಿಸಿ ಗುಡಿಯಿಂದ ಹೊರಬೀಳುತ್ತಲಿತ್ತು; ಹೊರಗಿನ ವರು ಭಗವಂತನನ್ನು ಅರ್ಚಿಸುವದಕ್ಕಾಗಿ ಆತುರದಿಂದ ಗುಡಿಯೊಳಗೆ ಹೋಗುತ್ತಲಿದ್ದರು. ಹೀಗೆ ಜನರ ಹೋಗ ಬರುವ ಗದ್ದಲವು ತೆರಪಿಲ್ಲದೆ ನಡೆದಿರಲು, ದುರ್ಜಯಸಿಂಹನು ಎಲ್ಲಿಯೋ ಒಂದು ಮೂಲೆಯಲ್ಲಿ ಚಿಂತಾಮಗ್ನನಾಗಿ ಕುಳಿತಿದ್ದನು. ಆಗ ಆರು ತಾಸು ರಾತ್ರಿಯಾಗಿತ್ತು; ದುರ್ಜಯನ ರಾಜಧಾನಿಯ ತ್ಯಾಗದ ಅವಧಿಯು ಇನ್ನು ಆರೆಂದರೆ ಆರೇ ತಾಸು ಉಳಿದಿತ್ತು.

ತನಗಾಗಿದ್ದ ಭಯಂಕರ ಶಿಕ್ಷೆಯ ಸುದ್ದಿಯನ್ನು ದುರ್ಜಯಸಿಂಹನು ತನ್ನ ವಾಗ್ದತ್ತ ವಧುವಾದ ಮಂದಾಕಿನಿಗೆ ತಿಳಿಸಬೇಕಾಗಿತ್ತು. ಮಂದಾಕಿ ನಿಯು ಎಲ್ಲ ಸ್ತ್ರೀ ಪರಿವಾರದೊಡನೆ ಶ್ರೀ ರಾಧಾಕೃಷ್ಣನ ಮಂದಿರಕ್ಕೆ ಬಂದಿ ದ್ದಳು. ತನ್ನ ಭಾವೀ ಪತಿಗೆ ಖುಸ್ರುವಿನ ಸಹವಾಸದಿಂದ ಏನಾದರೂ ಅನರ್ಥ ಪ್ರಸಂಗವು ಒದಗುವವೆಂಬ ಚಿಂತೆಯು ಆ ನವವಧುವಿನ ಮನಸ್ಸಿನ ಲ್ಲಿಯೂ ಕಟೆಯುತ್ತಿತ್ತು. ಆಕೆಯ ಮನಸ್ಸಾದರೂ ಶ್ರೀ ರಾಧಾಕೃಷ್ಣನ ಉತ್ಸವದಲ್ಲಿ ಸಂಪೂರ್ಣವಾಗಿ ತೊಡಗಿದ್ದಿಲ್ಲ. ತನ್ನ ಪತಿಗೆ ಯಾವ ಸಂಕ ಟವೂ ಒದಗದಂತೆ ಭಗವಂತನನ್ನು ಪ್ರಾರ್ಥಿಸುವದಕ್ಕಾಗಿಯೇ ಆ ಆರ್ಯ ವನಿತೆಯು ಉತ್ಸವದಲ್ಲಿ ತೊಡಗಿದ್ದಳು. ಆಕೆಯು ಜನರ ತಂಡದಲ್ಲಿ ತನ್ನ ವಲ್ಲಭನನ್ನು ನೋಡಿದಳು; ಆದರೆ ತಿರುಗಿ ಆತನು ಕಣ್ಣಿಗೆ ಬೀಳಲಿಲ್ಲ. ಮಂದಾಕಿನಿಯು ದೇವ ಮಂದಿರವನ್ನು ಪ್ರವೇಶಿಸಿ ಶ್ರೀ ರಾಧಾರಮಣನನ್ನು ಪೂಜಿಸಿ ಪ್ರಾರ್ಥಿಸಿ ಹೊರಗೆ ಬಂದು ಅಲ್ಲಿಯೇ ಮಂದಿರದಲ್ಲಿ ಒತ್ತಟ್ಟಿಗೆ ಕುಳಿತು, ದುರ್ಜಯಸಿಂಹನು ಬರುವ ಹಾದಿಯನ್ನು ನೋಡುತ್ತಲಿದ್ದಳು, ಆರುತಾಸು ರಾತ್ರಿಯಾಗಿ ಏಳರ ಅಮಲು ಆರಂಭವಾಯಿತು. ಬರಬರುತ್ತ ಜನರ ಗದ್ದಲವು ಕಡಿಮೆಯಾಗಹತ್ತಿ, ನಾಲ್ಕೂ ಕಡೆಯಲ್ಲಿ ಶಾಂತ ತೆಯ ಸಾಮ್ರಾಜ್ಯವು ಪ್ರಸ್ಥಾಪಿತವಾಗತೊಡಗಿತು. ಆಗ ಮಂದಾಕಿ ನಿಯು ನಿರುತ್ಸಾಹದಿಂದ ಉಸುರ್ಗಳೆದು ಮೇಲಕ್ಕೆದ್ದು, ಶ್ರೀ ರಾಧಾ ಕೃಷ್ಣನನ್ನು ವಂದಿಸಿ,—“ದೇವಾ, ಪತಿದರ್ಶನ ಯೋಗವಿಲ್ಲವೇ ? ನಿನ್ನ ಮನಸ್ಸಿಗೆ ಹೀಗೆಯೇ ಬಂದಿತೇ” ಎಂದು ಭಗವಂತನಿಗೆ ಮೊರೆಯಿಟ್ಟು ಮಂದಿರದಿಂದ ಹೊರ ಹೊರಟು ಮನೆಯಕಡೆಗೆ ಸಾಗತೊಡಗಿದಳು. ಆಗ

ಜನರ ಗದ್ದಲವು ತೀರ ಕಡಿಮೆಯಾಗಿತ್ತು. ಮಂದಾಕಿನಿಯು ನಾಲ್ಕು ಕಡೆಗೆ ನೋಡುತ್ತ ಸಾಗಿರಲು, ಅತ್ತ ದೂರ ಯಾರೋ ಒಂದು ಮರದ ಬುಡದಲ್ಲಿ ಒಬ್ಬರೇ ಕುಳಿತಂತೆ ತೋರಿತು! ಉಡಿಗೆ ತೊಡಿಗೆಗಳಿಂದ ಗಂಡ ಸಿನಂತೆ ತೋರಿದ್ದರಿಂದ, ಆ ವೀರಪುತ್ರಿಯಾದ ಮಂದಾಕಿನಿಯು, ಆತನು ತನ್ನ ಮನೋವಲ್ಲಭನಾದ ದುರ್ಜಯಸಿಂಹನೆಂತಲೇ ಭಾವಿಸಿದಳು. ರಜ ಪೂತ ತರುಣಿಯರು ತೀರ ಕೆಚ್ಚೆದೆಯವರು. ತಮ್ಮ ಪಾವಿತ್ರ್ಯದ ವಿಷ ಯದ ಅವರ ಆತ್ಮವಿಶ್ವಾಸವು ಅನಿವಾರವಾದದ್ದು. ತನ್ನ ಮನೋವಲ್ಲಭ ನಾದ ದುರ್ಜಯಸಿಂಹನೇ ಅಲ್ಲಿ ಕುಳಿತಿರುವನೆಂಬ ಭಾವನೆಯು ಉತ್ಪನ್ನ ವಾದಕೂಡಲೆ ಆ ತರುಣಿಯು ತಟ್ಟನೆ ಆತನಬಳಿಗೆ ಹೊರಟಳು. ಮಂದಾ ಕಿನಿಯ ತರ್ಕದಂತೆ ಅಲ್ಲಿ ಕುಳಿತಿದ್ದ ವ್ಯಕ್ತಿಯು ದುರ್ಜಯಸಿಂಹನೇ ಆಗಿ ದ್ದನು. ಆತನು ತನ್ನ ಪ್ರೀಯಳು ದೇವಮಂದಿರವ ಪ್ರವೇಶಿಸುವದನ್ನು ನೋಡಿದರೂ, ಆಕೆಯನ್ನು ಕಂಡು ತನಗಾದ ಶಿಕ್ಷೆಯನ್ನು ಅಕೆಗೆ ಹೇಳಿ ಆಕೆಯನ್ನು ಅಸಮಾಧಾನಪಡಿಸುವದು ಯೋಗ್ಯವೋ ಎಂಬ ವಿಚಾರದಲ್ಲಿ ಮಗ್ನನಾಗಿ, ಅತ್ತ ದೂರದಲ್ಲಿರುವ ಗಿಡದ ಬುಡದಲ್ಲಿ ಕುಳಿತುಕೊಂಡಿದ್ದನು. ಉತ್ಸವ ಮಗ್ನವಾದ ಜನರ ತಂಡದ ಲಕ್ಷವು ಆತನ ಕಡೆಗೆ ಯಾಕೆ ಹೋಗು ವದು? ಹೋದರೂ ಆತನನ್ನು ಯಾರು ಲಕ್ಷಿಸುವರು? ಆದರೆ ಮಂದಾ ಕಿನಿಯಂಥ ಆತನ ನಿಕಟ ಸಂಬಂಧದ ತರುಣಿಯ ದೃಷ್ಟಿಯಿಂದ ಆತನು ತಪ್ಪಿಸಿಕೊಳ್ಳುವದು ಅಶಕ್ಯವಾಗಿತ್ತು. ತಾನಾಗಿ ಮಂದಾಕಿನಿಯ ದರ್ಶನ ವಾದರೆ ಆಗಲಿ, ಹಾಗೆ ದರ್ಶನವಾದಾಗ ತನಗಾಗಿದ್ದ ಶಿಕ್ಷೆಯ ಸುದ್ದಿಯು ಆಕೆಗೆ ತಿಳಿದರೆ ತಿಳಿಯಲಿ; ಆದರೆ ತಾನಾಗಿ ತನ್ನ ಆ ಪ್ರಿಯ ವಧುವನ್ನು ಶೋಕಮಗ್ನವಾಗಿ ಮಾಡುವದು ಯೋಗ್ಯವಲ್ಲೆಂದು ಆತನು ಆ ಗಿಡದ ಬುಡದಲ್ಲಿ ಕುಳಿತುಬಿಟ್ಟಿದ್ದನು. ಹೀಗಿರುವಾಗ ಒಬ್ಬ ತರುಣಿಯು ತನ್ನ ಕಡೆಗೆ ಬರುವದು ನೂಪುರ ಧ್ವನಿಯಿಂದ ಗೊತ್ತಾಗಲು, ಬರವವಳು ತನ್ನ ಪ್ರಿಯಳೇ ಎಂದು ತಿಳಿದು ದುರ್ಜಯನು ಕೌತುಕದಿಂದ—"ಯಾರು? ಮಂದಾಕಿನಿಯೇನು? ಪ್ರಿಯೇ, ಇಂಥ ಮಧ್ಯರಾತ್ರಿಯಲ್ಲಿ ಹೀಗೆ ಒಬ್ಬಳೇ ಬರುವ ಸಾಹಸಮಾಡಬಹುದೇ?" ಎಂದು ನುಡಿದನು.

ತನ್ನ ವಲ್ಲಭನ ಧ್ವನಿಯನ್ನು ಕೇಳಿದ ಕೂಡಲೇ ಮಂದಾಕಿನಿಯು

ಭಯ ರಹಿತಳಾಗಿ ಉತ್ಸಾಹಗೊಂಡಳು. ಆಕೆಯು ಆತುರದಿಂದ ದುರ್ಜಯನಬಳಿಗೆ ಹೋಗಿ—"ಕ್ಷತ್ರಿಯ ವೀರಾ, ಶ್ರೀ ರಾಧಾಕೃಷ್ಣನ ದರ್ಶನಕ್ಕೂ ಬಾರದಷ್ಟು ಔದಾಸೀನ್ಯವು ನಿನ್ನನ್ನು ಯಾಕೆ ಆವರಿಸಿತು? ಎಲ್ಲಕ್ಕೂ ಮೊದಲು ಬಂದು ಎಲ್ಲಕ್ಕೂ ಹಿಂದುಗಡೆಗೆ ಹೋಗುವ ನನಗೆ ನೀನು ಗುಡಿಯಲ್ಲೆಲ್ಲಿಯೂ ಕಣ್ಣಿಗೆ ಬೀಳದಿರುವದು ಆಶ್ಚರ್ಯವಲ್ಲವೆ? ಈ ಕೆಟ್ಟಸಂಸಾರದಲ್ಲಿ ಸ್ವಾರ್ಥಕ್ಕಾಗಿ ಬಡಿದಾಡುವ ಹೇಸಿ ಜನರು ಒಬ್ಬರನ್ನೊಬ್ಬರು ಒಮ್ಮೆ ತಿರಸ್ಕರಿಸಬಹುದು, ಒಮ್ಮೆ ಆದರಿಸಬಹುದು; ಆದರೆ ಸರ್ವತಂತ್ರಸ್ವತಂತ್ರನೂ, ಸರ್ವಾಧಾರನೂ, ಪೂರ್ಣಕಾಮನೂ ಆದ ಸಾಕ್ಷಾತ್ ಶ್ರೀರಾಧಾಕೃಷ್ಣನು ನಮ್ಮಂಥ ಸಂಸಾರದೊಳಗಿನ ಹುಳಗಳನ್ನು ಉದ್ಧರಿಸುವದಕ್ಕಾಗಿ ಶಿಲಾ ಪ್ರತಿಮೆಯ ರೂಪದಿಂದ ಅತ್ತಿತ್ತ ಉಲುಕಾಡದೆ ಸದಾ ಸಿದ್ಧನಾಗಿ ಜಗನ್ಮಾತೆಯೊಡನೆ ನಿಂತಿರಲು, ನೀನು ಆತನನ್ನು ನಮಸ್ಕರಿಸುವದಕ್ಕೂ ಒಳಗೆ ಬರಬಾರದೇನು? ಅದರೆ ಪ್ರಾಣಪ್ರಿಯಾ, ಈಗಲಾದರೂ ಇಲ್ಲಿಂದಲೇ ಆ ರಾಧಾರಮಣನನ್ನು ನಮಸ್ಕರಿಸು. ಆ ಅನಿಮಿತ್ತ ಬಂಧುವನ್ನಲ್ಲದೆ ಮತ್ತೆ ಯಾರನ್ನು ನಾವು ಶರಣು ಹೋಗತಕ್ಕದ್ದು? ವೀರ ವರನೇ, ಹೀಗೆ ಒಬ್ಬನೇ ಔದಾಸೀನ್ಯದಿಂದ ಕುಳಿತುಕೊಳ್ಳಲಿಕ್ಕೆ ನಿನಗೆ ಬಂದ ಅಂಥ ಪ್ರಸಂಗವೇನು? ಎಂಥ ಪ್ರಸಂಗಬಂದರೂ ಪ್ರಿಯಾ, ನಾನಂತು ನಿನ್ನನ್ನು ಅಗಲಿ ಹೋಗುವಹಾಗಿಲ್ಲವಷ್ಟೇ?" ಎಂದು ನುಡಿಯಲು, ದುರ್ಜಯನ ಸರ್ವಾಂಗದಲ್ಲಿ ಹೊಸ ಉತ್ಸಾಹದ ಸಂಚಾರವಾಯಿತು! ಆಗ ಆತನು ಎದ್ದು ಆದರದಿಂದ ಮಂದಾಕಿನಿಯನ್ನು ಹತ್ತರ ಕರೆದು ಕುಳ್ಳಿರಿಸಿಕೊಂಡು—"ಪ್ರಿಯೇ, ಮಂದಾಕಿನೀ, ನಿನ್ನಂಥ ಧರ್ಮಾತ್ಮಳ ಪ್ರೇರಣೆಯಿಂದ ನಾನು ಇಲ್ಲಿಂದಲೇ ಶ್ರೀ ರಾಧಾರಮಣನನ್ನು ನಮಸ್ಕರಿಸಿ ನಾಸ್ತಿಕತ್ವದ ದೋಷದಿಂದ ಮುಕ್ತನಾಗುವೆನು. ನಿನ್ನ ಹೃದಯದಲ್ಲಿ ನನ್ನ ವಿಷಯದ ಪ್ರೇಮವು ಎಷ್ಟು ದಟ್ಟವಾಗಿ ತುಂಬಿರುವದೆಂಬದರ ಅನುಭವವು ನಿನ್ನೆ ಗುಹೆಯಲ್ಲಿಯೇ ನನಗೆ ಆಗಿ ಹೋಗಿದೆ. ನನ್ನ ವಾಗ್ದತ್ತ ವಧುವಾದ ನೀನು ಇಂಥ ಘನವಾದ ಯೋಗ್ಯತೆಯುಳ್ಳವಳೆಂಬದರ ಅನುಭವವು ನನಗೆ ನಿನ್ನಿನವರೆಗೆ ಆಗಿದ್ದಿಲ್ಲ; ಆದರೆ ಪ್ರಿಯೇ, ಪ್ರಸಂಗವಶಾತ್ ನನ್ನಿಂದ ನಿನ್ನ ಯೋಗ್ಯತೆಗೆ ಕೊರತೆ ಬರುವಂತಹ ಆಚರಣೆಯೇನಾದರೂ ಆಗಿದ್ದರೆ ಅದಕ್ಕಾಗಿ ನನ್ನನ್ನು ಕ್ಷಮಿಸು

ಕಂಡೆಯಾ! ನಿನ್ನ ಪಾಣಿಗ್ರಹಣಮಾಡಿ ಕೃತಾರ್ಥನಾಗುವ ಯೋಗವು ನನ್ನ ಲಭ್ಯದಲ್ಲಿದ್ದಂತೆ ತೋರುವದಿಲ್ಲ. ಮಾನಸಿಂಹ ಮಹಾರಾಜರವರು ಇಪ್ಪತ್ತುನಾಲ್ಕು ತಾಸುಗಳಲ್ಲಿ ಈ ರಾಜಧಾನಿಯನ್ನು ಬಿಟ್ಟು ಹೋಗಬೇಕೆಂತಲೂ, ಹಾಗೆ ಮಾಡದಿದ್ದರೆ ಆಜನ್ಮ ಸೆರೆಮನೆಯಲ್ಲಿರಬೇಕಾಗುವದೆಂತಲೂ ಕಟ್ಟಪ್ಪಣೆ ಮಾಡಿರುವರು; ಆದ್ದರಿಂದ ನಾನು ಇನ್ನು ನಾಲ್ಕಾರುತಾಸುಗಳಲ್ಲಿ ಈ ಪಟ್ಟಣದಿಂದ ಅದೃಶ್ಯವಾಗಬೇಕಾಗಿದೆ. ಹಾಗೆ ಅದೃಶ್ಯವಾಗುವಾಗ ನಿನ್ನನ್ನು ಕಂಡದ್ದೇ ಪರಮ ಲಾಭವು. ಮುಂದೆ ಯೋಗವು ಹೇಗಿರುವದೆಂಬದನ್ನು ಶ್ರೀ ರಾಧಾಕೃಷ್ಣನೇ ಬಲ್ಲನು.

ದುರ್ಜಯನ ಈ ಮಾತುಗಳನ್ನು ಕೇಳಿ ಮಂದಾಕಿನಿಗೆ ಅತ್ಯಂತ ವಿಷಾದವಾಯಿತು. ಆಕೆಯ ಮುಪ್ಪಿನ ತಂದೆಯಾದ ಅಮರಸಿಂಹನು ವ್ಯಾಧಿಪೀಡಿತನಾಗಿ ತೀರ ಮರಣೋನ್ಮುಖನಾಗಿದ್ದನು. ಬೇಗನೆ ದುರ್ಜಯನೊಡನೆ ತನ್ನ ಮಗಳ ಲಗ್ನವನ್ನು ಮಾಡಿಬಿಡಬೇಕೆಂದು ಆ ವೃದ್ಧವೀರನು ಯೋಚಿಸಿದ್ದನು. ಹೀಗಿರುವಾಗ ಅಕಲ್ಪಿತ ವಿಘ್ನವು ಒದಗಿದ್ದರಿಂದ ಮಂದಾಕಿನಿಗೆ ವಿಷಾಧವಾದದ್ದು ಆಶ್ಚರ್ಯವಲ್ಲ. ಆಕೆಯು ತೀವ್ರ ಸ್ವರದಿಂದ ದುರ್ಜಯನನ್ನು ಕುರಿತು—"ಏನಂದಿರಿ? ನನ್ನಿಂದ ನಿಮ್ಮನ್ನು ಅಗಲಿಸಲಿಕ್ಕೆ ಮಾನಸಿಂಹ ಮಹಾರಾಜರು ಕಾರಣರಾದರೇ? ಅಥವಾ ಆ ದೋಷವನ್ನು ಅವರ ಮೇಲೆ ಯಾಕೆ ಹೊರಿಸಬೇಕು? ಆ ಅಪರಾಧಕ್ಕೆ ಶಹಾಜಾದಾನಾದ ಖುಸ್ರುವೇ ಕಾರಣನು! ಖುಸ್ರುವಿನ ದುರಾಚಾರದ ಫಲವನ್ನು ನಾವು ಅನುಭವಿಸಬೇಕಾಯಿತು; ಆದರೆ ಪ್ರಿಯಾ, ಯಾರು ನಮ್ಮನ್ನು ಅಗಲಿಸಹೋದರೂ, ತಾವು ನನ್ನನ್ನು ಆದರಿಸುತ್ತಿರುವವರೆಗೆ ನಾನಂತು ತಮ್ಮನ್ನು ಅಗಲಿ ಹೋಗುವ ಸಂಭವವು ಇಲ್ಲವೇ ಇಲ್ಲ. ಇಂಥ ಅನ್ಯಾಯದ ವ್ಯವಹಾರಗಳು ನಡೆಯುತ್ತಿರುವ ಈ ರಾಜಧಾನಿಯಲ್ಲಿ ನಾವು ಇನ್ನು ಇರುವದು ಬೇಡವೇ ಬೇಡ! ನಡೆಯಿರಿ, ಎಲ್ಲಿಯಾದರೂ ನಾವು ದೇಶಾಂತರಕ್ಕೆ ಹೋಗಿ ಬಡವರಾಗಿ ನಾವಿಬ್ಬರು ಕಾಲಹರಣ ಮಾಡೋಣ ನಡೆಯಿರಿ. ನಾಥನೇ, ಈ ದಾಸಿಯು ನಿಮ್ಮ ಬೆನ್ನಹತ್ತಿ ನೀವು ಹೋದಲ್ಲಿ ಬರಲು ಸಿದ್ಧವಾಗಿರುವಾಗ ಮಾನಸಿಂಹರ ಹದ್ದುಪಾರಿನ ಶಿಕ್ಷೆಗಾಗಿ ಇಷ್ಟು ದುಃಖಿಸುವದೇಕೆ? ಈ ಜಗತ್ತಿನಲ್ಲಿ ನಮ್ಮವಾಸಕ್ಕೆ ಎಲ್ಲಿಯೂ ಸ್ಥಳವು

ದೊರೆಯುಲಿಕ್ಕಿಲ್ಲವೆ? ಈ ಶಾಪಿತ ರಾಜಸ್ಥಾನವನ್ನು ಬಿಟ್ಟು ನಾವು ಎಲ್ಲಿಗಾದರೂ ಹೋಗಿ ಬಿಡೋಣ; ಅನ್ನಲು, ದುರ್ಜಯನು ನಿಶ್ಚಯದ ಸ್ವರದಿಂದ—"ಇಲ್ಲ, ನಾನು ನನ್ನ ಜನ್ಮಭೂಮಿಯನ್ನು ಬಿಟ್ಟು ಹೋಗುವದಿಲ್ಲ; ಮತ್ತು ಅಪರಾಧವಿಲ್ಲದೆ ಕೊಟ್ಟಿರುವ ಶಿಕ್ಷೆಯನ್ನು ನಾನು ಅನುಭವಿಸುವದೂ ಇಲ್ಲ. ಏನಾಗತಕ್ಕದ್ದು ನನ್ನ ಜನ್ಮಭೂಮಿಯಲ್ಲಿಯೇ ಆಗಿಹೋಗಲಿ? ಪ್ರಿಯೇ, ಒಂದು ಪಕ್ಷದಲ್ಲಿ ನಾವು ದೇಶಾಂತರಕ್ಕೆ ಹೋದರೆ ಆಗುವದೇನು? ನಾವು ಎಲ್ಲಿಹೋದರೂ ಮಾನಸಿಂಹನ ತೀಕ್ಷ್ಣ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾರೆವು. ಈಗ ಸಾಮ್ರಾಜ್ಯ ಸತ್ತೆಯು ಮಾನಸಿಂಹರವರ ಕೈಯಲ್ಲಿರುವದರಿಂದ ಅವರು ಬೇಕಾದದ್ದನ್ನು ಮಾಡಲಿಕ್ಕೆ ಸಮರ್ಥರಿರುವರು. ಅಂದಬಳಿಕ ನಾವು ದೇಶಾಂತರಕ್ಕೆ ಹೋಗುವದರಿಂದ ಪ್ರಯೋಜನವೇನು? ಮೇಲಾಗಿ ನಿನ್ನ ಮುಪ್ಪಿನ ಮರಣೋನ್ಮುಖ ತಂದೆಯನ್ನು ಕರಕೊಂಡು ಹೋಗುವದಾದರೂ ಹೇಗೆ? ಆದ್ದರಿಂದ ನಾನು ದೇಶಾಂತರಕ್ಕೆ ಹೋಗುವ ವಿಚಾರವನ್ನು ಬಿಟ್ಟು ಕೊಟ್ಟು ಈ ರಾಜದಾನಿಯಲ್ಲಿಯೇ ಎಲ್ಲಿಯಾದರೂ ಅಡಗಿಕೊಂಡಿದ್ದು, ಪ್ರಸಂಗವಶಾತ್ ಮಾನಸಿಂಹ ಮಹಾರಾಜರವರ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳುವದು ವಿಹಿತವಾಗಿ ನನಗೆ ತೋರುತ್ತದೆ."

ದುರ್ಜಯನ ಈ ಮಾತುಗಳನ್ನು ಕೇಳಿ ಮಂದಾಕಿನಿಯು ವಿಚಾರಮಗ್ನಳಾದಳು. ಆಕೆಗೆ ತನ್ನ ವಾಗ್ದತ್ತ ಪತಿಯ ಮಾತು ಯೋಗ್ಯವಾಗಿ ತೋರಿತು. ಆಕೆಯು ತಟ್ಟನೆ ಪತಿಯ ಹಸ್ತವನ್ನು ಹಿಡಿದು—"ವೀರವರ ದುರ್ಜಯ, ಇಗೋ, ನಾನು ಈಗ ಪ್ರೇಮದಿಂದ ನಿಮ್ಮ ಪಾಣಿಗ್ರಹಣವನ್ನು ಮಾಡಿರುವದರಿಂದ ಗಾಂಧರ್ವ ವಿವಾಹದಿಂದ ನೀವು ನನ್ನನ್ನು ಪತ್ನೀತ್ವೇನ ಪರಿಗ್ರಹಿಸತಕ್ಕದ್ದು. ಈ ವಿಪತ್ತಿನ ಪ್ರಸಂಗದಲ್ಲಿ ಇಷ್ಟೇ ವಿವಾಹವಿಧಿಯು ನಮ್ಮಿಬ್ಬರ ದಾಂಪತ್ಯದ ಘಟನೆಗೆ ಸಾಕಾಗಿರುವದು! ನನ್ನ ಪೂಜ್ಯ ತಂದೆಯ ಮನೋರಥವನ್ನು ಈಡೇರಿಸುವದು ನನ್ನ ಕರ್ತವ್ಯವಾಗಿರುವದರಿಂದ, ತ್ರಿಕರಣ ಪೂರ್ವಕವಾಗಿ ನಾನು ತಮ್ಮವಳಾದೆನು. ತಾವು ಪತ್ನಿತ್ವೇನ ಪರಿಗ್ರಹಿಸಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕು," ಎಂದು ನುಡಿಯಲು, ದುರ್ಜಯಸಿಂಹನು ಆನಂದಪರವಶನಾಗಿ ಮಂದಾಕಿನಿಯನ್ನು ಕುರಿತು—"ಪ್ರಿಯೇ, ಇಲ್ಲಿ ರಾಧಾಕೃಷ್ಣನ ಸನ್ನಿಧಿಯಲ್ಲಿ ನೀನು

ನನ್ನ ಪಾಣಿಗ್ರಹಣಮಾಡಿದ್ದರಿಂದ ನಿಜವಾಗಿಯೇ ನಾನು ಧನ್ಯನಾದೆನು! ನೀನು ನನ್ನ ಧರ್ಮಪತ್ನಿಯಾದದ್ದರಿಂದ ನಿನ್ನ ಹಿತಾಹಿತದ ಹೊಣೆಯು ನನ್ನ ಕೊರಳಿಗೆ ಬಿದ್ದಂತಾಯಿತು; ಆದರೆ ಪ್ರಿಯೇ, ಇನ್ನು ನಾವು ಇಲ್ಲಿ ಬಹಳಹೊತ್ತು ಮಾತಾಡುತ್ತ ನಿಲ್ಲಲಿಕ್ಕೆ ಬರುವಹಾಗಿಲ್ಲ. ಕಠೋರ ಹೃದಯದ ಮಾನಸಿಂಹನ ಶಾಸನವು ಅತ್ಯಂತ ತೀಕ್ಷ್ಣವೂ,ಅನುಲ್ಲಂಘನೀಯವೂ ಆಗಿರುವದು. ಆದ್ದರಿಂದ ನಮ್ಮಿಬ್ಬರ ದಾಂಪತ್ಯ ಸಂಬಂಧವು ಕೆಲದಿನದವುಟ್ಟಿಗಾದರೂ ಸುಖಕರವಾಗಬೇಕೆಂದು ನಾವು ಇಚ್ಛಿಸುತ್ತಿದ್ದರೆ, ನಾನು ಬೇಗನೆ ರಾಜಧಾನಿಯಿಂದ ಅದೃಶ್ಯವಾಗುವ ಹಾದಿಗೆ ಹತ್ತಬೇಕಾಗುವದು. ರೋಗಗ್ರಸ್ತನಾದ ನಿನ್ನ ಮುಪ್ಪಿನ ತಂದೆಯ ಯೋಗಕ್ಷೇಮವನ್ನು ನಿನ್ನ ಹೊರತು ಬೇರೆಯಾರೂ ನೋಡಿಕೊಳ್ಳುವವರು ಇಲ್ಲದ್ದರಿಂದ, ನೀನೂ ಬೇಗನೆ ನಿನ್ನ ತಂದೆಯ ಬಳಿಗೆ ಹೋಗು. ಪ್ರಿಯೇ, ಮುಂದೆ ಹಿತವಾಗಬೇಕೆಂಬ ಇಚ್ಛೆಯಿದ್ದರೆ ಈಗ ನಾವಿಬ್ಬರೂ ನಮ್ಮ ಮನಸ್ಸು ಕಲ್ಲುಮಾಡಿ ಒಬ್ಬರನ್ನೊಬ್ಬರು ಅಗಲತಕ್ಕದ್ದು; ಆದ್ದರಿಂದ ವಿಲಂಬವೇಕೆ ಮಾಡುವೆ? ನನ್ನ ಧರ್ಮಪತ್ನಿಯಾದ ನೀನು ನನ್ನ ಆಜ್ಞೆಯೆಂದು ತಿಳಿದು ನಿನ್ನ ಮನಸ್ಸಿನಲ್ಲಿಲ್ಲದಿದ್ದರೂ ತಟ್ಟನೆ ನಿನ್ನ ತಂದೆಯ ಬಳಿಗೆ ಹೊರಟುಹೋಗು."

ಪತಿಯ ಈ ಕಠೋರವಾದ ಮಾತುಗಳನ್ನು ಕೇಳಿ ಮಂದಾಕಿನಿಯು ದುಃಖದಿಂದ—"ಪ್ರಾಣಪ್ರಿಯಾ, ನೀನು ಹೇಳುವದು ನಿಜವು; ಆದರೆ ನನ್ನ ಸರ್ವಸ್ವವಾದ ನೀವು ಹೊರಟು ಹೋದ ಬಳಿಕ ನನ್ನ ಗತಿಯು ಏನಾಗುವದೋ ಏನೋ? ತಮ್ಮ ಸುಂದರ ಮೂರ್ತಿಯ ಸಾನ್ನಿಧ್ಯವೂ-ಧ್ಯಾನವೂ ನನ್ನ ಜೀವವಾಗಿರುವದರಿಂದ ತಮ್ಮನ್ನು ಅಗಲಿ ನಾನು ಹೇಗೆ ಇರಲಿ? ಪ್ರಾಣವಿಲ್ಲದ ದೇಹಕ್ಕೆ ಗೌರವವೂ-ಶೋಭೆಯೂ ಉಂಟಾಗಬಹುದೋ? ನಮ್ಮಿಬ್ಬರನ್ನು ಅಗಲಿಸುವಲ್ಲಿ ಅಮಾತ್ಯನು ಯಾವ ಲಾಭವನ್ನು ಕಂಡುಕೊಂಡಿರಬಹುದು! ನಾಥ, ನೀವು ನನ್ನನ್ನು ಬಿಟ್ಟುಕೊಟ್ಟು ಸರ್ವಥಾ ಹೋಗಬಾರದು. ನಾನಿರುತ್ತಿರುವಾಗ ಯಾವನೂ ನಿಮಗೆ ಕೇಡು ಬಗೆಯಲಾರನು. ನಾನು ಹಸಿದ ಹೆಣ್ಣು ಹುಲಿಯಂತೆ ನಿಮ್ಮ ಶತ್ರುಗಳ ಮೈಮೇಲೆ ಬಿದ್ದು ರಕ್ತ ಹೀರುವೆನು. ಇದರ ಮೇಲೆಯೂ ಮಹಾರಾಜರ ಕ್ರೋಧಕ್ಕೆ ಬಲಿಯಾಗಿ ನೀವು ಆಜನ್ಮ ಸೆರೆಯಾಳಾದರೆ, ನಾನೂ ತಮ್ಮೊ

ಡನೆ ಕಾರಾಗೃಹವಾಸವನ್ನು ಭೋಗಿಸುವೆನು; ಆದರೆ ತಾವು ನನ್ನನ್ನು ಬಿಟ್ಟು ಹೋಗಬಾರದು," ಎಂದು ದೈನ್ಯದಿಂದ ಬೇಡಿಕೊಳ್ಳಲು, ದುರ್ಜಯ ಸಿಂಹನು ಅತ್ಯಂತ ಮೂಢನಾಗಿ ತನ್ನ ಪತ್ನಿಯ ಕಡೆಗೆ ನೋಡುತ್ತ ನಿಂತು ಕೊಂಡನು. ಆಕೆಯ ಸೌಂದರ್ಯವು ಕ್ಷಣಕ್ಷಣಕ್ಕೆ ಹೆಚ್ಚುತ್ತಿರುವಂತೆ ಆತ ನಿಗೆ ತೋರಿತು. ತನ್ನ ಪ್ರಿಯ ಪತ್ನಿಯು ಇಷ್ಟು ಸುಂದರಳಿರುವಳೆಂಬದು ಈ ವೊದಲು ಆತನಿಗೆ ಎಂದೂ ಗೊತ್ತಾಗಿದ್ದಿಲ್ಲ! ಆಕೆಯ ಸುಂದರ ಭಾಷಣ, ಮಧುರಸ್ವರ, ಮನೋಹರ ಹಾವಭಾವ ಇವೆಲ್ಲ ಆತನಿಗೆ ಹೊಸ ವಾಗಿ ತೋರಹತ್ತಿ, ಆತನು—"ಈಕೆಯನ್ನು ತನ್ನ ಸಂಗಡ ಕರಕೊಂಡು ಹೋಗಬೇಕು" ಎಂದು ಮನಸ್ಸಿನಲ್ಲಿ ಮಾಡಿದನು; ಆದರೆ ಉತ್ತರ ಕ್ಷಣದ ಲ್ಲಿಯೇ ಆತನಿಗೆ ತನ್ನ ನಿಶ್ಚಯದ ಸ್ಮರಣವಾಯಿತು. ಆತನು ಅಂಬರ ರಾಜಧಾನಿಯಲ್ಲಿಯೇ ಗುಪ್ತವಾಗಿ ಇರಬೇಕೆಂದು ಮಾಡಿದನು. ಅಂದಬ ಳಿಕ ಆಕೆಯನ್ನು ಕರಕೊಂಡು ಹೋಗುವ ಬಗೆಹೇಗೆ? ಕರಕೊಂಡು ಹೋದರೆ ಆಕೆಯ ಮರಣೋನ್ಮುಖನಾದ ತಂದೆಯ ಗತಿಯೇನಾಗಬೇಕು? ಇವೆಲ್ಲ ವಿಚಾರಗಳು ಮನಸ್ಸಿನಲ್ಲಿ ಬಂದು ಅವನು ತನ್ನ ಮನಸ್ಸನ್ನು ಪುನಃ ಕಠೋರವಮಾಡಿ ತನ್ನ ಪತ್ನಿಯನ್ನು ಕುರಿತು—"ಪ್ರಿಯೇ ಮಂದಾಕಿನೀ, ನೀನು ನನಗೆ ಇನ್ನು ಹೋಗಗೊಡು. ಭವಿಷ್ಯಕಾಲದ ಸುಖಕ್ಕೆ ಲಕ್ಷ್ಯಗೊ ಟ್ಟರೆ ನನ್ನ ವಿಚಾರದಂತೆ ನೀನು ನಡೆಯಬೇಕಾಗುವದು. ನೀನು ಇನ್ನು ದುಃಖಮಾಡಬೇಡ. ನೀನು ಶೋಕಾಕುಲಳಾದದ್ದನ್ನು ನೋಡಿ ನಾನು ಮೂಢನಾಗಿ ಮುಂದುಗಾಣದೆ ಹೋಗುವೆನು. ಕದಾಚಿತ್ ಮಹಾರಾಜರು ಪ್ರಸನ್ನರಾಗಿ ನನ್ನ ಅಪರಾಧವನ್ನು ಕ್ಷಮಿಸಿದರೆ, ಕೂಡಲೆ ನಾನು ನಿನ್ನನ್ನು ಕೂಡಿಕೊಳ್ಳುವೆನು. ನಿನ್ನ ದಿವ್ಯ ಪ್ರೇಮಕ್ಕೆ ಎರವಾಗಿ ಹೋಗಬೇಕಾದರೆ ನನಗೆ ಎಷ್ಟು ದುಃಖವಾಗುತ್ತಿರುವದೆಂಬದನ್ನು ನಾನೇನು ಹೇಳಲಿ? ಆದರೆ ಮಾಡುವದೇನು? ಭವಿತವ್ಯವನ್ನು ಯಾರು ತಪ್ಪಿಸುವರು? ನಿನ್ನ ಇದೇ ದರ್ಶನವೇ ಕಡೆಯದಾಗಬೇಕೆಂದು ದೇವರ ಸಂಕೇತವಿದ್ದರೆ, ಅದಕ್ಕಾಗಿ ನಾವು ಮರ್ತ್ಯರು ಮಾಡುವದೇನು? ಆದರೆ ಪ್ರಿಯೇ, ಇನ್ನು ಹೋಗು, ನನ್ನ ನಿಶ್ಚಯವು ಬದಲಾಗಲಾರದು," ಎಂದು ನುಡಿದು ತನ್ನ ಪ್ರಿಯ ಪತ್ನಿ ಯನ್ನು ತಬ್ಬಿಕೊಳ್ಳುವಾಗ ಆತನ ಕಣ್ಣೀರುಗಳು ಉದುರಿದವು!

ಎಂದೂ ಕಣ್ಣೀರು ಹಾಕದ ತನ್ನ ವೀರ ಪತಿಯು ಹೀಗೆ ಕಣ್ಣೀರು ಹಾಕುವದನ್ನು ನೋಡಿ ಮಂದಾಕಿನಿಯ ಮನಸ್ಸಿನ ಸ್ಥಿತಿಯು ಒಮ್ಮೆಲೇ ತಿರುಗಿತು. ಇಷ್ಟು ಅನರ್ಥಕ್ಕೆ ರಾಜಪುತ್ರನಾದ ಖುಸ್ರುವೂ, ಅಮಾತ್ಯ ನಾದ ಮಾನಸಿಂಹನೂ ಕಾರಣರಾದರೆಂದು ತಿಳಿದು ಆವರ ಮೇಲೆ ಆ ವೀರ ವನಿತೆಯು ಸಂತಾಪಗೊಂಡಳು. ಆಕೆಯು ತೀವ್ರ ಸ್ವರದಿಂದ ಪತಿಯನ್ನು ಕುರಿತು:—"ನಾಥ, ತಾವು ಹೋಗಬೇಕು, ಈ ಕಠೋರ ಹೃದಯದ ಮಂದಾಕಿನಿಯು ತಮ್ಮನ್ನು ಹೋಗಗೊಡುವಳು. ನಾನಾದರೂ ಇನ್ನು ಅತ್ಯಂತ ಸಾಹಸಿಯಾಗುವೆನು. ನನಗೆ ಪತಿವಿಯೋಗದ ದುಃಖವನ್ನೊದ ಗಿಸಿಕೊಟ್ಟ ಆ ಶಹಾಜಾದಾ ಖುಸ್ರುವಿನ, ಹಾಗೂ ಅಮಾತ್ಯ ಮಾನಸಿಂ ಹನ ಸೇಡು ತೀರಿಸಿಕೊಳ್ಳದಿದ್ದರೆ ನಾನು ವೀರ ಕ್ಷತ್ರಿಯನ ಹೊಟ್ಟೆಯಲ್ಲಿ ಹುಟ್ಟಿ, ವೀರ ಕ್ಷತ್ರಿಯನ ಕೈಯನ್ನು ಹಿಡಿಯಬೇಕೇಕೆ? ನಾನು ಇಂದು ನನ್ನ ಹೃದಯವನ್ನು ಕಲ್ಲುಮಾಡಿದೆನು. ನನ್ನ ಈ ಕಠಿಣಹೃದಯವು ಖುಸ್ರುವಿನ ಸೇಡುತೀರಿ, ಪುನಃ ನಿಮ್ಮ ದರ್ಶನವಾದಾಗ ಮೃದುವಾದೀತು. ನಾಥ, ನನ್ನನ್ನು ತಾವು ಇಷ್ಟು ಆಶ್ಚರ್ಯಚಕಿತರಾಗಿ ನೋಡಬಾರದು. ಈ ಗಗನ ವಿಹಾರಿಯಾಗಿರುವ ಚಂದ್ರನೂ, ನಮ್ಮ ಈ ದುಃಖದ ಸ್ಥಿತಿಯನ್ನು ನಿಶ್ಚಲ-ನಿಸ್ತಬ್ಧವಾಗಿ ನೋಡುತ್ತಿರುವಂತೆ ಶಾಂತವಾಗಿರುವ ಈ ದಿಗ್ದೇವತೆ ಗಳೂ, ನಮ್ಮೆದುರಿನಲ್ಲಿ ಸರ್ವಸಾಕ್ಷಿಯಾಗಿ ನಿಂತಿರುವ ಭಗವಾನ್ ಶ್ರೀರಾಧಾ ರಮಣನೂ ಸಾಕ್ಷಿಯಾಗಿರಲು, ನಿಮ್ಮ ಚರಣಸ್ಪರ್ಶಮಾಡಿ ಪ್ರತಿಜ್ಞೆಮಾಡು ವೆನು ಕೇಳಿರಿ—ನನ್ನ ಆ ಇಬ್ಬರು ಶತ್ರುಗಳ ನಿಃಪಾತವಾಗುವವರೆಗೆ ನಾನು ಎಂದೂ ವಿಶ್ರಾಂತಿಯನ್ನು ಹೊಂದುವದಿಲ್ಲವು."

ತನ್ನ ಪತ್ನಿಯ ಈ ಕಠೋರ ಪ್ರತಿಜ್ಞೆಯನ್ನು ಕೇಳಿ ದುರ್ಜಯನು ಬಗಿಲು ಬಿದ್ದನು; ಆತನಿಗೆ ಇನ್ನು ಏನುಮಾತಾಡಬೇಕೆಂಬದು ತೋಚದಾ ಯಿತು. ಇನ್ನು ತನ್ನ ಪತ್ನಿಯ ಗತಿಯೇನಾಗುವದೆಂಬ ವಿಚಾರದಲ್ಲಿ ಮಗ್ನ ನಾಗಿ ಆತನು ಬೇರೆಯಾವದನ್ನೂ ಅರಿಯದಾದನು. ನಾನು ಎಲ್ಲಿರುವೆನು, ಯಾವ ಸ್ಥಿತಿಯಲ್ಲಿರುವೆನು ಎಂಬದರ ಎಚ್ಚರವೂ ಆತನಿಗೆ ಇಲ್ಲದಾಯಿತು. ಹೀಗೆ ಕೆಲಕಾಲವು ಕ್ರಮಿಸಿದ ಮೇಲೆ ಆತನು ಎಚ್ಚತ್ತು ತನ್ನ ಪ್ರಿಯಪತ್ನಿ ಯನ್ನು ಕುರಿತು—"ಪ್ರಿಯೇ ಮಂದಾಕಿನೀ," ಎಂದು ನುಡಿದು ತನ್ನ ಹೆಂಡ

ತಿಯ ಕಡೆಗೆ ನೋಡುತ್ತಿರಲು, ಅವಳು ಅಲ್ಲಿಂದ ಯಾವಾಗೋ ಹೊರಟು ಹೋಗಿಬಿಟ್ಟಿದ್ದಳು. ಆಕೆಯು ನುಡಿದ ಶಬ್ದಗಳು ಮಾತ್ರ ಪುನಃ ಪುನಃ ಪ್ರತಿಧ್ವನಿತವಾಗುವಂತೆ ಆತನಿಗೆ ಭಾಸವಾಗುತ್ತಿತ್ತು! ಆತನು ನಾಲ್ಕೂ ಕಡೆಗೆ ನೋಡಿ ಮಂದಾಕಿನಿಯನ್ನು ಕಾಣದೆ ಮರುಗಿದನು. ಆತನು ತನ್ನ ಮನಸ್ಸಿನಲ್ಲಿ--"ಇನ್ನು ತನ್ನ ಪ್ರಿಯಳೊಡನೆ ಎಲ್ಲಿಗಾದರೂ ಹೋಗಿ ಬಿಡುವದೇ ಯೋಗ್ಯವೆಂದು" ಯೋಚಿಸಿ, ಅದನ್ನು ತನ್ನ ಪ್ರಿಯಳ ಮುಂದೆ ಹೇಳಬೇಕೆಂದು ಮಾಡಿದ್ದನು; ಆದರೆ ಅವಳು „ಹೋದವಳು ಹೋಗಿಬಿಟ್ಟಿದ್ದಳು. ತನ್ನ ಹೆಂಡತಿಯು ಹೇಳಿದಂತೆ "ನಾವು ಎಲ್ಲಿಯಾದರೂ ಹೋಗಿ ಬಡತನದಿಂದ ಕಾಲಹರಣ ಮಾಡೋಣ"ವೆಂಬ ವಿಚಾರವು ಆತನಿಗೆ ಬಹಳ ತಡಮಾಡಿ ಹುಟ್ಟಿತು; ಆದರೆ ಇನ್ನು ಮೇಲೆ ಆ ವಿಚಾರದ ಉಪಯೋಗ ವೇನಾಗಬೇಕು? ರಜಪೂತ ವೀರರ ಪ್ರತಿಜ್ಞೆಯಂತೆ ರಜಪೂತ ವೀರಪತ್ನಿಯರ ಪ್ರತಿಜ್ಞೆಯೂ ದಾರುಣವಾದದ್ದೇ ಸರಿ! ಆದ್ದರಿಂದ ದೆಸೆಗೇಡಿಯಾದ ದುರ್ಜಯನು ಶೂನ್ಯಹೃದಯನಾಗಿ ತನ್ನ ಪ್ರೀಯಳನ್ನು ಸ್ಮರಿಸುತ್ತ, ಎದುರಿಗೆ ಸಮೀಪದಲ್ಲಿರುವ ಶ್ರೀರಾಧಾಕೃಷ್ಣನನ್ನು ನಮಸ್ಕರಿಸಿ—"ಪ್ರಭೋ, ನಿನ್ನ ಇಚ್ಛೆಯು" ಎಂದು ನುಡಿದು ಎದುರಿಗಿನ ಪರ್ವತ ಶ್ರೇಣಿಯ ಕಡೆಗೆ ಹೊರಟು ಹೋದನು!



## ೪ ನೆಯ ಪ್ರಕರಣ

# ಪ್ರಯಾಣ.

ಈ ಲೋಕದಲ್ಲಿ ವ್ಯವಹಾರ ಮಗ್ನರು ನಿಜವಾಗಿ ಪರೋಪಕಾರಮಾಡುವದು ದುರ್ಲಭವೇ ಸರಿ; ಯಾಕಂದರೆ, ಪರೋಪಕಾರ ಮಾಡುವವರು ಪರಪೀಡೆಮಾಡುವ ಸಂಭವವಿಲ್ಲದಿದ್ದು, ವ್ಯವಹಾರದಲ್ಲಿ ಸ್ವಾರ್ಥಮೂಲಕ ಗುಪ್ತವಾಗಿಯಾಗಲಿ, ವ್ಯಕ್ತವಾಗಿಯಾಗಲಿ ಪರಪೀಡೆಯು ಆಗಾಗ್ಗೆ ಆಗು

ತ್ತಲೇ ಇರುತ್ತದೆ; ಆದ್ದರಿಂದ ಪರೋಪಕಾರ ಮಾಡುವವರೆಂದು ನಾವು ಉಬ್ಬುವದಕ್ಕಿಂತ, ಸ್ವಾರ್ಥದ ಕಸುವು ಕಡಿಮೆಮಾಡುತ್ತ ನಮ್ಮಿಂದ ಪರ ಪೀಡೆಯು ಘಟಿಸದಂತೆ ಎಚ್ಚರ ಪಡುವದು ಈಶ್ವರ ಪ್ರೀತಿಯ ಸಂಬಂಧ ದಿಂದ ಹಿತಕರವಾಗಿರುವದು; ಆದರೆ ಸ್ವಾರ್ಥಪರಾಯಣರಾದ ನಾವು ಪರೋ ಪಕಾರದ ಸೋಗಿನಿಂದ ಸ್ವಾರ್ಥಸಾಧಿಸಿಕೊಳ್ಳುವದೇ ಹೆಚ್ಚು; ಉತ್ಕಟ ಸ್ವಾರ್ಥಬುದ್ಧಿಯು ಪರಪೀಡೆಯ ಮೂಲವಾಗಿರುತ್ತದೆಂಬದನ್ನು ಮರೆಯ ಲಾಗದು; ಆದ್ದರಿಂದ ಅಂಬರಾಧೀಶ್ವರನಾದ ರಾಜಾ ಮಾನಸಿಂಹನ ಸ್ವಾರ್ಥದ ಉತ್ಕಟತೆಯನ್ನು ಇಲ್ಲಿ, ದುರ್ಲಕ್ಷಿಸತಕ್ಕದ್ದಲ್ಲ. ಅಕಬರನು ಮುಪ್ಪಿನಿಂದ ಜರ್ಜರನಾಗಿ ಅತ್ಯಂತ ವ್ಯಾಧಿಪೀಡಿತನಾಗಿರುವಾಗ ತನ್ನ ಅಧಿ ಕಾರವನ್ನು ಇಡಿಯ ಮೊಗಲ ಸಾಮ್ರಾಜ್ಯದ ಮೇಲೆ ಸ್ಥಾಪಿಸಬೇಕೆಂದು ಆ ಅಂಬರಾಧೀಶ್ವರನು ಹವಣಿಸುತ್ತಿದ್ದನೆಂದು ಹೇಳಬಹುದು; ಅಂತೇ ಆತನು ಅಕಬರ ಬಾದಶಹನ ತರುವಾಯ ಆತನ ಪಟ್ಟಕ್ಕೆ ಬಾಧ್ಯಸ್ಥನಾದ ಸಲೀಮನನ್ನು, ಆತನು ತನ್ನ ತಂಗಿಯ ಗಂಡನಿದ್ದರೂ ಆತನನ್ನು ಪಟ್ಟಕ್ಕೆ ಕೂಡ್ರಗೊಡದೆ ಆತನ ಮಗನಾದ ತನ್ನ ಹಸ್ತಕ ಖುಸ್ರುವನ್ನು ದಿಲ್ಲಿಯ ಪಟ್ಟಕ್ಕೆ ಕೂಡ್ರಿಸಬೇಕೆಂದು ಹವಣಿಸುತ್ತಿದ್ದನು. ಕೇವಲ ಸ್ವಾರ್ಥಕ್ಕಾಗಿ ಮೊಗಲರ ಪಕ್ಷವಹಿಸಿ ಸ್ವದೇಶದ್ರೋಹವನ್ನೂ, ಸ್ವದೇಶಬಾಂಧವರದ್ರೋಹ ವನ್ನೂ ಮಾಡಿದ ರಾಜಾ ಮಾನಸಿಂಹನಿಗೆ ಇದು ಅಸ್ವಾಭಾವಿಕವೂ ಅಲ್ಲವು. ಈ ನೀಚಸ್ವಾರ್ಥದ ಮೂಲಕ ಮಾನಸಿಂಹನಲ್ಲಿಯ ಉತ್ತಮೋತ್ತಮ ಗುಣ ಗಳೆಲ್ಲ ಸ್ವದೇಶೋದ್ಧಾರದ ದೃಷ್ಟಿಯಿಂದ ಮಣ್ಣುಗೂಡಿದವೆಂದು ಹೇಳಬ ಹುದು. ಮಾನಸಿಂಹನ ಘನವಂತಿಕೆಯೂ, ತೇಜಸ್ವಿತೆಯೂ, ಗುಣಗಳ ಉಜ್ವಲತೆಯೂ ಪೂಜ್ಯ ಪ್ರತಾಪಸಿಂಹನಂಥ ಭಾರತಭೂಮಾತೆಯ ಶ್ರೇಷ್ಠ ಸತ್ಪುತ್ರನ ಸತ್ವವನ್ನು ಕುಗ್ಗಿಸುವದಕ್ಕಾಗಿ ಉಪಯೋಗಿಸಿದ್ದು ಪರಮದುಃಖದ ಸಂಗತಿಯಲ್ಲದೆ ಮತ್ತೇನು? ಈಗಲಾದರೂ ಮಾನಸಿಂಹನು ತನ್ನ ತಂಗಿ ಯಾದ ಜೋಧಬಾಯಿಯ, ಹಾಗು ಸೋದರಳಿಯನಾದ ಖುಸ್ರುವಿನ ಹಿತ ವನ್ನು ಸಾಧಿಸುವ ಸೋಗಿನಿಂದ ಪ್ರಾಮುಖ್ಯವಾಗಿ ತನ್ನ ಉತ್ಕರ್ಷ-ಹಟಗ ಳನ್ನು ಸಾಧಿಸಿಕೊಳ್ಳಲು ಯತ್ನಿಸುತ್ತಿದ್ದನೆಂದು ಹೇಳಬಹುದು. ಈ ಯತ್ನ ದಲ್ಲಿ ಆತನು ತನ್ನ ತಂಗಿ-ಸೋದರಳಿಯರನ್ನು ತನ್ನ ಮನೆಯಲ್ಲಿಟ್ಟುಕೊಂಡು

ತನ್ನ ತಂಗಿಯ ಪತಿಭಕ್ತಿಯನ್ನೂ, ಸೋದರಳಿಯನ ಪಿತೃಭಕ್ತಿಯನ್ನೂ ಕುಗ್ಗಿಸಲು ಪರಿಪರಿಯಿಂದ ಯತ್ನಿಸಿದನು; ಆದರೆ ಜೋಧಬಾಯಿಯ ಉತ್ಕಟ ಪತಿಭಕ್ತಿಯ, ಹಾಗು ಖುಸ್ರುವಿನ ಚಾಂಚಲ್ಯದ ಪಿತೃಭಕ್ತಿಯ ಮುಂದೆ ಮಾನಸಿಂಹನ ಆಟವು ನಡೆಯದೆ, ಆ ರಜಪೂತ ವೀರನ ಆ ಅಮಾರ್ಗಗಮನದ ಫಲವನ್ನು ಪಾಪ! ಜೋಧಬಾಯಿಯೂ, ಖುಸ್ರುವೂ ಅನುಭವಿಸಬೇಕಾಯಿತು! ಇರಲಿ.

ಆದಿನ ರಾತ್ರಿ ಮಾನಸಿಂಹನು ಖುಸ್ರುವನ್ನು ಆತನ ತಾಯಿಯ ಬಳಿಗೆ ಕಳಿಸಿ ಹೋದದ್ದು ವಾಚಕರ ಸ್ಮರಣದಲ್ಲಿರಬಹುದು; ಆದರೆ ತನ್ನ ಘೋರ ಕೃತಿಯ ಪಶ್ಚಾತ್ತಾಪದಿಂದ ಪರಿತಪ್ತನಾದ ಆ ಅಭಿಮಾನಿ ಖುಸ್ರುವು, ತಿರುಗಿ ತನ್ನ ಮಾವನನ್ನು ಕಾಣಲಿಚ್ಛಿಸಲಿಲ್ಲ. ಆತನು ಮರುದಿನವೇ ತನ್ನ ಮಾವನ ಅಂಬರ ರಾಜಧಾನಿಯನ್ನು ಬಿಟ್ಟು ಹೋಗಲು ನಿಶ್ಚಯಿಸಿ ತನ್ನ ತಾಯಿಯನ್ನು ಕುರಿತು—

ಖುಸ್ರು—ಅವ್ವಾ, ನಾನು ಹೋಗುವೆನು, ಅಪ್ಪಣೆಕೊಡು.

ಜೋಧಬಾಯಿ—ಅದೆಲ್ಲಿಗೆ ಹೋಗುವೆ ಕುಮಾರಾ? ಆದ ಮಾತಿನ ಸಲುವಾಗಿ ವ್ಯಸನಪಡುವದು ನೆಟ್ಟಗಲ್ಲ. ಮಹಾರಾಜರು ನಿನ್ನ ಅಪರಾಧಗಳನ್ನೆಲ್ಲ ಕ್ಷಮಿಸಿರುವರು.

ಖುಸ್ರು—ಅವ್ವಾ, ನಾನು ಕ್ಷಮೆಯನ್ನೆಲ್ಲಿ ಬೇಡಿಕೊಂಡಿರುವೆನು? ಕ್ಷಮೆಬೇಡಲಿಕ್ಕೆ ನಾನು ಯೋಗ್ಯನಲ್ಲ. ಅಂದಬಳಿಕ ಕೇಳಿಕೊಳ್ಳದೆ ದೊರೆತ ಕ್ಷಮೆಯು ನನಗೆ ಹೇಗೆ ಸಹ್ಯವಾದೀತು ನೀನೇ ಹೇಳು. ಇಂಥ ಕ್ಷಮೆಗಿಂತ ಶಿಕ್ಷೆಯೇ ಒಳ್ಳೆಯದು. ನಾನು ಇನ್ನು ತಾಸೆರಡು ತಾಸಿನಲ್ಲಿ ಅಂಬರ ರಾಜಧಾನಿಯನ್ನು ಬಿಡುವೆನು.

ಜೋಧಬಾಯಿ—ತಮ್ಮಾ, ನೀನು ಹೋಗುವದಾದರೂ ಎಲ್ಲಿಗೆ? ಆಗ್ರಾಕ್ಕೇ?

ಖುಸ್ರು—ಇಲ್ಲ.

ಜೋಧಬಾಯಿ—(ಅತ್ಯುತ್ಸುಕತೆಯಿಂದ) ಹಾಗಾದರೆಲ್ಲಿಗೆ?

ಖುಸ್ರು—ನನ್ನ ಕಣ್ಣುಗಳೆರಡು ಹಾದಿಯ ತೋರಿಸಿದಲ್ಲಿಗೆ, ಹಾಗು ನನ್ನ ಕಾಲುಗಳೆರಡು ಕರೆದೊಯ್ದಲ್ಲಿಗೆ ಹೋಗುವೆನು. ಅವ್ವಾ, ನನಗೆ

ಹೋಗಲಿಕ್ಕೆ, ಅಥವಾ ಕಾಲೂರಿ ನಿಲ್ಲಲಿಕ್ಕೆ ಸ್ಥಳವಾದರೂ ಎಲ್ಲಿದೆ ಹೇಳು? ನಾನು ಅಪ್ಪನಕಡೆಗೆ, ಛೀ ಛೀ! ಬೇಡ, ಅದರ ನೆನಪು ಸಹ ಬೇಡ. ಅವರು ನನ್ನನ್ನು ಶತ್ರುವಿನಂತೆ ನೋಡುವರು; ಆದ್ದರಿಂದ ಆಗ್ರಾಕ್ಕೆ ಹೋಗಿ ಅವರನ್ನು ತೊಂದರೆಪಡಿಸುವದರಲ್ಲಿ ಅರ್ಥವಿಲ್ಲ. ಅವರ ತಿರಸ್ಕಾರದ ನೋಟವು ನನಗೆ ಸಹನವೂ ಆಗಲಿಕ್ಕಿಲ್ಲ.

ಜೋಧಬಾಯಿ—ಬಾಳಾ, ನಾವು ಆಗ್ರಾಕ್ಕೆ ಹೋಗೋಣ ನಡೆ. ನಾನೂ ನಿನ್ನ ಸಂಗಡ ಬರುವೆನು. ನನ್ನ ಸ್ನೇಹಮಯ ಹೃದಯವು ದುರ್ಭೇದ್ಯವಾದ ದುರ್ಗದಂತೆ ನಿನ್ನನ್ನು ಶತ್ರುಗಳಿಂದ ರಕ್ಷಿಸಲು ಸಿದ್ಧವಾಗಿರುವದು. ನಿನ್ನ ಸಲುವಾಗಿ ನಾನು ಸಾವಿರಾರು ವಜ್ರಗಳ ಆಘಾತವನ್ನಾದರೂ ತಡೆಯುವೆನು. ಅತ್ಯಂತ ಕ್ಷುದ್ರ ಶಕ್ತಿಯ ಹೆಣ್ಣುಹಕ್ಕಿಯೂ ತನ್ನ ಮರಿಗಳನ್ನು ರಕ್ಷಿಸುತ್ತಿರಲು, ನನ್ನಂಥ ಉಚ್ಚಪದವಿಯ ಶ್ರೇಷ್ಠ ಅಧಿಕಾರವಿರುವ ಸ್ತ್ರೀಯು ನಿನ್ನನ್ನು ರಕ್ಷಿಸಲಿಕ್ಕಿಲ್ಲವೆ?

ಖುಸ್ರು—ಅವ್ವಾ, ನನ್ನಸಲುವಾಗಿ ನಿನಗೆ ಇಷ್ಟು ಶ್ರಮವೇಕೆ? ಏನಾಗುವದು ನನಗೇ ಆಗಲಿ, ನೀನು ಸುಖಕ್ಕೆ ಎರವಾಗಬೇಡ.

ಜೋಧಬಾಯಿ—ತಮ್ಮಾ, ನನಗೆ ಇನ್ನೆಲ್ಲಿಯ ಸುಖವು? ನನ್ನನ್ನು ಸುಖಿಯಾಗಮಾಡುವವರು ಯಾರಿರುವರು? ಇನ್ನು ನನಗೆ ನಿಜವಾದ ಸುಖವಾಗುವದು ನಿನ್ನಿಂದಲೇ; ನನ್ನ ನಿಜವಾದ ಸುಖ-ದುಃಖವು ನೀನೇ ಆಗಿರುವೆ. ಈ ಆಯುಷ್ಯದಲ್ಲಿ ನನಗೆ ಇನ್ನು ಯಾತರ ಆಶೆಯೂ ಉಳಿದಿರುವದಿಲ್ಲ. ನಾನು ಅಂಬರಮಹಾರಾಜನ ಮಗಳಾಗಿದ್ದು, ಅಕಬರಬಾದಶಹನ ಸೊಸೆಯಾಗಿರುವೆನು. ನಾನು ಒಂದಾನೊಂದು ದಿನ ಸಾಮ್ರಾಜ್ಞಿಯಾದೇನೆಂದು ತಿಳಿದು ಅಪ್ಪನು ನನಗೆ ಅಲ್ಲಿ ಕೊಟ್ಟನು; ಆದರೆ ಆ ಸುಖಸ್ವಪ್ನವು ಮುಗಿದುಹೋಯಿತು; ಅದು ಸ್ವಪ್ನವೇ ಆಗಿ ಹೋಯಿತು.

ಹೀಗೆಂದು ನುಡಿಯುವಾಗ ಜೋಧಬಾಯಿಯ ಕಣ್ಣೊಳಗಿಂದ ಬಳಬಳ ನೀರು ಸುರಿಯಹತ್ತಿದವು. ಅದನ್ನು ನೋಡಿ ಕುಮಾರನಿಗೆ ಬಹಳ ವ್ಯಸನವಾಯಿತು. ಆತನು ತನ್ನ ತಾಯಿಯನ್ನು ಕುರಿತು—

ಖುಸ್ರು—ಅವ್ವಾ, ಇನ್ನು ಆ ಮಾತಿನ ವಿಚಾರಮಾಡುವಲ್ಲಿ ಅರ್ಥವೇನು? ಸುಮ್ಮನೆ ಮನಸ್ಸಿಗೆ ವ್ಯಥೆಯನ್ನುಂಟುಮಾಡಿಕೊಳ್ಳಬೇಡ,

ಶಾಂತಳಾಗು. ಆದದ್ದು ತಿರುಗಿ ಬರುವಹಾಗಿಲ್ಲ. ಆಗುವದನ್ನು ತಪ್ಪಿಸಿ ಕೊಳ್ಳುವಹಾಗಿಲ್ಲ; ಆದರೆ ಅವ್ವಾ, ನಾನು ಸ್ಪಷ್ಟವಾಗಿ ಹೇಳುವೆನು, ಈ ಮೋರೆಯನ್ನು ನಾನು ಪುನಃ ಮಾನಸಿಂಹನಿಗೆ ತೋರಿಸುವಹಾಗಿಲ್ಲ, ಇನ್ನು ಬೆಳಗಾಗಲಿಕ್ಕೆ ತಾಸೆರಡುತಾಸಿರಬಹುದು. ನಿನ್ನಿನಿಂದ ನನಗೆ ನಿದ್ದೆಯಿಲ್ಲದ್ದ ರಿಂದ ಹೇಗೆಹೇಗೋ ಆಗುತ್ತಲಿದೆ. ಮಾನಸಿಂಹಮಹಾರಾಜರವರು ಬರುವ ದರೊಳಗಾಗಿಯೇ ನೀನು ನನಗೆ ಪ್ರಸನ್ನಮನಸ್ಸಿನಿಂದ ಅಪ್ಪಣೆಕೊಡು, ಎಲ್ಲಿ ಗಾದರೂ ಹೋಗುವೆನು.

ಜೋಧಬಾಯಿ—(ಸ್ವಲ್ಪಹೊತ್ತು ವಿಚಾರಮಾಡಿ ಸ್ನೇಹಪೂರ್ಣಸ್ವರ ದಿಂದ)ಕುಮಾರಾ, ನಿನ್ನ ಮನಸ್ಸಿನಲ್ಲಾದರೂ ಏನಿರುತ್ತದೆ? ನೀನು ನನ್ನ ಅಪ್ಪಣೆಯನ್ನು ಮನ್ನಿಸುತ್ತಿದ್ದರೆ, ಈಗ ನಿನ್ನನ್ನು ನಾನು ಆಜ್ಞಾಪಿಸುವೆನು, ಹೀಗೆ ಮಾಡು. ನೀನು ಅವಿಚಾರದಿಂದ ಮಾಡುತ್ತಲಿರುವ ಘಾತಕ ಕೃತ್ಯಗ ಳನ್ನು ಇನ್ನು ಬಿಡು. ನೀನು ಹೊಟ್ಟೆಯಲಿ ಹುಟ್ಟಿದ ಮಗನಾಗಿರುವದರಿಂದ ನಿನ್ನ ಕೈಯಿಂದ ಎಷ್ಟು ಅಪರಾಧಗಳಾಗಿದ್ದರೂ ನಿನ್ನ ಹಡೆದವರು ಕ್ಷಮೆ ಯನ್ನೇ ಮಾಡುವರು. ಅವರಿಂದ ಕ್ಷಮೆಯನ್ನು ಸಂಪಾದಿಸುವ ಅಧಿಕಾರವು ನಿನಗೆ ಇದ್ದೇ ಇರುತ್ತದೆ. ಅಂತರಂಗದಿಂದ ನಿನ್ನಮೇಲೆ ಅವರ ಸಂಪೂರ್ಣ ಪ್ರೇಮವಿರುವದು. ಆದ್ದರಿಂದ ನೀನು ವಿನಯದಿಂದ ನಡೆದುಕೊಂಡು ನಿನ್ನ ನಡತೆಯನ್ನು ತಿದ್ದಿಕೊಂಡರೆ, ಅವರ ಸಿಟ್ಟಿಗೆ ನೀನು ಗುರಿಯಾಗಲಿಕ್ಕಿಲ್ಲ. ನಡೆ, ನಾನೂ ನಿನ್ನ ಸಂಗಡ ಅವರ ಬಳಿಗೆ ಬರುವೆನು.

ಖುಸ್ರು—ಏನಂದಿ? ಅವ್ವಾ! ನೀನು ಮತ್ತೆ ಅಪ್ಪನ ಬಳಿಗೆ ಹೋಗು ವೆಯಾ? " ನೀನು ಇನ್ನು ನನ್ನ ಎದುರಿಗೆ ಬರಬೇಡ " ಎಂದು ಅಪ್ಪನು ನಿನ್ನನ್ನು ತಿರಸ್ಕರಿಸಿದ ಅಪಮಾನವನ್ನು ಇಷ್ಟರೊಳಗೆ ನೀನು ಮರೆತುಬಿ ಟ್ಟೆಯಾ? ಆ ಅಪಮಾನಕ್ಕಾಗಿಯೇ ನೀನು ಅಲ್ಲಿಂದ ಹೊರಟುಬಂದು ಇಲ್ಲಿ ತವರಮನೆಯಲ್ಲಿ ಇರುವದಿಲ್ಲವೆ? ಅವ್ವಾ, ರಜಪೂತಸ್ಥಾನದ ಸ್ತ್ರೀಯರು ಇಷ್ಟು ಅಳ್ಳೆದೆಯವರೂ, ಅಪಮಾನವನ್ನು ಸಹಿಸುವವರೂ ಇರು ವದಿಲ್ಲ. ನೀನು ಅಲ್ಲಿಂದ ಬರುವಾಗ ಮಾಡಿದ ಪ್ರತಿಜ್ಞೆಯನ್ನು ಇಷ್ಟರ ಲ್ಲಿಯೇ ಮರೆತುಬಿಟ್ಟೆಯೇನು? ಬೇಡ, ನನ್ನ ಸಲುವಾಗಿ ನೀನು ಇಷ್ಟು ಹೀನತ್ವಕ್ಕೆ ಗುರಿಯಾಗಬೇಡ.

ಜೋಧಬಾಯಿ—ಕುಮಾರಾ, ನೀನು ಎಲ್ಲಿಯ ಅಪಮಾನವನ್ನು, ಎಲ್ಲಿಯ ಪ್ರತಿಜ್ಞೆಯನ್ನು ಕಟ್ಟಿಕೊಂಡು ಕುಳಿತಿರುವೆ? ಗಂಡ-ಹೆಂಡಿರಲ್ಲಿ ಎಂಥ ಪ್ರತಿಜ್ಞೆಯು, ಎಂಥ ಅಪಮಾನವು! ನನ್ನ ವಂಶಜಾತವಾದ ಅಭಿಮಾನವು ಜಾಗ್ರುತವಾದದ್ದರಿಂದ ಆಗ ನಾನು ಹಾಗೆ ಮಾಡಿದೆನು. ಆದರೆ ಅದು ನನ್ನ ಅವಿಚಾರವಾಗಿರುವದು. ನಿನಗಾಗುತ್ತಿರುವ ಅಪಮಾನವನ್ನು ನೋಡಿ ನನಗೆ ಆಗ ಸಿಟ್ಟು ಬಂದದ್ದು ನಿಜವು. ಆದರೆ ಗಂಡನ ಮೇಲೆ ಹೆಂಡತಿಯು ಸಿಟ್ಟಾಗುವದು ಎಂದಾದರೂ ಉಚಿತವಾಗಬಹುದೆ? ಗಂಡಂದಿರ ಮೇಲಿನ ಹೆಂಡಿರ ಸಿಟ್ಟು ಮಂಜಿನಂತೆ ಇರುವದು. ಪತಿರೂಪ ಸೂರ್ಯನ ದರ್ಶನವಾದಕೂಡಲೆ ಆ ಮಂಜು ಮಾಯವಾಗಿ ಹೋಗುವದು. ಇನ್ನು ನಾನು ನನ್ನ ಪ್ರಿಯಕರ ಪತಿಯ ವಿಯೋಗವನ್ನು ಬಹುದಿವಸ ಸಹಿಸುವದು ಶಕ್ಯವಾಗಿರುವದಿಲ್ಲ.

ಖುಸ್ರು—ಅಪ್ಪನು ಅತ್ತ ಕಡೆಗೆ ಬರುವದಕ್ಕಾಗಿ ನಿನಗೆ ಹೇಳಿಕೊಂಡಿರುವನೋ?

ಜೋಧಬಾಯಿ—ಬಾಳಾ, ಹಾಗನ್ನಬಾರದು. ಗಂಡನು ಹೆಂಡತಿಗೆ ಅಪ್ಪಣೆ ಮಾಡತಕ್ಕವನು, ಹೇಳಿಕೊಳ್ಳತಕ್ಕವನಲ್ಲ. ಅದರಂತೆ ಹೊರಟು ಬರಲು ಈ ಪತ್ರದ ಮುಖಾಂತರವಾಗಿ ಅತ್ತ ಕಡೆಯಿಂದ ನನಗೆ ಅಪ್ಪಣೆಯಾಗಿರುವದು.

ಈ ಮೇರೆಗೆ ನುಡಿದು ಜೋಧಬಾಯಿಯು ತನ್ನ ಪತಿಯಾದ ಸೇಲೀಮನು ಬರೆದ ಪತ್ರವನ್ನು ಮಗನ ಕೈಯಲ್ಲಿ ಕೊಟ್ಟಳು. ಪತ್ರದ ಮೇಲಿನ ಹಸ್ತಾಕ್ಷರಗಳನ್ನು ನೋಡಿ ಅದು ತನ್ನ ತಂದೆಯು ಬರೆದ ಪತ್ರವೆಂದು ಖುಸ್ರುವು ತಿಳಿದನು. ಆ ಪತ್ರವನ್ನು ಓದಿ ಕೆಲಹೊತ್ತು ಸ್ತಬ್ಧನಾಗಿ ವಿಚಾರಿಸಿ, ಆತನು ತನ್ನ ತಾಯಿಯನ್ನು ಕುರಿತು—ಅವ್ವಾ, ನಾನೂ ನನ್ನ ವಿಚಾರವನ್ನು ಈಗ ಬದಲುಮಾಡಿದೆನು. ನಾನು ಬೇರೆ ಕಡೆಗೆಲ್ಲಿಗೂ ಹೋಗುವದಿಲ್ಲ. ನಿನ್ನ ಸಂಗಡಲೇ ಅಪ್ಪನ ಬಳಿಗೆ ಬರುತ್ತೇನೆ. ನಾನು ಸ್ವತಃ ತಪ್ಪುಮಾಡಿ ಅಪ್ಪನಸಿಟ್ಟಿಗೆ ಗುರಿಯಾಗಿರುವದರಿಂದ ನಾನೇ ಸಮಕ್ಷಹೋಗಿ ಅಪ್ಪನ ಕ್ಷಮೆ ಬೇಡಿಕೊಂಡು ನನ್ನ ತಪ್ಪನ್ನು ತಿದ್ದಿಕೊಳ್ಳುವೆನು; ಹಾಗೆ ಮಾಡಿದರೆಯೇ ಅಪ್ಪನು ನನ್ನನ್ನು ಪ್ರೀತಿಸಬಹುದು. ಒಂದು ಪಕ್ಷದಲ್ಲಿ ಅಪ್ಪನು ನನಗೆ

ದಯೆ ತೋರಿಸದಿದ್ದರೂ ಚಿಂತೆಯಿಲ್ಲ, ಏನಾಗುವದು ಅಲ್ಲಿಯೇ ಆಗಲಿ. ನಡೆ, ನಾನು ನಿನ್ನ ರಕ್ಷಕನಾಗಿ ನಿನ್ನ ಸಂಗಡ ಬರುವೆನು." ಅನ್ನಲು, ಇಷ್ಟು ಬೇಗನೆ ಮಗನ ಹೃದಯದಲ್ಲಿ ಸುವಿಚಾರವು ಉತ್ಪನ್ನವಾದದ್ದನ್ನು ನೋಡಿ ಜೋಧಬಾಯಿಗೆ ಸಮಾಧಾನವಾಯಿತು. ಆಕೆಯು ಗಂಭೀರಸ್ವರದಿಂದ ಮಗನನ್ನು ಕುರಿತು—ಬಾಳಾ, ಖುಸ್ರೂ, ಖುದಾನು ಹೀಗೆಯೇ ನಿನಗೆ ಸುವಿಚಾರವನ್ನು ಉಂಟು ಮಾಡುತ್ತ ಹೋಗಲಿ. ನನ್ನ ಸಂರಕ್ಷಣಕ್ಕಾಗಿ ಯುವರಾಜರವರು ನೂರು ಜನ ಮೊಗಲ ರಾವುತರನ್ನು ಕಳಿಸಿರುವರೆಂದು ಈ ಪತ್ರ ಕೊಟ್ಟ ದಾಸಿಯು ಹೇಳಿದಳು. ಆ ರಾವುತರು ಕೋಟೆಯಲ್ಲಿಯೇ ಇಳಿದುಕೊಂಡಿದ್ದು, ಅಣ್ಣನ ಅಪ್ಪಣೆಯ ಹಾದಿಯನ್ನು ನೋಡುತ್ತಿರುವರು. ಅಣ್ಣನ ಅಪ್ಪಣೆ ಪಡೆದು ನಾವಿಬ್ಬರೂ ಅತ್ತ ಕಡೆಗೆ ಹೋಗಿಬಿಡೋಣ.

ಈ ಮೇರೆಗೆ ತಾಯಿ–ಮಕ್ಕಳ ವಿಚಾರವು ಗಟ್ಟಿಮುಟ್ಟಿಯಾಗುತ್ತಿರಲು, ಬೆಳ್ಳಗೆ ಬೆಳಗಾಗಿ ರಾಜಾ ಮಾನಸಿಂಹನು ತಂಗಿಯನ್ನು ಕಾಣುವದಕ್ಕಾಗಿ ಬಂದನು. ಖುಸ್ರುವು ಮಾವನನ್ನು ಕಾಣಲಾರದೆ ಎತ್ತೋ ಮೋರೆ ತಪ್ಪಿಸಿಕೊಂಡನು. ಜೋಧಬಾಯಿಯು ಅಣ್ಣನಿಗೆ ತಕ್ಕ ಮಾನ–ಮರ್ಯಾದೆಗಳನ್ನು ಮಾಡಿದ ಬಳಿಕ ಮಾನಸಿಂಹನು ತಂಗಿಯನ್ನು ಕುರಿತು ಪ್ರೇಮಲಸ್ವರದಿಂದ—"ತಂಗೀ, ಕುಮಾರನು ಎಲ್ಲಿರುವನು? ಆತನು ನನ್ನನ್ನು ಮುಂಜಾವಿನಲ್ಲಿಯೇ ಕಾಣಬೇಕಾಗಿದ್ದು, ಇನ್ನೂ ನನ್ನ ಬಳಿಗೆ ಬಂದಿರುವದಿಲ್ಲವಲ್ಲ? ಆತನು ನಿದ್ದೆಗೆಟ್ಟು ಇನ್ನೂ ಮಲಗಿಕೊಂಡಿರುವನೋ ಏನು?" ಎಂದು ಕೇಳಲು, ಜೋಧಬಾಯಿಯು ನಿಟ್ಟುಸಿರು ಬಿಟ್ಟು—ಅಣ್ಣಾ, ನಿನ್ನೆ ರಾತ್ರಿ ತನ್ನಿಂದಾದ ಘೋರ ಅಪರಾಧಕ್ಕಾಗಿ ಆತನು ಬಹಳ ಸಂಕೋಚಪಟ್ಟಿರುವದರಿಂದ, ನಿನಗೆ ತನ್ನ ಕಲಂಕಿತ ಮುಖವನ್ನು ಆತನು ಹೇಗೆ ತೋರಿಸಿಯಾನು ಹೇಳು? ಇಲ್ಲ, ನಿನ್ನನ್ನು ಕಾಣುವ ಹಾಗೆ ಆತನು ನಡೆದುಕೊಂಡಿರುವದಿಲ್ಲ. ಇನ್ನು ಆತನು ಇಲ್ಲಿ ಇರಲಿಕ್ಕೆ ಯೋಗ್ಯನಲ್ಲ. ಅಣ್ಣಾ, ಇನ್ನು ಮೇಲೆ ನಾನು ಆತನನ್ನು ನನ್ನ ಸಂಗಡಲೇ ಕರಕೊಂಡು ಹೋಗುವೆನು. ಆ ಚಂಚಲ ಸ್ವಭಾವದ ನಿನ್ನ ಅಳಿಯನನ್ನು ಹೀಗೆಯೇ ಬಿಟ್ಟು ಉಪಯೋಗವಿಲ್ಲ. ಆತನಿಗೆ ಚನ್ನಾಗಿ ಬುದ್ಧಿಕಲಿಸಬೇಕಾಗಿರುವದ

ರಿಂದ ನಾನು ಆತನನ್ನು ಸಂಗಡ ಕರೆದುಕೊಂಡೇ ಹೊಗಬೇಕೆಂದು ನಿಶ್ಚಯಿಸಿರುತ್ತೇನೆ, ಎಂದು ಹೇಳಿದಳು. ತಂಗಿಯ ಈ ಮಾತುಗಳನ್ನು ಕೇಳಿ ಮಾನಸಿಂಹನಿಗೆ ಬಹಳ ಅಸಮಾಧಾನವಾಯಿತು. ನೀವು ಇಲ್ಲಿಯೇ ಇರಬೇಕೆಂದು ತಂಗಿಗೆ ಬೇಕಾದಷ್ಟು ಯುಕ್ತಿವಾದದಿಂದ ಹೇಳಿದನು; ಆದರೆ ನಿರ್ಧಾರದ ಸ್ವಭಾವದ ಚತುರ ಜೋಧಬಾಯಿಯು ಆತನ ಯುಕ್ತಿವಾದಗಳನ್ನೆಲ್ಲ ಖಂಡಿಸಿ ಮಗನೊಡನೆ ಪತಿಯ ಬಳಿಗೆ ಹೋಗಿಯೇ ತೀರುವೆನೆಂದು ಹಟಹಿಡಿದಳು; ಆದ್ದರಿಂದ ಕುಮಾರನು ತನ್ನಲ್ಲಿರುವ ಆಶೆಯು ಮಾನಸಿಂಹನಿಗೆ ತೋರದಾಯಿತು.

ತಾನು ಮೊಗಲ ಸಾಮ್ರಾಜ್ಯದ ಆಧಾರ ಸ್ತಂಭವೆಂದು ತಿಳಿದಿರುವ ಮಾನಸಿಂಹನಿಗೆ ತಂಗಿಯು ಮಾಡಿದ ಈ ಅವಮಾನಕ್ಕಾಗಿ ಸಿಟ್ಟುಬಂದಿತು. ಆತನು ಮನಸ್ಸಿನಲ್ಲಿ ತಂಗಿಯ ಮೇಲೆ ಬಹಳ ಸಂತಾಪಗೊಂಡನು; ಆತನ ಸಿಟ್ಟಿನ ಲಕ್ಷಣವು ಆತನ ಮೋರೆಯ ಮೇಲೆ ಒಡೆದುಕಾಣಿಸಿತು; ಆದರೂ ಆತನು ಅದನ್ನು ಶಬ್ದಗಳಿಂದ ಹೊರಗೆಡವದೆ, ಒಮ್ಮೆ ಒತ್ತಿ ಉಸುರ್ಗಳೆದು ಸಿಟ್ಟು ನುಂಗಿಕೊಂಡು ತಂಗಿಯನ್ನು ಕುರಿತು—"ಜೋಧಬಾಯಿ, ಇಂದಿನ ಹಾಗೆ ನೀನು ಎಂದೂ ಹಟಮಾರಿತನವನ್ನು ತೋರಿಸಿದ್ದಿಲ್ಲ. ನಿನ್ನ ಗಂಡನಾದ ಸಲೀಮನಿಗೆ ತನ್ನ ಕರ್ತೃತ್ವದ ಅಭಿಮಾನವು ಬಹಳವಾಗಿರುತ್ತದೆ; ಆ ಅಭಿಮಾನದ ಒಗರಿನಿಂದ ಆತನು ಹೆಂಡತಿಯಾದ ನಿನ್ನನ್ನೂ, ಮಗನಾದ ಖುಸ್ರುವನ್ನೂ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಿರುವನು. ಆತನ ತಿರಸ್ಕಾರದ ಮಾತಿಗಾಗಿಯೇ ನೀನು ಸಿಟ್ಟಾಗಿ ಇಲ್ಲಿಗೆ ಬಂದಿರುವಾಗ, ನಾನು ಈ ಮಾತನ್ನು ಹೆಚ್ಚಿಗೆ ಬಿಚ್ಚಿ ಯಾಕೆ ಹೇಳಬೇಕು? ನಿಮ್ಮಿಬ್ಬರ ಮೇಲೆ ಆತನ ಆದರವು ಸರ್ವಥಾ ಇರುವದಿಲ್ಲ. ಅಂತಃಪುರದೊಳಗಿನ ಬೇರೆ ವಿಲಾಸಿನಿಯರ, ಹಾಗು ದುಷ್ಟರಾದ ಕಾರ್ಯಸಾಧುಗಳ ಕೈಯಲ್ಲಿ ತಾನು ಪೂರಾ ಸಿಕ್ಕಿಕೊಂಡು ಹೋಗಿದ್ದರೂ, ತಾನು ಸ್ವತಂತ್ರನಿರುವೆನೆಂಬಂತೆ ಆತನಿಗೆ ತೋರುತ್ತಿರುವದು. ಇಂಥ ಸ್ಥಿತಿಯಲ್ಲಿ ಆತನಿಗೆ ನಿಮ್ಮ ಅಗತ್ಯವು ಎಷ್ಟರ ಮಟ್ಟಿಗೆ ಇರಬಹುದು? ನಿಮ್ಮ ಮೇಲೆ ಆ ಯುವರಾಜ ಸಲೀಮನು ಸಿಟ್ಟಾಗಲಿಕ್ಕೆ, ಅಕಬರ ಬಾದಶಹನು ನಿಮ್ಮಿಬ್ಬರನ್ನು ವಿಶೇಷವಾಗಿ ಪ್ರೀತಿಸುತ್ತಿರುವದೊಂದು ಕಾರಣವಿರುವದು. ನಿಮ್ಮ ಮೇಲಿನ ಬಾದಶಹನ

ಈ ಪ್ರೇಮವು, ತನ್ನ ಪಟ್ಟದ ಬಾಧ್ಯತೆಗೆ ಬಾಧಕವಾಗಿ ಖುಸ್ರುವು ತನ್ನ ಸಿಂಹಾಸನವನ್ನು ಆಕ್ರಮಿಸಬಹುದೆಂದು ಆ ನಿನ್ನ ಪತಿಯು ಅಸೂಯೆ ಪಡುತ್ತಿರುವನು. ತಂಗೀ, ಜೋಧಾ, ನಿನ್ನ ಪತಿಯು ನಿನ್ನ ಮೇಲೆ ಬಹಳ ಸಿಟ್ಟಾಗಿರುವಾಗ ಹೀಗೆ ನೀನು ಮಗನನ್ನು ಕಟ್ಟಿಕೊಂಡು ಹೋದರೆ ಒಳಿತಾಗಬಹುದೆ? ಕುಮಾರ ಖುಸ್ರುವು ಅತ್ಯಂತ ಚಂಚಲ ಬುದ್ಧಿಯವನು; ಅವಿಚಾರಿಯು; ವಿಷಯಲೋಲುಪನು. ಇಂಥವನನ್ನು ನಿನ್ನಪತಿಯ ಅನುಕೂಲತೆಯು ಇಲ್ಲದಾಗ ನೀನು ಹೇಗೆ ಹಾದಿಗೆ ಹಚ್ಚುವೆ? ಈಗ ನಿನ್ನ ಪತಿಯುನಿನ್ನನ್ನು ಕರೆಕಳುಹಿದ್ದರಲ್ಲಿ ಮೋಸವಿರಲಿಕ್ಕಿಲ್ಲವೆಂದು ಯಾರು ಹೇಳಬೇಕು? ತಂಗೀ, ಪ್ರಾಚೀನ ಕರ್ಮಭೋಗವನ್ನು ತಪ್ಪಿಸುವದು ಯಾರಿಂದಾಗುವದು? ನೋಡು, ನಿನ್ನ ಮನಸ್ಸಿಗೆ ಬಂದಂತೆ ಮಾಡು!

ಪಲ್ಲಂಗದ್ದೊಂದು ಕಾಲಿಗೆ ಆತು ಕುಳಿತುಕೊಂಡು ಜೋಧಬಾಯಿಯು ಅಣ್ಣನ ಈ ಮಾತುಗಳನ್ನೆಲ್ಲ ಲಕ್ಷಪೂರ್ವಕವಾಗಿ ಕೇಳಿದಳು. ಮಗನ ಗುಣಗಳ ವರ್ಣನವನ್ನು ಕೇಳಿ ಆಕೆಯ ಕಣ್ಣೀರುಗಳು ಬಳಬಳ ಉದುರತೊಡಗಿದವು. ಆಕೆಯ ಮುಖವು ಖಿನ್ನವಾಗಿ ಅಣ್ಣನಿಗೆ ಏನು ಉತ್ತರ ಕೊಡಬೇಕೆಂಬುದು ಆಕೆಗೆ ತೋಚದಾಯಿತು; ಆದರೂ ಏನಾದರೂ ಮಾತಾಡಲೇ ಬೇಕಾದದ್ದರಿಂದ ಆಕೆಯು ತನ್ನ ಕಣ್ಣು ಒರಿಸಿಕೊಂಡು ಅಣ್ಣನನ್ನು ಕುರಿತು—"ಅಣ್ಣಾ, ನಿನ್ನಂಥ ಕರ್ಮವೀರನೂ ಪ್ರಾಚೀನ ಕರ್ಮಕ್ಕೆ ಮಹತ್ವಕೊಟ್ಟು, ಆ ಕರ್ಮ ಪ್ರವಾಹಕ್ಕೆ ಒಡ್ಡು ಹಾಕಲು ಅಶಕ್ಯವೆಂದು ತೋರಿಸುತ್ತಿರುವಾಗ, ನನ್ನಂಥ ಅಬಲೆಯು ಖುಸ್ರುವಿನ ಪ್ರಾಚೀನ ಕರ್ಮವನ್ನಾಗಲಿ, ನನ್ನ ಪ್ರಾಚೀನ ಕರ್ಮವನ್ನಾಗಲಿ ತಡೆಯಲು ಹೇಗೆ ಸಮರ್ಥಳಾಗುವೆನು? ನನ್ನ ಪ್ರಾಚೀನವಾದ ಸುಕರ್ಮದಿಂದಲೋ ದುಷ್ಕರ್ಮದಿಂದಲೋ ನಾನು ಮೊಗಲ ಚಕ್ರವರ್ತಿಯ ಸೊಸೆಯಾಗಿರುವೆನು. ಇದಕ್ಕಾದರೂ ನನ್ನ ಪೂಜ್ಯ ತಂದೆಯ, ಅಥವಾ ಅಣ್ಣನಾದ ನಿನ್ನ ಪ್ರಾಚೀನ ಕರ್ಮಭೋಗವು ಯಾಕೆ ಕಾರಣವಾಗಿರಬಾರದು? ಏನೇ ಇರಲಿ, ಆರ್ಯ ಸ್ತ್ರೀಯರು, ಅದರಲ್ಲಿಯೂ ರಾಜಸ್ಥಾನದ ರಮಣಿಯರು ಸರ್ವಶ್ರೇಷ್ಠವಾದ ಕರ್ತವ್ಯವನ್ನೊಂದು ಮಾಡುವರು; ಅದಾವದೆಂದರೆ ಶ್ರದ್ಧಾಪೂರ್ವಕವಾದ ಪತಿಸೇವೆಯು! ಪತಿಸೇವೆಯು ಸ್ತ್ರೀಯರ

ಮಹಾ ಧರ್ಮವಾಗಿರುವದೆಂಬ ಶಿಕ್ಷಣವು ನಮ್ಮ ರಜಪೂತ ಸ್ತ್ರೀಯರಿಗೆ ಚಿಕ್ಕಂದಿನಿಂದಲೇ ದೊರೆತಿರುವದು. ಅದರಂತೆ ಮಕ್ಕಳ ಲಾಲನ ಪಾಲನ ಗಳನ್ನು ಮಾಡುವದೂ ತಾಯಿಯ ಕರ್ತವ್ಯವಾಗಿರುತ್ತದೆ. ನನಗೆ ಪ್ರಾಣ ಕ್ಕಿಂತಲೂ ಪ್ರಿಯನಾಗಿರುವ ಒಬ್ಬನೇ ಒಬ್ಬ ಮಗನಾದ ಖುಸ್ರುವು ಭ್ರಷ್ಟ ಮಾರ್ಗವನ್ನು ಹಿಡಿಯದಂತೆ, ಹಾಗು ಬುದ್ಧಿಪೂರ್ವಕವಾಗಿ ಸಂಕಟಕ್ಕೆ ಗುರಿಯಾಗದಂತೆ ನಾನು ಮೊದಲು ನೋಡಿಕೊಳ್ಳಬೇಕಾಗುವದು. ಆದ್ದ ರಿಂದ ಅಣ್ಣಾ, ನನಗೆ ನನ್ನ ಕರ್ತವ್ಯಗಳನ್ನು ಮಾಡಗೊಡಿಸು ಅನ್ನಲು, ಮಾನಸಿಂಹನು ಕನಿಕರದಿಂದ—"ನನ್ನ ಪ್ರಿಯ ಜೋಧಬಾಯಿ, ನಾನು ಸ್ಪಷ್ಟ ಮಾತಾಡಿದ್ದಕ್ಕಾಗಿ ನೊಂದುಕೊಳ್ಳಬೇಡ. ನನ್ನ ಸ್ವಭಾವವು ನಿನಗೆ ಗೊತ್ತೇ ಇರುತ್ತದೆ. ನನ್ನ ಜ್ಞಾತಿದ್ರೋಹದ ಹಾಗು ರಾಜದ್ರೋಹದ ಪ್ರಾಯಶ್ಚಿತ್ತವನ್ನು ನೀನು ಇಂದು ಈ ಬಗೆಯಾಗಿ ಭೋಗಿಸಬೇಕಾಗುವ ದನ್ನು ನೋಡಿ ನನಗೆ ಬಹಳ ದುಃಖವಾಗುವದು. ಸೇಲೀಮನ ಸಂಶಯ ವೃತ್ತಿಯು ಹೆಚ್ಚುತ್ತಲಿದ್ದು, ನನ್ನ ಕಡೆಗೂ ಆತನು ಸಾಶಂಕವೃತ್ತಿಯಿಂದ ನೋಡತೊಡಗಿರುವನು; ಖುಸ್ರುವಿನ ಮಾವನಾದ ಸೇನಾಪತಿ ಅಜಿಮ ಖಾನ ಸಾಹೇಬನೂ ನಾನೂ ಖುಸ್ರುವಿನ ಪಕ್ಷಕಟ್ಟಿ ತನ್ನ ಸಿಂಹಾಸನದ ಪ್ರಾಪ್ತಿಗೆ ವಿಘ್ನವನ್ನುಂಟು ಮಾಡುವೆವೆಂದು ಸೇಲೀಮನು ತಿಳಿದಿರುವನು; ಆದರೆ ಜೋಧಾ, ನಾನು ನನ್ನ ತಂಗಿಯ ರಾಜ್ಯಪದವನ್ನು ಕಸಿದುಕೊಳ್ಳ ಬಹುದೋ? ಸೇಲೀಮನಿಗೂ ನನಗೂ ಹೇಳಿಕೊಳ್ಳುವಂಥ ಸಂಬಂಧವಿಲ್ಲ ದಿದ್ದರೂ, ನಾನು ನನ್ನ ತಂಗಿಯಾದ ನಿನ್ನ ಗಂಡನೆಂಬವನ್ನಾದರೂ ಆತನು ಮರೆಯತಕ್ಕದ್ದಿದ್ದಿಲ್ಲ; ಆದರೆ ಆಗುವದು ಹೇಗೆ ತಪ್ಪುವದು? ಈ ಸ್ಥಿತಿ ಯಲ್ಲಿ ನೀನು ಖುಸ್ರುವನ್ನು ಸೇಲೀಮನಿಂದ ದೂರ ಇಡುವದು ನನಗೆ ನೆಟ್ಟಗೆ ಕಾಣಿಸುತ್ತದೆ. ನೀನಾದರೂ ಪತಿಯ ಬಳಿಗೆ ಹೋಗಲಿಕ್ಕೆ ಇಷ್ಟೇಕೆ ಆತುರಪಡುವೆ? ಅಲ್ಲಿಗೆ ಹೋದರೆ ನಿನಗೆ ಸ್ವಲ್ಪವಾದರೂ ಮಾನವು ದೊರೆಯಬಹುದೆ?

ಅಣ್ಣನ ಈ ಮಾತುಗಳನ್ನು ಕೇಳಿ ಜೋಧಬಾಯಿಯು ಏನೋ ವಿಚಾರ ಮಾಡಿ ಮಂದಸ್ವರದಿಂದ ತನ್ನ ಅಣ್ಣನನ್ನು ಕುರಿತು—ಅಣ್ಣಾ, ಅವರು ನನ್ನನ್ನು ಕರೆಯುವದಕ್ಕಾಗಿ ಜನರನ್ನೂ, ಮೇಣೆಯನ್ನೂ ಕಳಿಸಿರು

ವರು; ಮತ್ತು ನನ್ನ ಹಾದಿಯನ್ನು ನೋಡುತ್ತ ಅಲಹಾಬಾದದ ಹತ್ತರ ರಾಹುಟಿ ಹೊಡೆದುಕೊಂಡು ಕುಳಿತಿರುವರು; ಆದ್ದರಿಂದ ನಾನು ಹೋಗ ಬೇಕು. ಇಂಥ ಸೂಕ್ಷ್ಮಕಾಲದಲ್ಲಿಯಂತು ನಾನು ನಿಲ್ಲುವದೇ ಇಲ್ಲ, ಹೋಗಿಬಿಡುವೆನು. ಮೊದಲೇ ಖುಸ್ರುವಿನ ಮೇಲೆ ಅವರ ಸಿಟ್ಟು ಬಹಳ. ಅದರಲ್ಲಿ ನಾನು ಈಗ ಕರೆಕಳುಹುವಾಗ ಹೋಗದೆ ಮಗನೊಡನೆ ಇಲ್ಲಿ ಇದ್ದರೆ, ಇನ್ನು ನಾನು ಬಾದಶಹರ ಅಂತಃಪುರದ ಮೋರೆಯನ್ನು ಕಾಣದೆ ಅದಕ್ಕೆ ನಿಶ್ಚಯವಾಗಿ ಎರವಾಗಬೇಕಾದೀತು.

ಮಾನಸಿಂಹ—ಹೀಗಿದ್ದರೆ ಎಲ್ಲರ ಮೇಲೆ ಸಿಟ್ಟಾಗಿ ಇಲ್ಲಿಗೆ ನೀನು ಯಾಕೆ ಬಂದೆ?

ಜೋಧಬಾಯಿ—ರಾಜಸ್ಥಾನದ ರಮಣಿಯರ ಸ್ವಭಾವ ಸುಲಭವಾದ ಅಭಿಮಾನವು ಜಾಗ್ರುತವಾಗಲು, ನನ್ನ ಕೈಯಿಂದ ಆಗಬಾರದ ತಪ್ಪು ಆಗಿಹೋಯಿತು. ಸಿಟ್ಟಿನ ಭರದಲ್ಲಿ ನಾನು ಮಾಡಬಾರದ್ದನ್ನು ಮಾಡಿ ದೆನು; ಆದರೆ ಒಮ್ಮೆ ನನ್ನಿಂದಾದ ತಪ್ಪನ್ನು ನಾನು ತಿದ್ದಿಕೊ ಳ್ಳದೆ ಅದರ ತೀವ್ರತೆಯನ್ನು ಹೆಚ್ಚಿಸುತ್ತ ಹೋದರೆ, ಅಪರಾಧವು ಘೋರ ವಾಗಲಿಕ್ಕಿಲ್ಲವೆ?

ಮಾನಸಿಂಹ—ನಿನ್ನ ಮಾತು ನಿಜವು. ನೀನು ನಿನ್ನ ಗಂಡನ ಬಳಿಗೆ ಹೋಗು, ಅದಕ್ಕೆ ನಾನು ಬೇಡೆನ್ನುವದಿಲ್ಲ; ಆದರೆ ನಿನ್ನ ಮಾವನಾದ ಅಕಬರ ಬಾದಶಹನು ರೋಗಬಾಧೆಯಿಂದಾಗಲಿ—ಮಾನಸಿಕ ವ್ಯಥೆಯಿಂದಾ ಗಲಿ ಅತ್ಯಂತ ಕ್ಷೀಣನಾಗಿರುವದರಿಂದ ಯಾವ ಹೊತ್ತಿನಲ್ಲಿ ಎಂಥ ಪ್ರಸಂಗ ಒದಗೀತೆಂಬದನ್ನು ಹೇಳಲಾಗುವದಿಲ್ಲ. ಇಂಥ ಪ್ರಸಂಗದಲ್ಲಿ ಕುಮಾರ ಖುಸ್ರುವನ್ನು ಇಲ್ಲಿ ಇಡುವದೂ ಯೋಗ್ಯವಲ್ಲ; ಆತನನ್ನು ಅಕಬರ ಬಾದಶ ಹರ ಬಳಿಯಲ್ಲಿಯೇ ಇಡು.

ಜೋಧಬಾಯಿ—ಕುಮಾರ ಖುಸ್ರುವನ್ನು ಆತನ ಅಜ್ಜನ ಬಳಿಯಲ್ಲಿ ಟ್ಟರೆ ಅವರಿಗೆ (ತನ್ನಪತಿ ಸೇಲೀಮನಿಗೆ) ಸಂಶಯಬರಲಿಕ್ಕಿಲ್ಲವೆ?

ಮಾನಸಿಂಹ—ಅಕಬರ ಬಾದಶಹರು ಜೀವದಿಂದಿರುವವರೆಗೆ ಯುವ ರಾಜ ಸೇಲೀಮನು ಕುಮಾರನ ಕೂದಲವನ್ನೂ ಕೊಂಕಿಸಲಾರನು. ತಂದೆಯ ಬಳಿಯಲ್ಲಿದ್ದು ಅನಾದರವನ್ನೂ, ಸಿಟ್ಟನ್ನೂ ಸಹಿಸುವದಕ್ಕಿಂತ

ಅಜ್ಜನ ಬಳಿಯಲ್ಲಿರುವದೇ ಕುಮಾರನಿಗೆ ಸುಖಕರವಾಗಬಹುದು. ಕುಮಾರನ ಮುಂದಿನ ಉತ್ಕರ್ಷವನ್ನೂ ಲಕ್ಷಿಸಿದರೆ, ಆತನು ತಂದೆಗಿಂತ ಅಜ್ಜನ ಪ್ರೇಮ ಸಂಪಾದಿಸುವದೇ ಇಷ್ಟವೂ, ಅತ್ಯಂತಾವಶ್ಯಕವೂ ಆಗಿರುವದು.

ಹೀಗೆ ತನ್ನ ಗಂಡನಾದ ಸೇಲೀಮನ ಪಟ್ಟದ ಬಾಧ್ಯತೆಯನ್ನು ಪರ್ಯಾಯದಿಂದ ಹಾರಿಸಿ ಮಾನಸಿಂಹನು ಮಾತಾಡಿದ್ದನ್ನು ಕೇಳಿ ಜೋಧಬಾಯಿಯು ಒಮ್ಮೆ ಮರ್ಮಭೇದಕ ದೃಷ್ಟಿಯಿಂದ ಅಣ್ಣನನ್ನು ನೋಡಿದಳು. ತನ್ನ ಅಣ್ಣನು ತನ್ನ ಗಂಡನನ್ನು ಸಿಂಹಾಸನದಿಂದ ತಳ್ಳಿ ತನ್ನ ಮಗ ಖುಸ್ರುವನ್ನು ದಿಲ್ಲಿಯ ಬಾದಶಾಹಿಯ ಪಟ್ಟಕ್ಕೆ ಕುಳ್ಳಿರಿಸಲು ಯತ್ನಿಸುತ್ತಿರಬಹುದೇ ಎಂದು ಆಕೆಯು ಶಂಕಿಸಿದಳು. ಹೀಗೆ ತನ್ನ ತಂಗಿಯು ತನ್ನನ್ನು ಮರ್ಮಭೇದಕ ದೃಷ್ಟಿಯಿಂದ ನೋಡಿದ್ದರ ಮರ್ಮವನ್ನು ಮಾನಸಿಂಹನು ಕೂಡಲೆ ಅರಿತು—ತಂಗೀ, ಜೋಧಾ, ನೀನೂ ನನ್ನನ್ನು ಅವಿಶ್ವಾಸಿಯೆಂದು ತಿಳಿಯುವೆಯಾ? ಎಲೈ ಮಾನಸಿಂಹಾ, ಭೋಗಿಸಿನ್ನು ನಿನ್ನ ದ್ರೋಹಪರಂಪರೆಯ ಫಲವನ್ನು! ಮೊಗಲಬಾದಶಹನನ್ನು ಕೂಡಿ ಸ್ವದೇಶಬಾಂಧವರ ಸ್ವಾತಂತ್ರ್ಯಹರಣ ಮಾಡತೊಡಗಿರುವ ನಿನ್ನಂಥ ದ್ರೋಹಿಯ ಮೇಲೆ ನಿನ್ನ ತಂಗಿಯು ಸಂಶಯ ಪಟ್ಟದ್ದು ಆಶ್ಚರ್ಯವಲ್ಲ. ತಂಗೀ, ನಾನು ನಿನ್ನ ಗಂಡನನ್ನು ಪಟ್ಟದಿಂದ ತಳ್ಳಿ ನಿನ್ನ ಮಗನನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂದು ಯತ್ನಿಸುವೆನೆಂದು ತಿಳಿಯಬೇಡ; ಆದರೆ ಬಾದಶಹರು ಮಗನಾದ ಸೇಲೀಮನ ಬಂಡುಗಾರಿಕೆಗೂ, ದುರ್ಗುಣಗಳಿಗೂ ಹೇಸಿ, ಸಾಮ್ರಾಜ್ಯದ ಹಿತಕ್ಕಾಗಿ ತಮ್ಮ ಮೊಮ್ಮಗ ಖುಸ್ರುವಿಗೆ ಪಟ್ಟಕೊಡಬಹುದೆಂಬ ತರ್ಕದಿಂದ ಹೀಗೆ ಮಾತಾಡಿದೆನು. ತಂಗೀ, ನನಗೆ ನಿನ್ನ ಗಂಡನು ಬಾದಶಹನಾದರೂ ಅಷ್ಟೇ, ನಿನ್ನ ಮಗನು ಬಾದಶಹನಾದರೂ ಅಷ್ಟೇ! ಬಾದಶಹರಾದವರನ್ನು ಏಕನಿಷ್ಠೆಯಿಂದ ಸೇವಿಸುವದೊಂದು ವಚನಬದ್ಧನಾದ ನನ್ನ ಕರ್ತವ್ಯವು.

ಅಣ್ಣನ ಈ ಕನಿಕರದ ಮಾತುಗಳನ್ನು ಕೇಳಿ ಜೋಧಬಾಯಿಯು ತನ್ನ ಸಂಶಯವೃತ್ತಿಗಾಗಿ ಮನಸ್ಸಿನಲ್ಲಿ ನಾಚಿದಳು. ಆಕೆಯು ಗಂಭೀರ ವೃತ್ತಿಯಿಂದ ಅಣ್ಣನನ್ನು ಕುರಿತು—"ಅಣ್ಣಾ, ಪತಿಯ ವಿಷಯದ ಅಪಾ

ಯದ ಭಾವನೆಯಿಂದ ನಾನು ಹಾಗೆ ಸಂಶಯ ಪಟ್ಟದ್ದೂ ನಿಜವು, ಇಲ್ಲೆ ನ್ನುವದಿಲ್ಲ; ಆದರೆ ಈ ಪ್ರಸಂಗದಲ್ಲಿ ಖುಸ್ರುವಿನ ವಿಚಾರವೇನಿರುತ್ತದೆಂಬ ದನ್ನು ಕೇಳಿಕೊಳ್ಳೋಣ; ಅವನೇನು ಸಣ್ಣವನಲ್ಲ, ಅವನ ಹಿತಾಹಿತಗಳು ಅವನಿಗೆ ತಿಳಿಯುತ್ತಿರುವವು, ಅನ್ನಲು, ಮಾನಸಿಂಹನು ತಿರಸ್ಕಾರದ ಸ್ವರ ದಿಂದ—"ಅವನಂಥ ಅಕಾಲ ಪರಿಪಕ್ವಬುದ್ಧಿಯವನ ವಿಚಾರವನ್ನು ಕೇಳಿ ಕೊಂಡು ಮಾಡುವದೇನು? ಆತನಿಗೆ ನಮಗಿಂತ ಹೆಚ್ಚು ತಿಳಿಯುವದಾ ದರೂ ಏನು? ನಿನ್ನ ಮನಸ್ಸಿನಲ್ಲಿ ಅಲಹಾಬಾದಕ್ಕೆ ಹೋಗುವದು ಇಲ್ಲದಿ ದ್ದರೆ, "ನನಗೆ ಜಡ್ಡು ಆಗಿರುವದು" ಎಂದು ಪತ್ರವನ್ನು ಬರೆದುಕೊಂಡು, ಅದನ್ನು ಕೊಟ್ಟು ಕರೆಯ ಬಂದವರನ್ನು ತಿರುಗಿ ಕಳಿಸಿಬಿಡುವೆನು. ಹೀಗೆ ಮಾಡುವದು ನನ್ನ ಮನಸ್ಸಿಗೆ ಪೂರಾ ಬರುತ್ತದೆ.

ಹೀಗೆ ಪತಿಯನ್ನು ಮೋಸಗೊಳಿಸುವ ವಿಚಾರವ ಸೂಚಿಸಿದ್ದನ್ನು ಕೇಳಿ ಆ ಸಾಧ್ವೀ ಜೋಧಬಾಯಿಯು ನೊಂದುಕೊಂಡಳು. ಆಕೆಯು ಭಯಕಂಪಿತ ಸ್ವರದಿಂದ—ಬೇಡ, ಅಣ್ಣಾ, ಹೀಗೆ ಮಾಡುವದು ಬೇಡ. ಹೀಗೆ ಮಾಡಿದರೆ ನನ್ನ ಕಲ್ಯಾಣವಾಗುವದು ಒತ್ತಟ್ಟಿಗುಳಿದು, ಇದ್ದ ಸ್ಥಿತಿಯೂ ಕೆಟ್ಟು ಹೋದೀತು. ಇಂಥ ಪತ್ರದಿಂದ ಅವರ ತಿಳುವಳಿಕೆಯು ವಿರುದ್ಧವಾಗುವದೇ ನಿಜವು; ಆದ್ದರಿಂದ ಅಣ್ಣಾ, ನಾನು ನನ್ನ ವಿಚಾರ ವನ್ನು ತಿರುಗಿಸುವದಿಲ್ಲ. ಖುಸ್ರುವೂ ನನ್ನ ಸಂಗಡಲೆ ಬರಲಿ; ನಾನು ಪತಿಯ ಬಳಿಗೆ ಹೋಗುವದಕ್ಕಾಗಿ ಅಲಹಾಬಾದಿಗೆ ನಾಳೆಗೇ ಹೊರಡು ವೆನು. ಎಂದು ಹೇಳಿದಳು. ತಂಗಿಯ ಈ ನಿರ್ಧಾರದ ವಚನವು ತನ್ನ ಮನಸ್ಸಿಗೆ ಬಾರದಿದ್ದರೂ, ಅದು ಧರ್ಮಸಮ್ಮತವೂ, ಯುಕ್ತಿಸಮ್ಮತವೂ ಆದದ್ದರಿಂದ ಆ ಕ್ಷತ್ರಿಯ ವೀರವರನು ತಂಗಿಯನ್ನೂ, ಸೋದರಳಿಯನನ್ನೂ ಸೇಲೀಮನ ಬಳಿಗೆ ಕಳಿಸಿಕೊಡಲು ನಿಶ್ಚಯಿಸಿ ತಂಗಿಯನ್ನು ಕುರಿತು— "ತಂಗೀ, ನಿನ್ನ ವಿಚಾರವು ಯೋಗ್ಯವಾದದ್ದು. ಅದನ್ನು ನಾನು ಸರ್ವಥಾ ಒಪ್ಪಿಕೊಳ್ಳುವೆನು. ಯುವರಾಜ ಸೇಲೀಮನ ಕಡೆಯಿಂದ ಬಂದಿರುವ ಸೈನಿಕರು ಉತ್ಸುಕತೆಯಿಂದ ನನ್ನ ಅಪ್ಪಣೆಯ ಹಾದಿಯನ್ನು ನೋಡುತ್ತ ಕುಳಿತುಕೊಂಡಿರುವರು; ನಾನು ಅವರ ಸಂಗಡ ನಿಮ್ಮನ್ನು ಕಳಿಸಿಕೊಡುವೆ ನಲ್ಲದೆ, ನಮ್ಮ ನೂರುಜನ ರಜಪೂತ ಶೂರ ಸೈನಿಕರನ್ನೂ ನಿನ್ನ ಸಂಗಡ

ಕಳಿಸುವೆನು. ಅವರು ಖುಸ್ರುವಿನ ಅಪ್ಪಣೆಯಂತೆ ಕೆಲಸಮಾಡುವರು; ಇದಲ್ಲದೆ ಖುಸ್ರುವಿನ ಯೋಗ್ಯ ಸಂರಕ್ಷಣದ ಉಪಾಯವನ್ನು ಯೋಚಿಸುವದಕ್ಕಾಗಿ ನಾನು ಬೇಗನೆ ಬಾದಶಹರ ಬಳಿಗೆ ಫತ್ತೇಪುರಸಿಕ್ರಿಗೆ ಹೋಗುವೆನು. ಖುಸ್ರುವು ಉಚ್ಛೃಂಖುಲನೂ, ಉದ್ಧಟನೂ, ಅಸಹಿಷ್ಣುವೂ ಇರುವದರಿಂದ ಅವನ ಮೇಲೆ ನೀನು ಯಾವಾಗಲೂ ಕಣ್ಣು ಇಡು. ಭಗವಾನ್ ಏಕಲಿಂಗಜಿಯು ನಿನ್ನ ಕಲ್ಯಾಣ ಮಾಡುವನು."

ಈ ಮೇರೆಗೆ ಅಣ್ಣನ ಒಪ್ಪಿಗೆಯು ದೊರೆತ ಕೂಡಲೆ, ಇನ್ನು ಹೆಚ್ಚು ತರ್ಕವಿತರ್ಕಗಳು ಕೆಲಸದವಲ್ಲವೆಂದು ತಿಳಿದು ಜೋಧಬಾಯಿಯು ತನ್ನ ಅಣ್ಣನಿಗೆ—ಅಣ್ಣಾ, ಹಾಗಾದರೆ ನಿನ್ನ ಸೈನಿಕರಿಗೆ ಬೇಗನೆ ಸಿದ್ಧರಾಗಲು ಆಜ್ಞಾಪಿಸು. ಇನ್ನು ಮೇಲೆ ನಾನು ಏನು ಮಾಡುವದಾದರೂ ನಿನ್ನನ್ನು ಕೇಳಿಯೇ ಮಾಡುವೆನು. ನಾನು ರಾಜಧಾನಿಗೆ ಹೋದಬಳಿಕ ಏನಾದರೂ ಹೆಚ್ಚು ಕಡಿಮೆ ಪ್ರಸಂಗವು ಒದಗಿದರೆ, ಅಥವಾ ಹಿತವಿಘಾತಕ ಸಂಗತಿಯೊದಗಿದರೆ ಕೂಡಲೆ ನಿನ್ನ ಕಡೆಗೆ ರಾವುತರನ್ನು ಕಳಿಸಿ ತಿಳಿಸುವೆನು. ಎಂದು ಹೇಳಿದಳು. ಬಳಿಕ ಹಿತಾಹಿತಗಳನ್ನು ಕುರಿತು ಹಲವು ಸಂಗತಿಗಳನ್ನು ಕುರಿತು ಆ ಅಣ್ಣ-ತಂಗಿಯರು ಮಾತನಾಡಿದರು. ಮರುದಿನ ಬೆಳಗಾಗುತ್ತಲೆ ಬಾದಶಾಹಿಯ ರೀವಿಗೆ ಒಪ್ಪುವ ಮುಖಮಲಿಯ ಸಿಬಿಕೆಯಲ್ಲಿ ಕುಳಿತು ಜೋಧಬಾಯಿಯು ತನ್ನ ಹೃದಯೇಶ್ವರನನ್ನು ಕಾಣುವದಕ್ಕಾಗಿ ಹೊರಟಳು; ಖುಸ್ರುವು ಮೊಗಲ-ರಜಪೂತ ಸೈನ್ಯಗಳ ಮುಖ್ಯನಾಗಿ ತನ್ನ ಬೆಟ್ಟದಂಥ ಕುದುರೆಯನ್ನೇರಿ ತಾಯಿಯ ಸಿಬಿಕೆಯನ್ನು ರಕ್ಷಿಸುತ್ತ ಸಾಗಿದನು.



## ೫ ನೆಯ ಪ್ರಕರಣ

# ಸದ್ಗುಣ-ವಿಜಯ

ಈ ಮೇರೆಗೆ ಜೋಧಬಾಯಿಯು ತನ್ನ ಒಬ್ಬನೇ ಒಬ್ಬ ಮಗನಾದ ಖುಸ್ರುವಿನೊಡನೆ ಅಲಹಾಬಾದಕ್ಕೆ ಸಾಗಿದಳು. ಸೇಲೀಮನು ತನ್ನ ಹೆಂಡತಿಯನ್ನು ಕುರಿತು—"ನೀವಿಬ್ಬರೂ ಮೊದಲು ಅಜಮೀರಕ್ಕೆ ಹೋಗಿ ಅಲ್ಲಿ ಆರೇಳುದಿನ ಇದ್ದು ಒಂದುವಾರ ವಿಶ್ರಾಂತಿಯನ್ನು ಪಡೆದು ಆಮೇಲೆ ಅಲಹಾಬಾದಕ್ಕೆ ತನ್ನ ಬಳಿಗೆ ಬರಬೇಕೆಂದು" ಆಜ್ಞಾಪಿಸಿದ್ದನು; ಆದರೆ ಸಿಬಿಕೆಯಲ್ಲಿ ಕುಳಿತುಕೊಳ್ಳುವಾಗ ಜೋಧಬಾಯಿಯು ಮಗನನ್ನು ಒತ್ತಟ್ಟಿಗೆ ಕರೆದು—"ನೀನು ನನ್ನ ಸಂಗಡ ಅಜಮೀರಕ್ಕೆ ಬರುವ ಕಾರಣವಿಲ್ಲ. ನೀನು ಕೂಡಲೆ ಅಲಹಾಬಾದಕ್ಕೆ ಹೋದರೆ ನಿನ್ನ ಹಿರಿಯರಿಗೆ ಸಂತೋಷವಾಗುವದರಿಂದ ನೀನು ಈಗ ಅತ್ತಕಡೆಯ ಹಾದಿಯನ್ನು ಹಿಡಿ. ನಮ್ಮ ಸಂಗಡ ಬಂದಿರುವ ರಜಪೂತ ಸೈನ್ಯದ ಮುಖ್ಯನಾದ ಕೃಪಾಲಸಿಂಹನು ನನ್ನ ಸಂರಕ್ಷಕನಾಗಿ ಬರುವನು." ಎಂದು ಹೇಳಿದಳು; ಆದರಿಂದ ತಾಯಿಮಕ್ಕಳಿಬ್ಬರು ಅಂಬರ ರಾಜಧಾನಿಯಿಂದ ಹೊರಟರೂ, ಕೆಲ ಹಾದಿಯನ್ನು ನಡೆದು ಹೋದಬಳಿಕ ಅವರಿಬ್ಬರ ಹಾದಿಗಳು ಬೇರೆ ಬೇರೆಯಾದವು. ಖುಸ್ರುವು ತಾಯಿಯ ಅಪ್ಪಣೆಯಂತೆ ತನ್ನ ಸಂಗಡ ಬಲಿಷ್ಠರಾದ ಐವತ್ತೇ ಜನ ರಜಪೂತ ಸಿಪಾಯಿಗಳನ್ನು ಕರಕೊಂಡು, ಅಲಹಾಬಾದದ ಹಾದಿಯನ್ನು ಹಿಡಿದನು. ಜೋಧಬಾಯಿಯು ಕೃಪಾಲಸಿಂಹನಿಂದ ಸಂರಕ್ಷಿತಳಾಗಿ ಅಜಮೀರದ ಹಾದಿಯನ್ನು ಹಿಡಿದಳು. ಹೀಗೆ ತಾಯಿ-ಮಕ್ಕಳಿಬ್ಬರೂ ಬೇರೆ ಬೇರೆಯಾಗಿ ಸಾಗಿದ್ದೇ ಅನರ್ಥಕ್ಕೆ ಕಾರಣವಾಯಿತೆಂದು ಹೇಳಬಹುದು. ಕಾಲಕ್ಕನುಸರಿಸಿ ಆಗುವದನ್ನು ತಪ್ಪಿಸುವದು ಯಾರಿಂದಲೂ ಆಗುವದಿಲ್ಲ.

ಖುಸ್ರುವು ಕೆಲವು ಹಾದಿಯನ್ನು ನಡೆದು ಹೋದ ಬಳಿಕ ಆತನಿಗೊಂದು ಗುಡ್ಡಗಾಡು ಪ್ರದೇಶವು ಹತ್ತಿತು. ಈ ಪ್ರದೇಸವು ಅರವಲೀ ಪರ್ವತದ ಸಾಲಿನಿಂದ ವ್ಯಾಪ್ತವಾಗಿದ್ದು, ಅದರಲ್ಲಿ ಗಿಡಗಳು ದಟ್ಟವಾಗಿ

ಬೆಳೆದಿದ್ದವು. ಅಂಬರ ರಾಜಧಾನಿಯಿಂದ ಏಳು ಹರದಾರಿಯ ಮೇಲಿದ್ದ ಈ ಪರ್ವತದ ಪ್ರದೇಶವು ನಿರ್ಜನವಾಗಿದ್ದರೂ ಬಹು ರಮ್ಯವಾಗಿತ್ತು. ಮಧ್ಯಾಹ್ನದ ತೀಕ್ಷ್ಣ ಬಿಸಿಲಿನ ಸಹನವಾಗದೆ ಖುಸ್ರುವು ತನ್ನ ಕೈಕೆಳಗಿನ ಒಬ್ಬ ರಾವುತನನ್ನು ಕುರಿತು—“ಹಿಮ್ಮತಸಿಂಹ, ನೀವು ಯಾವತ್ತು ಸೈನಿಕರೊಡನೆ ಇಲ್ಲಿ ಎರಡುಗಳಿಗೆ ವಿಶ್ರಾಂತಿ ಪಡೆಯಿರಿ. ಅಲ್ಲಿಯವರೆಗೆ ನಾನು ಅತ್ತಕಡೆಯ ಆ ಇಳಕಲ ಮೇಲೆ ಕುಳಿತು ಸುತ್ತು ಮುತ್ತಲಿನ ಶೋಭೆಯನ್ನು ನೋಡುವೆನು.” ಎಂದು ಹೇಳಿದನು. ಹಿಮ್ಮತಸಿಂಗನಿಗೂ ಅಷ್ಟೇ ಬೇಕಾಗಿತ್ತು. ಕೂಡಲೆ ಆತನು ಕುದುರೆಯಿಂದ ಕೆಳಗೆ ಜಿಗಿದು, ಉಳಿದವರಿಗೂ ಕುದುರೆಯಿಂದ ಇಳಿಯ ಹೇಳಿದನು. ಅತ್ತ ಖುಸ್ರುವು ಆ ದಟ್ಟವಾದ ಗಿಡಗಳ ಅಡವಿಯ ಕಡೆಗೆ ಹೊರಟು ಹೋದನು. ಬಹಳವಾಗಿ ದಣಿದಿದ್ದ ಅವನ ಹಾಗು ಅವನ ಕುದುರೆಯ ಮೈಯೊಳಗಿಂದ ಒಂದೇಸವನೆ ಬೆವರು ಸುರಿಯುತ್ತಿತ್ತು. ಸೂರ್ಯನ ಪ್ರಖರ ಕಿರಣಗಳ ತಾಪದಿಂದ ಅವನ ಮೋರೆಯು ಕೆಂಪಾಗಿ ಆತನಿಗೆ ಅತ್ಯಂತ ತಾಪವಾಗಿತ್ತು; ಆದರಿಂದ ಆ ತರುಣ ರಾಜಪುತ್ರನಿಗೆ ವಿಶ್ರಾಂತಿಯು ಅವಶ್ಯವಾಗಿ ಬೇಕಾಗಿತ್ತು. ಖುಸ್ರುವು ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ, ತಾನು ಅದೇ ಗಿಡದ ದಟ್ಟವಾದ ನೆಳಲಲ್ಲಿ ವಿಶ್ರಮಿಸತೊಡಗಿದನು. ಬರಿಯ ಹುಲ್ಲಿನ ಮೇಲೆ ಹೇಗೆ ಕುಳಿತುಕೊಳ್ಳಲೆಂಬ ವಿಚಾರವೂ ಆಗ ಆತನ ಮನಸ್ಸಿನಲ್ಲಿ ಬರಲಿಲ್ಲ. ಗಿರಿನದಿಯ ತಂಗಾಳಿಯ ಸುಳಿದಾಟದಿಂದ ಆತನ ಮೈಬೆವರು ಸ್ವಲ್ಪ ಹೊತ್ತಿನಲ್ಲಿಯೇ ಆರಿ ಬಹುಮಟ್ಟಿಗೆ ಆತನ ಶ್ರಮದ ಪರಿಹಾರವಾಯಿತು.

ಹೀಗೆ ಖುಸ್ರುವು ವಿಶ್ರಮಿಸುತ್ತಿರುವಾಗ ಬಹು ದೂರದಿಂದ ಗಾಯನದ ಮಂಜುಲ ಧ್ವನಿಯು ಆತನಿಗೆ ಕೇಳಿಸತೊಡಗಿತು. ಆ ಮನೋಹರ ಗಾಯನ ಧ್ವನಿಯ ಶ್ರವಣದಿಂದ ಖುಸ್ರುವಿನ ಮಾರ್ಗಾಯಾಸವು ಹೇಳಹೆಸರಿಲ್ಲದಾಯಿತು. ಆ ಗಾನ ಲುಬ್ಧನು ಒಂದೇಸವನೆ ಕಿವಿಗೊಟ್ಟು ಗಾಯನವನ್ನು ಕೇಳತೊಡಗಿದನು. ಆ ಗಾಯನದ ಮಧುರ ಧ್ವನಿಯು ಯಾವಳೋ ಒಬ್ಬ ರಮಣಿಯದೆಂದು ಆತನು ತರ್ಕಿಸಿದನು. ಗಾಯನವೇ ಇಷ್ಟು ಮನೋಹರವಿದ್ದ ಬಳಿಕ ಆ ಸ್ತ್ರೀಯ ಸೌಂದರ್ಯವು ಎಷ್ಟು ಮನೋಹರ ವಿರಬಹುಮೋ ಎಂದು ಆ ರಾಜಪುತ್ರನು ಅನುಮಾನಿಸತೊಡಗಿದನು.

ತನ್ನ ರಂಗಮಹಾಲಿನಲ್ಲಿ ಹಲವು ಗಾಯಕಿಯರ ಗಾಯನವನ್ನು ಖುಸ್ರುವು ಕೇಳಿದವನಾಗಿದ್ದರೂ, ಇಷ್ಟು ಸುಖಸಾದವು ಆತನ ಕಿವಿಗೆ ಈ ವರೆಗೆ ಎಂದೂ ಬಿದ್ದಿದ್ದಿಲ್ಲ. ಈ ಗಾಯನವು ಮನುಷ್ಯಪ್ರಾಣಿಯದಾಗಿರದೆ ವನ ದೇವತೆಯದಾಗಿರಬಹುದೆಂತಲೂ, ಇಂಥ ರಮ್ಯ ಗಾಯನದ ಸುಂದರ ಸ್ತ್ರೀ ಮೂರ್ತಿಯು ತನ್ನ ಕಣ್ಣಿಗೆ ಬೀಳುವದು ಮಹದ್ಭಾಗ್ಯವೆಂತಲೂ ಆತನು ನೆನಿಸತೊಡಗಿದನು. ಕುಳಿತಲ್ಲಿ ಕುಳಿತುಕೊಳ್ಳಲಾರದೆ ಆತನು ಗಾಯನ ಧ್ವನಿಯು ಕೇಳಬರುವ ದಿಕ್ಕಿನ ಕಡೆಗೆ ಸಾಗಿ, ಮಂತ್ರಾಕರ್ಷಿತವಾದ ಸರ್ಪ ದಂತೆ ಆನಂದದಿಂದ ತಲೆದೂಗುತ್ತ ಅರಣ್ಯದಲ್ಲಿ ತಿರುಗಾಡಹತ್ತಿದನು. ಬರಬರುತ್ತ ಆತನಿಗೆ ಗಾಯನವು ಸ್ಪಷ್ಟವಾಗಿ ಕೇಳಿಸತೊಡಗಿದ್ದರಿಂದ, ಯಾವಳೋ ಒಬ್ಬ ವಿರಹಿಣಿ ಸ್ತ್ರೀಯು ತನ್ನ ಪುರುಷನನ್ನುದ್ದೇಶಿಸಿ ಗಾಯನ ಮಾಡುವಳೆಂಬದು ಆತನಿಗೆ ಸ್ಪಷ್ಟ ಗೊತ್ತಾಯಿತು. ಗಾಯನದೊಳಗಿನ ಕರುಣಾರಸದಿಂದ ಖುಸ್ರುವಿನ ಹೃದಯವು ಕರಗಿ ಹೋಗಿ, ತಾನು ಆ ವಿರ ಹಿಣಿಯನ್ನು ಯಾವಾಗ ಕಂಡೇನೆಂದು ಆತನು ಆತುರ ಪಡಹತ್ತಿದನು. ಅಷ್ಟರಲ್ಲಿ ಗಾಯನ ಧ್ವನಿಯು ಅಕಸ್ಮಾತ್ತಾಗಿ ನಿಂತು ಹೋಗಿ, ಖುಸ್ರುವು ಬೆರಗಾಗಿ ಅತ್ತಿತ್ತ ನೋಡುತ್ತಿರಲು, ಗಿಡಗಳ ಗುಂಪಿನೊಳಗಿಂದ ಬರುತ್ತಿರುವ ಒಬ್ಬ ಅಲಂಕಾರ ರಹಿತಳಾದ ಸುಂದರ ತಪಸ್ವಿನಿಯು ಆತನ ಕಣ್ಣಿಗೆ ಬಿದ್ದಳು.

ಖುಸ್ರುವು ಆ ಸುಂದರ ತರುಣ ತಪಸ್ವಿನಿಯನ್ನು ಕೂಡಲೆ ಗುರುತಿಸಿ ದನು. ಈ ಮೊದಲೆ ಗುಹೆಯಲ್ಲಿ ಆತನನ್ನು ಮರುಳುಮಾಡಿದ್ದ ಮಂದಾಕಿ ನಿಯೇ ಆಕೆಯಾಗಿದ್ದಳು; ಆದರೆ ಮಂದಾಕಿನಿಯ ಆಗಿನ ಉಡಿಗೆ-ತೊಡಿಗೆ ಗಳು ಮಾತ್ರ ಈಗ ಇದ್ದಿಲ್ಲ. ಈಗ ಆಕೆಯು ಸರ್ವಾಂಗಕ್ಕೆ ಭಸ್ಮವನ್ನು ಹಚ್ಚಿಕೊಂಡಿದ್ದಳು. ಹಣೆಯ ಮೇಲಿನ ಕುಂಕುಮದಿಂದ ಆಕೆಯ ತಾಪಸೀ ಸೌಂದರ್ಯವು ಉಕ್ಕಿ ಬರುತ್ತಿತ್ತು; ಅದರಂತೆ ವೀರೋಚಿತವಾದ ಅಭಿ ಮಾನದ ತೇಜಸ್ಸು ಆಕೆಯ ಕಣ್ಣುಗಳಲ್ಲಿ ಹೊಳೆಯುತ್ತಿತ್ತು. ಆಕೆಯ ನೀಲಾಲಕಗಳು ಬೆನ್ನ ಮೇಲೆ ಹರವಿದ್ದು, ಅವುಗಳ ಒಂದೆರಡು ಎಳಳುಗಳು ಗಲ್ಲಗಳ ಮೇಲೆ ಅಲೆದಾಡುತ್ತಿದ್ದವು. ಆಕೆಯ ಗಲ್ಲಗಳ ನಸುಗೆಂಪು, ಮುಖದ ಸೌಂದರ್ಯವನ್ನು ಹೆಚ್ಚಿಸುತ್ತಲಿತ್ತು. ಆ ಸುಂದರ ಮಂದಾಕಿ

ನಿಯ ಕುಡಿ ಹುಬ್ಬುಗಳ ಸೊಬಗನ್ನಂತು ಬಣ್ಣಿಸಲಳವಲ್ಲ. ನೋಡುವವರ ದೃಷ್ಟಿಗಳು ಆ ಕುಡಿ ಹುಬ್ಬುಗಳಲ್ಲಿ ನಟ್ಟು ಹೋಗುತ್ತಿದ್ದವು. ಖುಸ್ರುವಂತು ಆ ಮನೋಹರ ಮಂದಾಕಿನಿಯನ್ನು ಎವೆಯಿಕ್ಕದೆ ನೋಡುತ್ತ ನಿಂತುಬಿಟ್ಟನು. ಆಗ ಮಂದಾಕಿನಿಯು ಮುಗುಳು ನಗೆಯಿಂದ ಖುಸ್ರುವನ್ನು ಕುರಿತು—

ಮಂದಾಕಿನಿ—ನನ್ನನ್ನು ಹೀಗೆ ಎವೆಯಿಕ್ಕದೆ ಏಕೆ ನೋಡುವಿರಿ ಕುಮಾರ!

ಖುಸ್ರು—ಮಂದಾಕಿನಿ, ಏಕೆ ನೋಡುವೆಯೆಂದು ಕೇಳುವೆಯಾ? ನಿನ್ನ ಈ ವಿಶ್ವಮೋಹಿನೀ ಸೌಂದರ್ಯವನ್ನು ಎವೆಯಿಕ್ಕದೆ ಯಾರು ನೋಡಲಿಕ್ಕಿಲ್ಲ ಹೇಳು? ಅಚ್ಚ ಕರಿಗುಡ್ಡೆಯ ಈ ವಿಶಾಲನೇತ್ರಗಳು, ತೊಂಡೆಯ ಹಣ್ಣಿನಂಥ ಸುಂದರವಾದ ಈ ಕೆಂದುಟಿಗಳು ಯಾರ ದೃಷ್ಟಿಗಳನ್ನಾದರೂ ಆಕರ್ಷಿಸಿಯೇ ಆಕರ್ಷಿಸುವವು. ಮಂದಾಕಿನಿ, ನೀನು ನಿನ್ನ ಈ ಅನಿಂದ್ಯವಾದ ರೂಪರಾಶಿಯಿಂದ ಆ ಗುಹೆಯಲ್ಲಿ ನನ್ನನ್ನು ಮೊದಲೇ ಮರುಳನಾಗಿ ಮಾಡಿರಲು, ಹೀಗೆ ಪ್ರಶ್ನಮಾಡುವದು ನಿನಗೆ ಶೋಭಿಸುವದೋ? ಆ ದಿನದ ನೆನಪು ಮರೆಯಲಿಕ್ಕೆ ಪ್ರಯತ್ನ ಮಾಡುತ್ತಿರುವ ನನ್ನ ಕಣ್ಣಿಗೆ ಈ ದಿನ ಪುನಃ ನೀನು ಬಿದ್ದು, ನನ್ನನ್ನು ಮತ್ತೆ ಮರುಳು ಮಾಡಿದೆಯಲ್ಲ! ನನಗೆ ಹೀಗೆ ತಾಪವನ್ನುಂಟುಮಾಡಿ ಪುನಃ ಪುನಃ ಹೀಗೆ ಕಠೋರ ಪ್ರಶ್ನ ಮಾಡುವದು ನಿನಗೆ ಒಳ್ಳೇ ಚಕ್ಕಂದವಾಗಿರುವ ಹಾಗೆ ತೋರುತ್ತದೆ! ನಿನ್ನ ಸ್ವರ್ಗೀಯ ಸೌಂದರ್ಯವನ್ನು ನೋಡಿ, ನಿನ್ನ ಹೃದಯವು ಬಹು ಕೋಮಲವಾಗಿರಬಹುದೆಂದು ತರ್ಕಿಸಿದ್ದೆನು; ಆದರೆ ಸಾಮ್ರಾಟ್ ಅಕಬರನ ಮೊಮ್ಮಗನಾದ ನನ್ನನ್ನು ಹೀಗೆ ಕುಣಿಸುವದು ನಿನಗೆ ಆಟವಾಗಿ ಹೋಗಿದೆ!

ಖುಸ್ರುವಿನ ಈ ಮಾತುಗಳನ್ನು ಕೇಳಿ ಮಂದಾಕಿನಿಯು ಒಬ್ಬ ಉನ್ಮಾದಿನಿಯಂತೆ ಅಟ್ಟಹಾಸದಿಂದ ಗಹಗಹಿಸಿ ನಕ್ಕಳು. ಆಕೆಯ ಆ ವಿಚಿತ್ರವಾದ ನಗೆಯನ್ನು ನೋಡಿ ಖುಸ್ರುವು ಆಶ್ಚರ್ಯಪಟ್ಟು ಮನಸ್ಸಿನಲ್ಲಿ—"ಈ ಮಂದಾಕಿನಿಯು ಯಾರಾಗಿರಬಹುದು? ಈಕೆಯು ಒಬ್ಬ ಹುಚ್ಚಿಯಾಗಲಿ, ಮಾಯಾವೀ ಸ್ತ್ರೀಯಾಗಲಿ ಆಗಿರಲಿಕ್ಕಿಲ್ಲವಷ್ಟೇ? ನಾನು ಅತ್ಯಂತ ಕನಿಕರ

ದಿಂದ ಮನಃಪೂರ್ವಕ ಮಾತಾಡುತ್ತಿರಲು, ಕಗ್ಗ ಸ್ತ್ರೀಯಂತೆ ಈಕೆ ಹೀಗೆ ಯಾಕೆ ನಕ್ಕಿರಬಹುದು?" ಎಂಬು ಯೋಚಿಸುವಾಗ ಆ ರಾಜಕುಮಾರನಿಗೆ ಆಕೆಯ ಕೃತಿಯು ವಿಷಯವಾಗಿ ಸ್ವಲ್ಪ ಸಿಟ್ಟು ಬಂದಿತು. ಆತನು ಕಿಂಚಿತ್ ತೀವ್ರವಾದ ಸ್ವರದಿಂದ ಮಂದಾಕಿನಿಯಿನ್ನು ಕುರಿತು—

ಖುಸ್ರು—ಮಂದಾಕಿನೀ, ನೀನು ಇಷ್ಟು ಗಟ್ಟಿಯಾಗಿ ಯಾಕೆ ನಕ್ಕೆ?

ಮಂದಾಕಿನಿ—ಜನಾಬ ಆಲ್ಲಿ! ತಮ್ಮ ಈ ಪರಿಸ್ಥಿತಿಯನ್ನು ನೋಡಿ ಯಾರಿಗೆ ನಗೆ ಬರಲಿಕ್ಕಿಲ್ಲ? ಒಬ್ಬ ಸಾಮಾನ್ಯಳಾದ ಹುಚ್ಚ ಭಿಕ್ಷುಕಿಯ ಸಲುವಾಗಿ ದಿಲ್ಲೀಶ್ವರನ ಮೊಮ್ಮಗನು, ಇಷ್ಟು ತನ್ಮಯನೂ, ಹುಚ್ಚನೂ ಆಗುವದು ನಿಜವಾಗಿ ನಗೆಗೇಡಲ್ಲವೆ?

ಖುಸ್ರು—ಮಂದಾಕಿನೀ, ನೀನು ಸಾಮಾನ್ಯ ಭಿಕ್ಷುಕಿಯಾಗಿದ್ದರೆ ನಾನು ನಿನಗೆ ಮರುಳೀ ಆಗುತ್ತಿದ್ದಿಲ್ಲ. ಮೊಗಲ ಬಾದಶಹನ ಜನಾನ ಖಾನೆಯಲ್ಲಿ ಸುಂದರ ಸ್ತ್ರೀಯರಿಗೆ ಕೊರತೆಯಿಲ್ಲದಿದ್ದು, ಅಂಥ ಆ ಮೊಗಲ ರಾಜಕುಮಾರನು ನಿನಗೆ ಮರುಳಾಗಿರುವದನ್ನು ನೀನು ಮನಸ್ಸಿನಲ್ಲಿ ತಂದು ನಿನ್ನ ಘನವಾದ ಯೋಗ್ಯತೆಯನ್ನು ತರ್ಕಿಸಿಕೊಳ್ಳು! ನೀನು ಭಿಕ್ಷುಕಿಯಾಗಿಯೂ ಇಷ್ಟು ಘನವಾದ ಯೋಗ್ಯತೆಯನ್ನು ಪಡೆದಿರುವದು ಅಪೂರ್ವವಾಗಿರುವಲ್ಲಿ ಸಂಶಯವಿಲ್ಲ. ಎಲೈ ಕಠೋರ ಹೃದಯದ ತರುಣ ಸ್ತ್ರೀಯೇ, ನಾನು ಮರುಳಾದದ್ದರ ಕಾರಣವು ನಿನಗೆ ಗೊತ್ತಿದ್ದು, ನೀನು ಹೀಗೆ ನನ್ನ ಅವಹೇಲನ ಮಾಡುವದು ಯೋಗ್ಯವಾಗಬಹುದೋ?

ಮಂದಾಕಿನಿ—ಕುಮಾರ, ವ್ಯರ್ಥಮಾತುಗಳಿಂದ ಪ್ರಯೋಜನವೇನು? ನಿಮ್ಮ ಮನಸ್ಸಿನಲ್ಲಿದ್ದದ್ದನ್ನು ಬಿಚ್ಚಿ ಹೇಳಿಬಿಡಿರಿ.

ಖುಸ್ರು—ನಿನ್ನ ಲಗ್ನವಾಗಬೇಕೆಂದು ನನ್ನ ಮನಸ್ಸಿನಲ್ಲಿರುತ್ತದೆ.

ಮಂದಾಕಿನಿ—ನಾನು ದುರ್ಜಯಸಿಂಹನ ಪತ್ನಿಯಿರುವೆನೆಂದು ಹಿಂದಕ್ಕೆ ಸೂಚಿಸಿದ್ದನ್ನು ನೀವು ಮರೆತಿರೋ? ಒಬ್ಬ ರಜಪೂತ ವೀರನ ಪತ್ನಿಯು ಬಾದಶಹನ ಮೊಮ್ಮಗನ ವಿಲಾಸಿನಿಯಾಗಿ ಆತನ ರಾಣೀವಾಸದಲ್ಲಿ ವಿಲಾಸವನ್ನು ಭೋಗಿಸುತ್ತ ತನ್ನ ವ್ಯಭಿಚಾರದ ಪಾತಕವನ್ನು ಜಗತ್ತಿನಲ್ಲಿ ಮೆರಿಸಬಹುದೆಂಬ ಮಾತು ತಮ್ಮ ಮನಸ್ಸಿನಲ್ಲಾದರೂ ಹೇಗೆ ಬರುತ್ತದೆ ಹುಜೂರ!

ಖುಸ್ರು—ಹಾಗಾದರೆ ಈ ಯೋಗಿನಿಯ ವೇಷದಿಂದ ನೀನು ಎತ್ತ ಹೊರಟಿದ್ದೆ?

ಮಂದಾಕಿನಿ—ನಿಮ್ಮನ್ನು ಹುಡುಕುತ್ತ ಈ ವನದಲ್ಲಿ ಸಂಚರಿಸುತ್ತಿದ್ದೆನು.

ಖುಸ್ರು—(ಆಶ್ಚರ್ಯದಿಂದ)ಏನಂದಿ? ನನ್ನನ್ನು ಹುಡುಕುತ್ತಿದ್ದೆಯಾ? ಹಾಗಾದರೆ ಆಗಲೇ ನೀನು ಅಂದ ಪದ್ಯವು ಯಾರಸಲುವಾಗಿ?

ಮಂದಾಕಿನಿ—ನಿಮ್ಮ ಸಲುವಾಗಿಯೇ. ನಾನು ಎಂದೂ ಸುಳ್ಳು ಮಾತಾಡಿ ಒಬ್ಬರನ್ನು ಮೋಸಗೊಳಿಸುವವಳಲ್ಲ.

ಖುಸ್ರು—ನನ್ನ ಮೇಲೆ ನಿನ್ನ ಪ್ರೇಮವಿರುದೋ ಹೇಗೆ ಹೇಳು. ನನ್ನನ್ನು ವಿಚಾರದ ಗೊಂದಲಕ್ಕೆ ಈಡು ಮಾಡಬೇಡ.

ಮಂದಾಕಿನಿ—ಶತ್ರುವಿನ ಮೇಲೆ ಎಂದಾದರೂ ಯಾರಾದರೂ ಪ್ರೇಮ ಮಾಡುವರೆಯೆ? ಕುಮಾರ, ನೀವು ನನ್ನ ಶತ್ರುಗಳಿರುವಿರಿ.

ಖುಸ್ರು—ನಾನು ನಿನ್ನ ಶತ್ರುವು ಹೇಗೆ?

ಮಂದಾಕಿನಿ—ಶಹಾಜಾದೇ ಸಾಹೇಬ, ನಿಮ್ಮ ಯೋಗದಿಂದಲೇ ನನ್ನ ಹೃದಯೇಶ್ವರನಾದ ದುರ್ಜಯಸಿಂಹನು ಜನ್ಮಭೂಮಿಯನ್ನು ಬಿಟ್ಟು ಹೋಗಬೇಕಾಯಿತೆಂಬದು ನಿಮಗೆ ಗೊತ್ತಿಲ್ಲವೆ? ಕದಾಚಿತ್ ಈಗ ನನ್ನ ಪ್ರಾಣೇಶ್ವರನು ಕಾರಾಗೃಹದ ದುಃಖವನ್ನಾದರೂ ಭೋಗಿಸುತ್ತಿರಬಹುದು. ನಿಮ್ಮನ್ನು ಕೊಲ್ಲಲು ಉದ್ಯೋಗಿಸಿದ ಅಪರಾಧಕ್ಕಾಗಿಯೇ ಮಾನಸಿಂಹ ಮಹಾರಾಜರು ನನ್ನ ಪತಿಗೆ ಈ ಶಿಕ್ಷೆಯನ್ನು ವಿಧಿಸಲಿಲ್ಲವೆ?

ಖುಸ್ರು—(ಖಿನ್ನ ಸ್ವರದಿಂದ) ಹೌದು, ಇದಕ್ಕಾಗಿ ನನಗೆ ಬಹಳ ವ್ಯಸನವಾಗುತ್ತದೆ. ಮಂದಾಕಿನೀ, ನಾನೇನು ಮಾಡಲಿ? ಮಾನಸಿಂಹರವರು ವಿಧಿಸಿದ ನ್ಯಾಯದಲ್ಲಿ ನಾನು ಕೈಹಾಕಲಾರೆನು. ಬೇರೆ ವಿಧದ ಸಹಾಯವು ನನ್ನಿಂದ ನಿನಗೆ ಆಗುವ ಹಾಗಿದ್ದರೆ ಹೇಳು, ನಾನು ಸಂತೋಷದಿಂದ ಮಾಡುವೆನು. ಮಂದಾಕಿನೀ, ಮಾನಸಿಂಹರಿಗೆ ಗೊತ್ತಾಗದಂತೆ ದುರ್ಜಯಸಿಂಹನು ಬಂಧಮುಕ್ತನಾಗುವದೊಂದು ಯುಕ್ತಿಯಿದ್ದರೆ ಹೇಳಬಾರದೇ?

ಖುಸ್ರುವಿನ ಈ ಮಾತುಗಳನ್ನು ಕೇಳಿ ಮಂದಾಕಿನಿಯು ಸ್ವಲ್ಪಹೊತ್ತು ವಿಚಾರಮಾಡಿ ಪುನಃ ಖುಸ್ರುವನ್ನು ಕುರಿತು—

ಮಂದಾಕಿನಿ—ಹೇಳುವೆನು, ಕುಮಾರ, ಅಂತಹದೊಂದು ಯುಕ್ತಿಯನ್ನು ಹೇಳುವೆನು. ನಿಮ್ಮ ಬೆರಳಿನೊಳಗಿನ ನಿಮ್ಮ ಹೆಸರಿನ ಉಂಗುರವನ್ನು ನನಗೆ ಕೊಡಿರಿ. ದುರ್ಜಯಸಿಂಹನು ಅಂಬರ ರಾಜಧಾನಿಯಿಂದ ಮೂರು ಹರದಾರಿಯ ಮೇಲಿರುವ ರತನಗಡದೊಳಗಿನ ಕಾರಾಗೃಹದಲ್ಲಿರುವನೆಂದು ನಾನು ಕೇಳಿದ್ದೇನೆ. ಇಲ್ಲಿಂದ ಆ ರತನಗಡವು ಒಂದೇ ಹರದಾರಿಯಿರುವದು. ನಿಮ್ಮ ಉಂಗುರದ ಸಹಾಯದಿಂದ ನನ್ನ ಸೌಭಾಗ್ಯದೇವತೆಯನ್ನು ಇಂದೇ ನಾನು ಕಾರಾಗೃಹದಿಂದ ಮುಕ್ತಮಾಡುವೆನು.

ಖುಸ್ರು—ಹಾ! ನಿನ್ನ ಉದ್ದೇಶವು ಈಗ ತಿಳಿಯಿತು. ಆದರೆ ಮಂದಾಕಿನೀ, ನಾನು ಇಲ್ಲಿಗೆ ಬರುವೆನೆಂಬದು ನಿನಗೆ ಹೇಗೆ ಗೊತ್ತಾಯಿತು? ಮತ್ತು ತರುಣಿಯಾದ ನೀನು ಏಕಾಂತದಲ್ಲಿ ಒಬ್ಬಳೇ ನನ್ನನ್ನು ಕಾಣಲಿಕ್ಕೆ ಹೇಗೆ ಧೈರ್ಯ ಮಾಡಿದೆ?

ಮಂದಾಕಿನಿ—ಶಹಾಜಾದೇ ಸಾಹೇಬ, ತಮ್ಮಿಂದ ಕಾರ್ಯವ ಸಾಧಿಸಲು ಹವಣಿಸುತ್ತಿದ್ದ ನಾನು ಏನಾದರೂ ಮಾಡಿ ಈಗ ತಮ್ಮ ಬಳಿಗೆ ಬಂದಿರುವೆನೆಂಬದಂತು ನಿಜವು; ಅದರಂತೆ ತಮ್ಮಂಥ ಉದಾರ ವೃತ್ತಿಯ ರಾಜಪುತ್ರರನ್ನು, ಅದರಲ್ಲಿ ಆಕಬರ ಬಾದಶಹರ ಮೊಮ್ಮಕ್ಕಳನ್ನು ಏಕಾಂತದಲ್ಲಿ ಕಾಣಲಿಕ್ಕೆ ಭಯವಾದರೂ ಏನು? ಕ್ಷುದ್ರ ವೃತ್ತಿಯ ನೀಚರ ನೆರಳಿಗೆ ನಿಲ್ಲುವಾಗ ಮಾತ್ರ ನಮ್ಮಂಥ ತರುಣಿಯರು ಭಯಗೊಳ್ಳಬೇಕಾಗುವದು. ಕುಮಾರ, ರಜಪೂತ ಸ್ತ್ರೀಯರು ತಮ್ಮ ಪಾತಿವೃತ್ಯ ರಕ್ಷಣದ ಉಪಾಯವನ್ನು ಮಾಡಿಕೊಳ್ಳದೆ ಹೊರಬೀಳರೆಂಬದು ತಮಗೆ ಗೊತ್ತಿರಬಹುದಲ್ಲವೆ?

ಖುಸ್ರು—ಅದು ಏನೇ ಇರಲಿ; ಮಂದಾಕಿನೀ, ನಾನು ನಿನಗೆ ಈ ಪರಿ ಉಪಕಾರ ಮಾಡಿದಾಗ ನೀನು ನನಗೆ ಮಾಡುವ ಪ್ರತ್ಯುಪಕಾರವೇನು?

ಮಂದಾಕಿನಿ—ಸಾಮ್ರಾಟರ ವಂಶಜರು ಪ್ರತ್ಯುಪಕಾರದ ಆಶೆಯಿಂದ ಉಪಕಾರ ಮಾಡುವರೆಂಬ ಮಾತು ನನಗೆ ಈವರೆಗೆ ಗೊತ್ತಿದ್ದಿಲ್ಲ; ಆದರೆ ಹುಜೂರ, ನನ್ನ ಪ್ರಾಣವನ್ನರ್ಪಿಸುವದರಿಂದ ನಿಮ್ಮ ಹಿತವಾಗುವಹಾಗಿದ್ದರೆ ನಾನು ಹಾಗೆ ಮಾಡಲಿಕ್ಕೂ ಹಿಂದೆ ಮುಂದೆ ನೋಡಲಿಕ್ಕಿಲ್ಲ. ನಿಮ್ಮನ್ನು

ನಾನು—"ನನ್ನ ಪ್ರಾಣೇಶ್ವರನಿಗೆ ಸ್ವಾತಂತ್ರ್ಯದಾನ ಮಾಡಿದ ಮಹಾತ್ಮರೆಂ"ತಲೂ, "ಜೀವದಾನ ಮಾಡಿದ ಪರಮೇಶ್ವರನೆ"ಂತಲೂ ಯಾವಾಗಲೂ ತಿಳಿಯುವೆನು. ನಿಮ್ಮ ಕಲ್ಯಾಣಕ್ಕಾಗಿ ನಾನು ಪರಮೇಶ್ವರನನ್ನು ಯಾವಾಗಲೂ ಪ್ರಾರ್ಥಿಸುವೆನು.

ಖುಸ್ರುವಿಗೆ ಮಂದಾಕಿನಿಯ ಈ ಮಾತುಗಳಿಂದ ಸಮಾಧಾನವಾಗಲಿಲ್ಲ. ಮಂದಾಕಿನಿಯ ವಿಷಯದ ಪಾಪಬುದ್ಧಿಯಿಂದ ಅವನ ಹೃದಯವು ಸಂಪೂರ್ಣ ದಗ್ಧವಾಗಿಹೋಗಿತ್ತು. ಆತನು ತೀರಾ ವಿವೇಕಭ್ರಷ್ಟನಾಗಿದ್ದನು. ಆಗ ಆತನು ಮಂದಾಕಿನಿಯನ್ನು ಕುರಿತು—

ಖುಸ್ರು—ಮಂದಾಕಿನೀ, ನೀನು ಏನೇ ಹೇಳು. ನೀನು ನನ್ನ ಹೆಂಡತಿಯಾದ ಹೊರತು ನನಗೆ ಸಮಾಧಾನವಾಗದು; ನನಗೆ ಸಮಾಧಾನವಾಗದ ಹೊರತು ನಿನಗೆ ನನ್ನ ಬೆರಳೊಳಗಿನ ಉಂಗುರವನ್ನು ನಾನು ಕೊಡಲಾರೆನು.

ಮಂದಾಕಿನಿ—ಛಿ ಛೀ! ಶಹಾಜಾದೇ ಸಾಹೇಬ, ನೀವು ದಿಲ್ಲಿಯ ಸಿಂಹಾಸನವನ್ನೇರಲು ಯೋಗ್ಯರಾಗಬಹುದೇ? ಪರಸ್ತ್ರೀಯರ ವಿಷಯವಾಗಿ ಪಾಪಬುದ್ಧಿಯುಳ್ಳವರು ಸಿಂಹಾಸನವೇರಲು ಎಂದೂ ಯೋಗ್ಯರಾಗಲಾರರು; ಆದ್ದರಿಂದ ದಿಲ್ಲಿಯ ಸಿಂಹಾಸನವು ನಿಮಗೆ ಸಿಗುವದು ಅಶಕ್ಯವಾಗಿರುವದು. ನನ್ನ ಈ ಮಾತು ಭವಿಷತ್ಕಾಲದಲ್ಲಿ ನಿಮ್ಮ ಅನುಭವಕ್ಕೆ ಬಾರದೆ ಇರಲಿಕ್ಕಿಲ್ಲ! ಅದಿರಲಿ, ಹುಜೂರ, ಪಾತಿವ್ರತ್ಯ ಭಂಗಕ್ಕೆ ನಾನು ಸಿದ್ಧಳಾದವಳಿದ್ದರೆ ನಿಮ್ಮಿಂದ ಉಂಗುರವನ್ನು ಪಡೆದು ಪತಿಯನ್ನು ಮುಕ್ತ ಮಾಡುವದಕ್ಕಾದರೂ ಏಕೆ ಹೋಗಬೇಕು? ಇಷ್ಟೂ ನಿಮಗೆ ತಿಳಿಯಬಾರದೇ? ದಿಲ್ಲಿಯ ಚಕ್ರವರ್ತಿಯ ಪದವನ್ನೇರಲಿಚ್ಛಿಸುವ ನಿಮ್ಮ ಹೃದಯದಲ್ಲಿ ಪತಿವ್ರತೆಯರ ವಿಷಯದ ಆದರ ಬುದ್ಧಿಯು ಸ್ವಲ್ಪವೂ ವಾಸಿಸದಿರುವದು ಯೋಗ್ಯವಾಗಬಹುದೇನು? ಕುಮಾರ, ಸದಯಾಂತಃಕರಣದಿಂದ ನನ್ನ ಮಾತಿನ ವಿಚಾರಮಾಡಬೇಕೆಂದು ಪ್ರಾರ್ಥಿಸುವೆನು. ಈ ನಶ್ವರ-ಮಲಿನ ದೇಹದಲ್ಲಿ ಇಷ್ಟು ಆಸಕ್ತಿಯೇಕೆ? ಪ್ಯಾರಿಬಾನುವು ನಿಮ್ಮ ಧರ್ಮಪತ್ನಿಯಾಗಿದ್ದು, ಆಕೆಯು ನಿಮ್ಮ ವಿರಹವ್ಯಥೆಯಿಂದ ತಳಮಳಿಸುತ್ತಿರುವಾಗ ನೀವು ಹೀಗೆ ಪರಸ್ತ್ರೀಲಂಪಟರಾಗುವದು ಧರ್ಮವಾಗಬಹುದೆ?

ನಮ್ಮಂಥ ತರುಣಿಯರ ಸೌಂದರ್ಯವಾದರೂ ಎಷ್ಟು ದಿವಸ ನಿಲ್ಲುವದು? ಆ ಸೌಂದರ್ಯವು ನಷ್ಟವಾದಬಳಿಕ ಸೌಂದರ್ಯಾಸಕ್ತರಾದ ನಿಮ್ಮಪ್ರೇಮವು ನನ್ನ ಮೇಲೆ ಸ್ಥಿರವಾಗಿ ಉಳಿಯಬಹುದೇ? ಕ್ಷಣಿಕ ಸುಖಕ್ಕಾಗಿ ಮಾಡುವ ಪಾಪಕೃತ್ಯದಿಂದ ಸುಖವಾಗಬಹುದೆ? ಹುಜೂರ, ಪಾಪಜನಿತ ಮಹಾ ದುಃಖಕ್ಕೆ ತಾವು ಗುರಿಯಾಗಬಾರದು.

ಮಂದಾಕಿನಿಯ ಈ ಉಪದೇಶದ ಪರಿಣಾಮವು ಖುಸ್ರುವಿನ ಮೇಲೆ ಚನ್ನಾಗಿ ಆಯಿತು. ಆತನು ಎಷ್ಟು ಚಂಚಲ ವೃತ್ತಿಯ ಉದ್ಧತ ತರುಣ ನಿದ್ದರೂ, ವಂಶಪರಂಪರಾಗತ ಕುಲೀನತೆಯ ಕೆಲವು ಸದ್ಗುಣಗಳು ಆತನಲ್ಲಿ ಇದ್ದವು. ಆತನ ಹೃದಯದಲ್ಲಿ ಒಂದು ಪ್ರಕಾರದ ಔದಾರ್ಯವೂ, ಅಲ್ಪ ಸ್ವಲ್ಪ ಆತ್ಮಸಂಯಮನವೂ, ಕೆಲಮಟ್ಟಿಗೆ ವಿಚಾರಶಕ್ತಿಯೂ ಇದ್ದವು. ಆವು ಒಂದು ಮೂಲೆಯಲ್ಲಿ ಬಿದ್ದಹಾಗಾದದ್ದರಿಂದ ಅವನ್ನು ಹುಡುಕಿ ಹೊರಗೆಡವಲಿಕ್ಕೆ ಪ್ರಯಾಸಪಡಬೇಕಾಗುತ್ತಿತ್ತು. ಅಂಥ ಪ್ರಯಾಸವನ್ನು ಈಗ ಮಂದಾಕಿನಿಯು ಪಟ್ಟಿದ್ದರಿಂದ ಖುಸ್ರುವು ಒಬ್ಬ ದಿವ್ಯ ಪುರುಷನಾದನು. ಆತನು ಪಶ್ಚಾತ್ತಾಪದಿಂದ ಮಂದಾಕಿನಿಯನ್ನು ಕುರಿತು--"ಮಂದಾಕಿನೀ, ನಾನು ನಿಜವಾಗಿಯೇ ಭ್ರಷ್ಟ ಮಾರ್ಗವನ್ನು ಹಿಡಿದು ದೊಡ್ಡ ಅನರ್ಥಕ್ಕೆ ಗುರಿಯಾಗುತ್ತಿದ್ದೆನು; ಆದರೆ ನಿನ್ನ ಉಪದೇಶವು ನನ್ನನ್ನು ಪಾಪಮುಕ್ತಮಾಡಿತು. ನನ್ನಿಂದಾದ ನಿನ್ನ ಉಪಮರ್ದನಕ್ಕಾಗಿ ನನ್ನನ್ನು ನೀನು ಮನಃಪೂರ್ವಕವಾಗಿ ಕ್ಷಮಿಸಬೇಕು! ಈ ಕ್ಷಮೆಯ ಪ್ರತಿಫಲವಾಗಿಯೇ ನಾನು ನಿನಗೆ ನನ್ನ ಬೆರಳೊಳಗಿನ ಈ ನನ್ನ ಹೆಸರಿನ ಉಂಗುರವನ್ನು ಕೊಡುವೆನು. ನಿನ್ನ ಕೆಲಸವಾದಕೂಡಲೆ ಈ ಉಂಗುರವನ್ನು ನನಗೆ ತಿರುಗಿ ಕೊಡುವೆನೆಂದು ನೀನು ವಚನಕೊಡಬೇಕು.

ಖುಸ್ರುವಿನ ಈ ಮಾತಗಳನ್ನು ಕೇಳಿ ಮಂದಾಕಿನಿಗೆ ಬಹಳ ಸಂತೋಷವಾಯಿತು. ಆ ರಾಜಪುತ್ರನ ವಿವೇಕ ಶಕ್ತಿಯು ನಿಜವಾಗಿಯೇ ಜಾಗ್ರತವಾಗಿ, ದೊಡ್ಡವರ ದೊಡ್ಡಿಸ್ತನವು ಆತನಲ್ಲಿ ವ್ಯಕ್ತವಾಗತೊಡಗಿತು. ಇದನ್ನು ನೋಡಿ ಮಂದಾಕಿನಿಯ ಸೇಡು ತೀರಿಸಿಕೊಳ್ಳುವ ಬುದ್ಧಿಯು ಆಗಿನ ಮಟ್ಟಿಗಾದರೂ ನಷ್ಟವಾಯಿತೆಂದು ಹೇಳಬಹುದು. ಆಕೆಯು ಕೆಲ ಹೊತ್ತು ಸುಮ್ಮನಿದ್ದು ಖುಸ್ರುವನ್ನು ಕುರಿತು—ಹುಜೂರ, ತಮ್ಮ ಅಪ್ಪಣೆ

ಯನ್ನು ನಾನು ಶಿರಸಾ ಮನ್ನಿಸುವೆನು. ನಾನು ಯಾವದೊಂದು ಬಗೆಯಿಂದ ತಮ್ಮನ್ನು ಕಂಡು, ಈ ಉಂಗುರವನ್ನು ಕೈಮುಟ್ಟಿ ನಾನು ತಮಗೆ ಕೊಡುವೆನು, ಎಂದು ಹೇಳಿದಳು. ಅದನ್ನು ಕೇಳಿ ಖುಸ್ರುವು ಉಂಗುರವನ್ನು ತೆಗೆದು ಕೊಡುತ್ತ ಮಂದಾಕಿನಿಗೆ—"ಮಂದಾಕಿನೀ, ಮಾನಸಿಂಹ ಮಹಾರಾಜರು ನಿನ್ನ ಗಂಡನಿಗೆ ಶಿಕ್ಷೆಯನ್ನು ವಿಧಿಸಿರುವಾಗ ಅವರಿಗೆ ವಿರುದ್ಧವಾಗಿ ಹೀಗೆ ನಾನು ವ್ಯವಹರಿಸುವದು ಯೋಗ್ಯವಲ್ಲವು. ಅಕಸ್ಮಾತ್ ಕರ್ಮ-ಧರ್ಮ ಸಂಯೋಗದಿಂದ ನೀನು ಮಾನಸಿಂಹರ ಕೈಯಲ್ಲಿ ಸಿಕ್ಕರೆ, ಅವರು ನಿನ್ನನ್ನು ಈ ಉಂಗುರದ ವಿಷಯವಾಗಿ ಕೇಳಿದಾಗ ನೀನು ಏನು ಹೇಳುವೆ?" ಎಂದು ಪ್ರಶ್ನಮಾಡಲು, ಮಂದಾಕಿನಿಯು--"ನಾನು ಇದನ್ನು ಯುವರಾಜರ ಕೋಣೆಯೊಳಗಿಂದ ಕದ್ದುಕೊಂಡು ಬಂದೆನೆಂದು ಹೇಳುವೆನೆಂ"ದು ತಟ್ಟನೆ ಉತ್ತರಕೊಟ್ಟಳು. ಅಷ್ಟರಲ್ಲಿ ಖುಸ್ರುವಿನ ಒಬ್ಬ ರಾವುತನು ಖುಸ್ರುವನ್ನು ಹುಡುಕುತ್ತ ದೂರದಲ್ಲಿ ಬರುತ್ತಿರಲು, ಮಂದಾಕಿನಿಯು ಖುಸ್ರುವನ್ನು ಕುರಿತು—"ಅಗೋ, ಯಾವನೋ ಒಬ್ಬ ರಾವುತನು ಇತ್ತಕಡೆಗೆ ಬರುತ್ತಿರುವನು" ಎಂದು ಹೇಳಿ, ತಟ್ಟನೆ ಗಿಡಗಳ ಗುಂಪಿನಲ್ಲಿ ಮರೆಯಾಗಿ ಹೋಗಿಬಿಟ್ಟಳು.



## ೬ ನೆಯ ಪ್ರಕರಣ

# ದೈವಸಂಕಲ್ಪ

ಪರಸ್ತ್ರೀಯ ಅಭಿಲಾಷೆಗೆ ಒಳಪಟ್ಟ ಮನುಷ್ಯನ ಮನಸ್ಸು ಅತ್ಯಂತ ಕ್ಷುದ್ರವಾಗಿ ಹೋಗುವದು. ಆ ಕ್ಷುದ್ರ ಮನಸ್ಸಿನಲ್ಲಿ ಹಲಕೆಲವು ಸದ್ಗುಣಗಳಿದ್ದರೂ, ಗೆದ್ದಲಿ ತಿಂದ ಕಟ್ಟಿಗೆಯಂತೆ ಆ ಸದ್ಗುಣಗಳು ಕೆಲಸಕ್ಕೆ ಬಾರದವಾಗಿ, ಕಡೆಗೆ ಆ ಪರಸ್ತ್ರೀ ಲಂಪಟನು ಪಾಪಕೂಪದಲ್ಲಿ ಬಿದ್ದು ಪಶ್ಚಾತ್ತಾಪಪಡತೊಡಗುವನು! ಖುಸ್ರುವಿನ ಗತಿಯಾದರೂ ಹೀಗೆಯೇ ಆಯಿತು.

ಆತನು ಮಂದಾಕಿನಿಯ ನಿರ್ಧಾರದ ಕಿವಿಹಿಂಡುವಿಕೆಯಿಂದ ಎಚ್ಚತ್ತು ವಿವೇಕಿಯಾಗಿ ಆಗಿನ ಮಟ್ಟಿಗೆ ದೊಡ್ಡ ಮನುಷ್ಯನೆನಿಸಿಕೊಂಡರೂ, ಮಂದಾಕಿನಿಯ ಮೇಲಿನ ಆತನ ಅಭಿಲಾಷೆಯು ಅಳಿದು ಹೋಗಲಿಲ್ಲ. ಏನಾದರೂ ಮಾಡಿ ತಾನು ಮಂದಾಕಿನಿಯ ಪ್ರೇಮಕ್ಕೆ ಪಾತ್ರನಾಗಿ ಆಕೆಯನ್ನು ತನ್ನ ಧರ್ಮಪತ್ನಿಯಾಗಿ ಮಾಡಿಕೊಂಡರೆ, ತನ್ನ ದುಃಖ ಪೂರ್ಣ ಆಯುಷ್ಯವು ಸುಖಮಯವಾಗುವದೆಂದು ಆತನು ಭಾವಿಸತೊಡಗಿದನು. ಹಾಗೆ ಮಂದಾಕಿನಿಯು ತನ್ನ ಕೈಸೇರಿದರೆ ತನ್ನ ನಿರುತ್ಸಾಹಿಯಾದ ಮನಸ್ಸು ಸದಾ ಪ್ರಫುಲ್ಲಿತವಾಗಿರಬಹುದೆಂತಲೂ ಆತನು ತರ್ಕಿಸಿದನು. ಆ ಅವಿವೇಕಿಯಾದ ಕ್ಷುದ್ರ ಹೃದಯದ ಖುಸ್ರುವಿಗೆ ಲಾವಣ್ಯನಿಧಿಯಾದ ತನ್ನ ಹೆಂಡತಿ ಪ್ಯಾರಿಬಾನುವಿನ ಮಹತ್ವವು ತೋರದಾಯಿತು. ನಿಜವಾಗಿ ಪ್ಯಾರಿಬಾನುವು ಎಲ್ಲ ಬಾಬುಗಳಿಂದಲೂ ಮಂದಾಕಿನಿಯನ್ನು ಹಿಂದೆ ದೂಡುವಂತೆ ಇದ್ದಳು. ಆಗಿನ ಮೊಗಲ ಜನಾನಖಾನೆಯಲ್ಲಿ ಪ್ಯಾರಿಬಾನುವನ್ನು ಸರಿಗಟ್ಟುವ ಸೌಂದರ್ಯಶಾಲಿನಿಯರು ಇದ್ದರೆ ಬಹು ಕ್ವಚಿತ್ತಾಗಿ ಇದ್ದಾರೆಂದು ಹೇಳಬಹುದು. ಅಂಥ ಚಲುವ ಹೆಂಡತಿಯ ಅರವಿಲ್ಲದೆ ಖುಸ್ರುವು ಮಂದಾಕಿನಿಯ ಹಂಬಲ ಹಿಡಿದದ್ದನ್ನು ನೋಡಿದರೆ, ಹೊರಚಾಳಿಯ ಹೇಸಿ ಜನರಿಗೆ ಮನೆಯ ಹೆಂಡತಿಯು ಕುರುಡೆಯಾಗಿ ತೋರುವದೇ ನಿಜವೆಂದು ಹೇಳಬೇಕಾಗುವದು! ಖುಸ್ರುವಿನ ಮೇಲೆ ಪಂಚಪ್ರಾಣ ಮಾಡುವ ಅಕಬರ ಬಾದಶಹನು ಆತನ ಸ್ವಚ್ಛಂದ ವೃತ್ತಿಯನ್ನರಿತು, ಆತನನ್ನು ಸಂಪೂರ್ಣಸ್ವಾಧೀನ ಪಡಿಸಿಕೊಳ್ಳಬೇಕೆಂತಲೇ ಪ್ಯಾರಿಬಾನುವಿನಂಥ ಲೋಕಸುಂದರಿಯನ್ನು ಹುಡುಕಿ ತನ್ನ ಆ ಮೊಮ್ಮಗನಿಗೆ ಲಗ್ನಮಾಡಿದ್ದನು. ಆದರೆ ನಾಯಿಯು ಏನುಮಾಡಿದರೂ ನಾಯಿಯೇ ಆಗಿರುವಂತೆ, ಪರಸ್ತ್ರೀಲಂಪಟನಾದಖುಸ್ರುವು ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡುವವನೇ ಆದನು.

ತನ್ನ ರಾವುತನು ತನ್ನನ್ನು ಹುಡುಕುತ್ತ ಬಂದದ್ದನ್ನು ನೋಡಿ ಖುಸ್ರುವು ಎಚ್ಚತ್ತು ಆತನನ್ನು ಹಿಂಬಾಲಿಸಿ ನಡೆದನು; ಆದರೆ ಆತನ ಮನಸ್ಸು ಮಂದಾಕಿನಿಯ ಸೌಂದರ್ಯದಲ್ಲಿ ತೊಡಗಿ ದೀನವಾಗಿತ್ತು. ಆತನು ತನ್ನ ಮನಸ್ಸಿನಲ್ಲಿ—"ನಾನು ಮಂದಾಕಿನಿಯ ಪ್ರಾಪ್ತಿಗಾಗಿ ಯತ್ನಿ

ಸುವಲ್ಲಿ ಅಪರಾಧವೇನು? ನಾನು ಸಾಮಾನ್ಯ ಮನುಷ್ಯನಲ್ಲ. ಚಕ್ರವರ್ತಿ ಅಕಬರಬಾದಶಹನ ಮೊಮ್ಮಗನು; ಮುಂದೆ ದಿಲ್ಲಿಯ ಬಾದಶಹನಾಗತಕ್ಕವನು; ಬೇಕಾದದ್ದನ್ನು ಮಾಡುವ ಸಾಮರ್ಥ್ಯವು ನನ್ನಲ್ಲಿದೆ. ನನ್ನ ಸಮರ್ಥನಾದ ತಂದೆ ಸುಲ್ತಾನ ಸೇಲೀಮರು ಮೋಹರ ಉನ್ನಸೆಯನ್ನು (ನೂರಜಹಾನಳನ್ನು) ಸ್ವಾಧೀನ ಪಡಿಸಿಕೊಳ್ಳುವದಕ್ಕಾಗಿ, ಆಕೆಯ ಗಂಡನಾದ ವೀರಾಗ್ರಣಿ ಶೇರ ಅಫಗಾಣನನ್ನು ಕೊಲ್ಲಿಸಲು ಯತ್ನಿಸುತ್ತಿರುವರಲ್ಲವೆ? ಹಾಗೆ ನಾನು ಮಂದಾಕಿನಿಯ ಪ್ರಾಪ್ತಿಗಾಗಿ ದುರ್ಜಯಸಿಂಹನನ್ನು ಗೊತ್ತಿಗೆ ಹಚ್ಚಲು ಯಾಕೆ ಯತ್ನಿಸಬಾರದು? ಶೇರ ಅಫಗಾಣನ ಮುಂದೆ ದುರ್ಜಯಸಿಂಹನು ಯಾವ ಗಿಡದ ತೊಪ್ಪಲು? ನಾನು ಮಂದಾಕಿನಿಯ ಪ್ರಾಪ್ತಿಗಾಗಿ ಮಾಡುವ ಯತ್ನವು ಯಾಕೆ ಸಫಲವಾಗಲಿಕ್ಕಿಲ್ಲ?" ಎಂದು ಯೋಚಿಸುತ್ತ ತನ್ನ ಸೈನಿಕರಿದ್ದಲ್ಲಿಗೆ ಬಂದು ಅವರೊಡನೆ ಅಲಹಾಬಾದದ ಹಾದಿಯನ್ನು ಹಿಡಿದು ಮುಂದಕ್ಕೆ ಸಾಗಹತ್ತಿದನು. ಅಷ್ಟರಲ್ಲಿ ಐದು ಜನ ಮೊಗಲ ರಾವುತರು ತಮ್ಮ ಕುದುರೆಗಳನ್ನು ಓಡಿಸುತ್ತ ತನ್ನ ಕಡೆಗೆ ಬರುವದು ಆತನ ಕಣ್ಣಿಗೆ ಬಿದ್ದಿತು. ಆಗ ಖುಸ್ರುವು ತನ್ನ ಸೈನಿಕರನ್ನು ನಿಲ್ಲಿಸಿ, ಆ ಮೊಗಲ ರಾವುತರ ಹಾದಿಯನ್ನು ನೋಡತೊಡಗಿದನು. ಆತನ ಹೃದಯದಲ್ಲಿ ಭಯಂಕರವಾದ ಶಂಕೆಯು ಉತ್ಪನ್ನವಾಗಿ, ಆತನ ಮನಸ್ಸು ಅಸ್ವಸ್ಥವಾಯಿತು. ಸಾಮ್ರಾಟ್ ಅಕಬರನು ಫತ್ತೇಪುರ ಸಿಕ್ರಿಗೆ ಬಂದಂದಿನಿಂದ ಆತನ ಪ್ರಕೃತಿಯು ವಿಶೇಷ ಅಸ್ವಸ್ಥವಾಗಿತ್ತು. ಈ ಸ್ಥಿತಿಯಲ್ಲಿ ಈ ಮೊಗಲ ರಾವುತರು ಯಾವ ಕೆಟ್ಟಸುದ್ದಿಯನ್ನು ಹೇಳುವರೋ ಎಂದು ಖುಸ್ರುವು ತಳಮಳಿಸತೊಡಗಿದ್ದನು. ಆ ರಾವುತರು ತೀರ ಸನಿಯಕ್ಕೆ ಬರಲು, ಅವರಲ್ಲಿ ಮುಖ್ಯನಾದ ಬಾದಶಹನ ಖಾಸ ಕಾರಭಾರಿ ಲತಿಫಖಾನನನ್ನು ಕುರಿತು ಖುಸ್ರುವು ಆತುರತೆಯಿಂದ—"ಸುದ್ದಿಯೇನು ಲತೀಫ! ಜಹಾಪನ್ನಾಹರು ಸುಖರೂಪವಾಗಿ ಇರುವರೆಯೆ" ಎಂದು ಕೇಳಿದನು. ಆಗ ಲತೀಫನು ಕುದುರೆಯಿಂದ ಹಾರಿ ಬಹು ವಿನಯದಿಂದ ಸಲಾಮು ಮಾಡಿ, ಏನೂಮಾತಾಡದೆ ತನ್ನ ಪೆಟ್ಟಿಗೆಯೊಳಗಿನದೊಂದು ಕೆಂಪು ಲಕೋಟೆಯನ್ನು ಖುಸ್ರುವಿನ ಕೈಯಲ್ಲಿ ಕೊಟ್ಟನು. ಖುಸ್ರುವು ನಡುಗುವ ಕೈಗಳಿಂದ ಆ ಲಕೋಟೆಯನ್ನು ಒಡೆದು ಅವಸರದಿಂದ ಅದನ್ನು ಓದಿ ಮುಗಿಸಿ

ದನು. ಆ ಪತ್ರದ ಮುಖ್ಯ ಆಶಯವು—"ಸಾಮ್ರಾಟರ ಬೇನೆಯು ವಿಕೋಪಕ್ಕೆ ಹೋಗಿದ್ದು, ಅವರು ನಿಮ್ಮನ್ನು ನೋಡಲಿಚ್ಛಿಸುವದರಿಂದ ಕೂಡಲೆ ಹೊರಟು ಬರಬೇಕೆಂ"ಬವೇ ಆಗಿತ್ತು.

ಖುಸ್ರುವು ದೈವವಾದಿಯಾಗಿದ್ದನು. ತಾನು ತಾಯಿಯ ಅಪ್ಪಣೆಯಂತೆ ತಂದೆಯ ಕ್ಷಮೆ ಬೇಡಲು ಅಲಹಾಬಾದಕ್ಕೆ ಹೋಗುವದಕ್ಕಾಗಿ ಹೊರಟಿರಲು, ಮಧ್ಯದಲ್ಲಿಯೇ ಅಕಸ್ಮಾತ್ ಫತ್ತೇಪುರ ಸಿಕ್ರಿಗೆ ಹೋಗಬೇಕಾದದ್ದು ದೈವಗತಿಯೆಂತಲೇ ಆತನು ತಿಳಿದನು. ಆತನು ಲತೀಫನ ಮುಖದಿಂದ ಬಾದಶಹರ ಬೇನೆಯ ಎಲ್ಲ ಸುದ್ದಿಯನ್ನು ಕೇಳಿಕೊಂಡಬಳಿಕಂತು ಆತನು ತನ್ನ ಪ್ರೀತಿಯ ಅಜ್ಜನನ್ನು ಯಾವಾಗ ನೋಡೇನೆಂದು ಆತುರಪಡತೊಡಗಿದನು. ಆತನು ತನ್ನ ಕೈಕೆಳಗಿನ ರಾವುತನಾದ ಹಿಮ್ಮತ ಸಿಂಹನನ್ನು ಕುರಿತು ಖಿನ್ನತೆಯಿಂದ—ಹಿಮ್ಮತ, ಬಾದಶಹರಿಗೆ ಜಡ್ಡು ಬಹಳ ಆಗಿರುವದರಿಂದ ನನ್ನ ಮೊದಲಿನ ವಿಚಾರಗಳನ್ನೆಲ್ಲ ಬದಲಿಸಿ ನಾನು ಈಗ ಫತ್ತೇಪುರ ಸಿಕ್ರಿಗೆ ಹೋಗಬೇಕಾಯಿತು; ಇನ್ನು ನಾನು ಅಜಮೀರಕ್ಕೆ ಹೋಗುವ ಅವಶ್ಯವಿಲ್ಲ, ಅಲಹಾಬಾದಕ್ಕೆ ಹೋಗುವದಂತು ದೂರೇ ಉಳಿಯಿತು. ಹಿಮ್ಮತ್, ನೀವು ಹಿಂದಿನಿಂದ ಬರ್ರಿ. ನಾನು ಮುಂದೆ ಹೋಗುವೆನು" ಎಂದು ಹೇಳಿ, ಮೊಗಲ ರಾವುತರೊಡನೆ ಕುದುರೆಯನ್ನು ವೇಗದಿಂದ ಸಾಗಿಸುತ್ತ ನಡೆದನು. ಇಲ್ಲಿಂದ ಫತ್ತೇಪುರಸಿಕ್ರಿಯು ಸುಮಾರು ಐದುಹರದಾರಿಯಿತ್ತು. ಆದರೆ ಅವರು ಕುದುರೆಯನ್ನು ಓಡಿಸುತ್ತ ಹೋದದ್ದರಿಂದ, ಬೇಗನೆ ಸಿಕ್ರಿಗೆ ಮುಟ್ಟಿದರು. ಖುಸ್ರುವು ಕುದುರೆಯನ್ನು ಅಲ್ಲಿಯೇ ಬಿಟ್ಟು, ಬಹು ಒತ್ತರದಿಂದ ಬಾದಶಹನ ಮಹಾಲಿನ ಬಾಗಿಲಿಗೆ ಹೋದನು. ಆತನು ಅಲ್ಲಿ ಕಾವಲುಗಾರರ ಮುಖ್ಯನನ್ನು ಕುರಿತು—"ಶಹಾನಶಹರ ಪ್ರಕೃತಿಯು ಈಗ ಹೇಗಿದೆ?" ಎಂದು ಪ್ರಶ್ನೆ ಮಾಡಲು, ಆ ಕಾವಲುಗಾರನು ತನ್ನ ಖಡ್ಗವನ್ನು ತಗ್ಗಿಸಿ ಶಹಾಜಾದಾನನ್ನು ಸನ್ಮಾನಿಸಿ ಕುರ್ನಿಸ ಮಾಡಿ ನಮ್ರ ಸ್ವರದಿಂದ ಆತನನ್ನು ಕುರಿತು—"ಜನಾಬ, ಸಾಮ್ರಾಟರ ಪ್ರಕೃತಿಯು ನಿನ್ನೆ ರಾತ್ರಿ ಬಹಳ ಕಠಿಣಾವಸ್ಥೆಯನ್ನು ಹೊಂದಿತ್ತು; ಆದರೆ ಇಂದು ಬೆಳಗಿನಿಂದ ಚನ್ನಾಗಿ ಗುಣವಾಗಿ ಈಗ ಖಾವಿಂದರು ಸುಖವಾಗಿರುವರು, ಎಂದು ಹೇಳಿದನು. ಅದನ್ನು ಕೇಳಿ ಖುಸ್ರು

ವಿಗೆ ಬಹಳ ಸಮಾಧಾನವಾಗಿ, ಆತನು ಮತ್ತೆ ಆ ಕಾವಲುಗಾರನನ್ನು ಕುರಿತು--

ಖುಸ್ರು— ಈಗ ಶಹಾನ್‌ಶಹರು ಎಲ್ಲಿರುವರು?

ಕಾವಲುಗಾರ—ತಮ್ಮ ಖಾಸ ಮಹಾಲಿನಲ್ಲಿ ಕುಳಿತಿರುವರು.

ಖುಸ್ರು—ಅಲ್ಲೆ ಮತ್ತೆಯಾರು ಇರುವರು?

ಕಾವಲುಗಾರ—ಮಹಾರಾಜ ಬೀರಬಲ್ಲರೂ, ಬಾದಶಹರ ಅಭಿನ್ನ ಹೃದಯದ ಮಿತ್ರ ಅಬುಲ್‌ಫಜಲರೂ ಇರುವರು.

ಈ ಮೇರೆಗೆ ಪ್ರಶ್ನೋತ್ತರಗಳಾದ ಕೂಡಲೆ ಖುಸ್ರುವು ಅಲ್ಲಿ ನಿಲ್ಲದೆ ಅವಸರದಿಂದ ಸಾಮ್ರಾಟರ ಖಾಸ ಮಹಾಲನ್ನು ಹೊಕ್ಕನು. ಅಲ್ಲಿ ಬಾದ ಶಹರು ಸುವರ್ಣ ಮಂಚದ ಮೇಲಿನ ಹಂಸತೂಲದ ಹಾಸಿಗೆಯ ಮೇಲೆ ಲೋಡಿಗೆ ಆತು ಕಾಲು ಚಾಚಿಕೊಂಡು ಬೀರಬಲ್ಲನೊಡನೆ ಮಾತಾಡುತ್ತ ಕುಳಿತುಕೊಂಡಿದ್ದರು. ಖುಸ್ರುವು ಒಮ್ಮೆಲೆ ಮಂಚದ ಬಳಿಗೆ ಹೋಗಿ ಮೊಣಕಾಲೂರಿ, ಬಾದಶಹರಿಗೆ ಕುರ್ನಿಸಾತ ಮಾಡಿ ಚರಣದೆಡೆಯಲ್ಲಿ ನಮ್ರನಾಗಿ ರುದ್ಧಸ್ವರದಿಂದ—“ದಾದಾ, ತಮ್ಮ ಪ್ರಕೃತಿಯು ಈಗ ಹೇಗಿ ರುವದು” ಎಂದು ಕೇಳಿದನು. ಆಗ ಅಕಬರನು ಮೊಮ್ಮಗನ ಈ ಅಕೃ ತ್ರಿಮ ಪ್ರೇಮಕ್ಕಾಗಿ ತನ್ನನ್ನು ಧನ್ಯನೆಂದು ತಿಳಿಯುತ್ತ ಅತ್ಯಂತ ವಾತ್ಸಲ್ಯ ದಿಂದ ಖುಸ್ರುವನ್ನು ಹತ್ತರ ಕರೆದುಕೊಂಡು ಆತನ ಮೋರೆಯ ಮೇಲೆ ಕೈಯಾಡಿಸುತ್ತ—“ಭಲೆ! ಎಷ್ಟು ಬೇಗನೆ ಬಂದೆ ಖುಸ್ರೂ! ನಿನ್ನಿನ ಭಯಂಕರವಾದ ಬೇನೆಯಲ್ಲಿ ನನ್ನ ಅಂತವಾಗಿದ್ದರೆ, ಇಂದು ನೀನು ನನ್ನ ಕಬರಸ್ಥಾನದ ಮೇಲೆ ಕಣ್ಣೀರು ಸುರಿಸಬೇಕಾಗುತ್ತಿತ್ತು; ಆದರೆ ಈಗ ಅಂಜಿಕೆಯಿಲ್ಲ.” ಎಂದು ನುಡಿಯಲು, ಖುಸ್ರುವಿನ ಎದೆಯು ದಸಕ್ಕೆಂದು ಆತನು ತನ್ನ ಅಜ್ಜನನು ಕುರಿತು—

ಖುಸ್ರು—ಇಂಥ ನಿಷ್ಠುರಗಳೂ, ಘಾತಕಗಳೂ ಆದ ಶಬ್ದಗಳ ಉಚ್ಚಾ ರವನ್ನು ಮಾಡಬಾರದು ಜಹಾಪನಾಹ! ತಮ್ಮಹೊರತು ಈ ಹತಭಾಗ್ಯನ ಸ್ಥಿತಿಯಕಡೆಗೆ ನೋಡುವವರು ಎರಡನೆಯವರಾರೂ ಇರುವದಿಲ್ಲವು.

ಅಕಬರ—ನೀನು ಅಂಬರದಿಂದ ನೆಟ್ಟಗೆ ಇಲ್ಲಿಗೇ ಬಂದೆಯೇನು?

ಖುಸ್ರು—ಹೌದು ಜಹಾಪನಾಹ!

ಅಕಬರ—ಹಾಗಾದರೆ ನಿಮ್ಮ ಅವ್ವನು ನಿನ್ನ ಸಂಗಡ ಯಾಕೆ ಬರಲಿಲ್ಲ?

ಖುಸ್ರು—ಆಕೆಯು ಅಲಹಾಬಾದಕ್ಕೆ ಸುಲ್ತಾನ ಸೇಲೀಮರ ಕಡೆಗೆ ಹೋದಳು.

ಅಕಬರ—ಅಲಹಾಬಾದಕ್ಕೆ? ಅದೇಕೆ? ಅಲ್ಲಿಗೆ ಹೋಗಲು ಆಕೆಗೆ ಯಾರು ಆಲೋಚನೆ ಹೇಳಿದರು?

ಖುಸ್ರು—ಯಾರೂ ಇಲ್ಲ. ಸ್ವಬುದ್ಧಿಯಿಂದಲೇ ಆಕೆಯು ಹೋದಳು.

ಅಕಬರ—ನನಗೆ ಇಷ್ಟು ಜಡ್ಡು ಆದದ್ದು ನಿನ್ನ ತಾಯಿಗೆ ಗೊತ್ತಿಲ್ಲವೋ?

ಖುಸ್ರು—ಇಲ್ಲ, ಆಕೆಗೆ ಗೊತ್ತಿಲ್ಲ. ಗೊತ್ತಿದ್ದರೆ ಆಕೆಯು ಅಲ್ಲಿಗೆ ಹೋಗುತ್ತಿದ್ದಿಲ್ಲ. ಅಲಹಾಬಾದದಿಂದ ಅಗತ್ಯದ ಅಪ್ಪಣೆಯಾದದ್ದರಿಂದ ಆಕೆಯು ಅಲ್ಲಿಗೆ ಹೋಗಬೇಕಾಯಿತು.

ಅಕಬರ—ಹ! ತಿಳಿಯಿತು. ಸೇಲೀಮನ ಹಲವು ಗೂಢ ರಹಸ್ಯಗಳಲ್ಲಿ ಇದೊಂದು ರಹಸ್ಯದ ತಂತುವಾಗಿರುವದು. ಒಮ್ಮೊಮ್ಮೆ ಆತನ ಈ ರಹಸ್ಯದ ಕಸುವು ತೀವ್ರವಾದಾಗ ನನ್ನ ಉಪದೇಶದ ಅಥವಾ ಅಪ್ಪಣೆಯ ಆಟವೂ ನಡೆಯುವದಿಲ್ಲ. ಒಳ್ಳೇದು ಅದಿರಲಿ, ನಿನ್ನ ಮಾವ ರಾಜಾಮಾನಸಿಂಹನು ಈಗ ಎಲ್ಲಿರುವನು?

ಖುಸ್ರು—ಅವರು ಅಂಬರ ರಾಜಧಾನಿಯಲ್ಲಿಯೇ ಇರುವರು; ಆದರೆ ಬೇಗನೇ ಇತ್ತ ಬರುವ ವಿಚಾರವು ಅವರದಿರುವದು.

ಖುಸ್ರುವಿನ ಈ ಕಡೆಯ ಮಾತುಗಳನ್ನು ಕೇಳಿ ಅಕಬರನ ಹುಬ್ಬುಗಳು ಕಿಂಚಿತ್ ವಕ್ರವಾದವು. ಖುಸ್ರುವು ಅದನ್ನು ನೋಡದಿದ್ದರೂ, ತೀಕ್ಷ್ಣದೃಷ್ಟಿಯ ಅಬುಲಫಜಲನ ಕಣ್ಣಿಗೆ ಅದು ಕಾಣದೆ ಇರಲಿಲ್ಲ. ಇತ್ತಿತ್ತ ಮಾನಸಿಂಹನು ಖುಸ್ರುವಿನ ಪಕ್ಷವಹಿಸಿ ಹೆಣಗುತ್ತಿರುವಾಗ ಬಾದಶಹನ ಅಪ್ಪಣೆಯನ್ನು ದುರ್ಲಕ್ಷಿಸತೊಡಗಿದ್ದನು. ಅದರಿಂದ ಅಕಬರನು ಮಾನಸಿಂಹನ ವಿಷಯವಾಗಿ ಮನಸ್ಸಿನಲ್ಲಿ ರುಷ್ಟನಾಗಿದ್ದನು. ಬಾದಶಹನ ಈ ಹುಬ್ಬುಗಂಟಿಕ್ಕುವಿಕೆಯಲ್ಲಿ ಎಷ್ಟು ಸಾಮರ್ಥ್ಯವಿರುತ್ತದೆಂಬದನ್ನು ಅಬುಲಫಜಲನು ಅರಿತವನಾದದ್ದರಿಂದ, ಮಾನಸಿಂಹನ ವಿಷಯವಾಗಿ

ಬಾದಶಹನು ಹುಬ್ಬುಗಂಟಿಕ್ಕಿದ್ದಕ್ಕಾಗಿ ಆ ತತ್ವಜ್ಞ ಅಬುಲಫಜಲನು ಚಕಿತ ನಾದನು; ಆದರೆ ಕ್ಷಣಮಾತ್ರದಲ್ಲಿ ಬಾದಶಹನ ಮುಖದಲ್ಲಿ ಪ್ರಸನ್ನತೆಯು ತೋರಹತ್ತಿತು. ಆತನು ಶಾಂತಸ್ವರದಿಂದ ಖುಸ್ರುವನ್ನು ಕುರಿತು—ಖುಸ್ರೂ, ನೀನು ಇಲ್ಲಿಗೆ ಬಾರದೆ ಮೊದಲು ನಿನ್ನ ಅಂತರ್ಗೃಹಕ್ಕೆ ಹೋಗಿ, ನಿನ್ನ ಹೆಂಡತಿಯನ್ನು ಕಂಡು ಬರಬೇಕಾಗಿತ್ತು. ಆ ನಿರಪರಾಧಿಯಾದ ಬಾಲಿಕೆಯು ನಿನ್ನ ಹಾದಿಯನ್ನು ನೋಡುತ್ತಿರಬಹುದು. ಹೋಗು ಹೋಗು, ಮೊದಲು ಹೋಗಿ ಆಕೆಯನ್ನು ಸಮಾಧಾನಪಡಿಸಿ ಬಾ. ಆಮೇಲೆ ಮಾತಾಡುತ್ತ ಕುಳಿತುಕೊಳ್ಳೋಣ.” ಎಂದು ಹೇಳಿದನು. ಅಜ್ಜನ ಈ ಮಾತಿನಿಂದ ಖುಸ್ರುವು ನಾಚಿದರೂ, ಬಾದಶಹನಾದ ಆತನ ಅಪ್ಪಣೆಮೀರುವದು ಹೇಗೆ ಶಕ್ಯವಾದೀತು? ಖುಸ್ರುವು ಕೂಡಲೇ ಅಜ್ಜನ ಅಪ್ಪಣೆಯಂತೆ ಹೆಂಡತಿಯ ಬಳಿಗೆ ಹೋಗಲು ಹೊರಟನು. ಖುಸ್ರುವು ತನ್ನ ಪ್ರಿಯತಮೆಯಾದ ಪ್ಯಾರಿಬಾನುವಿನ ಮಂದಿರಕ್ಕೆ ಹೋದಾಗ ಆ ಸುಂದರಿಯು ವೀಣಾನಾದದಲ್ಲಿ ತನ್ನ ಮಂಜುಲ ಸ್ವರವನ್ನು ಬೆರಿಸಿ ಗಾಯನ ಮಾಡುತ್ತಿದ್ದಳು. ಪ್ಯಾರಿಬಾನುವು ಗಾಯನ ಶಾಸ್ತ್ರದಲ್ಲಿ ನಿಷ್ಣಾತಳಿದ್ದು, ಆಕೆಯ ಕಂಠವು ಬಹು ಸುಖಕರವಾಗಿತ್ತು. ಖುಸ್ರುವು ಹೆಂಡತಿಯ ಗಾಯನದಿಂದ ಮೋಹಿತನಾಗಿ ಅಲ್ಲಿಯೇ ಬಾಗಿಲ ಮರೆಗೆ ನಿಂತು ಆಕೆಯ ಸಂಪೂರ್ಣ ಗಾಯನವನ್ನು ಕೇಳಿದನು. ಖುಸ್ರುವು ಪ್ಯಾರಿಬಾನುವನ್ನು ಅಗಲಿ ಅಂಬರಕ್ಕೆ ಹೋಗಿ ಎರಡು ತಿಂಗಳು ಆಗಿತ್ತು. ಆ ಸುಂದರಿಗೆ ಈವರೆಗೆ ಪತಿವಿಯೋಗದ ಅನುಭವವೇ ಇಲ್ಲದ್ದರಿಂದ, ಈ ಎರಡು ತಿಂಗಳ ವಿಯೋಗವು ಆಕೆಗೆ ದುಸ್ಸಹವಾಗಿತ್ತು. ಆಕೆಯು ತನ್ನ ವೀಣೆಯನ್ನು ಕೆಳಗೆ ಇಡ ಇಡುತ್ತ ವಿರಹ ವ್ಯಥೆಯಿಂದ ಉಸುರ್ಗಳೆದು—“ಹಾ ನಾಥ! ನೀವು ಇಷ್ಟು ನಿಷ್ಠುರರು ಹೇಗೆ ಆದಿರಿ?” ಎಂದು ನುಡಿಯಲು, ಖುಸ್ರುವು ಆಕೆಯ ಬಳಿಗೆ ಹೋಗಿ—ಪ್ರೀಯೇ, ನೀನು ನೆನಿಸಿದ ಕೂಡಲೆ ನಿನ್ನ ಬಳಿಗೆ ಬಂದಿರುವ ನಾನು ನಿಷ್ಠುರನು ಹೇಗೆ? ಹೀಗೆ ನಿಷ್ಕಾರಣ ದೋಷವಿಡುವದು ನಿನಗೆ ಯೋಗ್ಯವೇ?” ಎಂದು ಕೇಳಿದನು.

ಹೀಗೆ ಪತಿಯು ಅಕಸ್ಮಾತ್ತಾಗಿ ಬಂದದ್ದನ್ನು ನೋಡಿ ಪ್ಯಾರಿಬಾನುವು ಚಕಿತಳಾದಳು. ಪತಿ ದರ್ಶನದಿಂದಾದ ಆನಂದವು ಆಕೆಯ

ಹೊಟ್ಟೆಯಲ್ಲಿ ಹಿಡಿಸದಾಯಿತು. ಆ ಆನಂದದ ಭರದಲ್ಲಿ ಆಕೆಯು ಪತಿಯನ್ನು ಕುರಿತು—

ಪ್ಯಾರಿ—ಆಂಬರದಿಂದ ತಾವು ಒಬ್ಬರೇ ಬಂದಿರೋ? ಮಾಸಾಹೇಬರು ಎಲ್ಲಿರುವರು? ಅವರೇಕೆ ಬರಲಿಲ್ಲ?

ಖುಸ್ರು— ಪ್ರಿಯೇ, ಶಹಾಜಾದೇಸಾಹೇಬರವರ ಅಪ್ಪಣೆಯಂತೆ ಅವರು ಅಲಹಾಬಾದಕ್ಕೆ ಹೋದರು.

ಪ್ಯಾರಿ—ಸಾಮ್ರಾಟರ ಪ್ರಕೃತಿಯು ಅಸ್ವಸ್ಥವಾದದ್ದು ಮಾಸಾಹೇಬರಿಗೆ ಗೊತ್ತಿಲ್ಲವೆಂಬಂತೆ ಕಾಣುತ್ತದೆ.

ಖುಸ್ರು—ಇಲ್ಲ, ಅವರಿಗೆ ಗೊತ್ತಿಲ್ಲ. ಇಲ್ಲಿಂದ ಬಂದ ರಾವುತರು ನನಗೆ ಸಿಕ್ರಿಯ ಹಾದಿಯಲ್ಲಿ ಭೆಟ್ಟಿಯಾದರು. ಆ ಮೊದಲೇ ಮಾಸಾಹೇಬರು ಅಜಮೀರದ ಮಾರ್ಗವನ್ನು ಹಿಡಿದು ಹೋಗಿದ್ದರು.

ಪ್ಯಾರಿ—ಖುದಾನ ಮನಸ್ಸಿನಲ್ಲಿ ಏನಿರುವದೋ ಯಾರಿಗೆ ಗೊತ್ತು? ಶಹಾಜಾದೇಸಾಹೇಬರು ನಿಮಗೆ ಇಲ್ಲಿಗೆ ಹೋಗಲು ಆಜ್ಞಾಪಿಸಿದ್ದರೋ?

ಖುಸ್ರು—ಇಲ್ಲ, ಅವರು ನನಗೆ ಅಲಹಾಬಾದಕ್ಕೆ ಬರಲು ಆಜ್ಞಾಪಿಸಿದ್ದರು. ಆದರೆ ಹಾದಿಯಲ್ಲಿ ಇತ್ತಕಡೆಯಿಂದ ಬಂದ ರಾವುತರು ಕೊಟ್ಟ ಪತ್ರದಿಂದ ನನಗೆ ಬಾದಶಹರ ಪ್ರಕೃತಿಯ ಅಸ್ವಸ್ಥತೆಯು ತಿಳಿದು ಆ ಪತ್ರದಲ್ಲಿ ಬಾದಶಹರು ನನಗೆ ಬರಲು ಆಜ್ಞಾಪಿಸಿರುವದನ್ನು ನೋಡಿ ನಾನು ಇತ್ತಕಡೆಗೆ ಬಂದೆನು.

ಪ್ಯಾರಿ—ನಾಥ ನಾನು ಒಬ್ಬ ಸಾಮಾನ್ಯ ಸ್ತ್ರೀಯಿರುವದರಿಂದ ನನ್ನ ಬುದ್ಧಿಯು ಕ್ಷುದ್ರವಾಗಿಯೇ ಇರತಕ್ಕದ್ದು. ಅಂದಬಳಿಕ ನಿಮ್ಮ ಈ ಬರಹೋಗುವ ಸಂಬಂಧದಿಂದ ವಿಚಾರಮಾಡಲಿಕ್ಕೆ ನಾನು ಕೇವಲ ಅನಧಿಕಾರಿಯೆಂದು ಒಪ್ಪಿಕೊಳ್ಳುವೆನು; ಆದರೂ ತಾವು ಇಂದು ಇಲ್ಲಿಗೆ ಬಾರದೇ ಅಲಹಾಬಾದಕ್ಕೆ ಹೋಗಬೇಕಾಗಿತ್ತೆಂದು ನನಗೆ ತೋರುತ್ತದೆ. ನೀವು ಇಲ್ಲಿಗೆ ಬಂದದ್ದರ ಪರಿಣಾಮವು ವಿಪರೀತವಾಗದೆ ಹೋಗಲಿಕ್ಕಿಲ್ಲವೆಂದು ನನ್ನ ಮನಸ್ಸಿಗೆ ತೋರುವದು.

ಖುಸ್ರು—ಪ್ಯಾರೀ, ನಿನಗೇಕೆ ಹೀಗೆ ತೋರುವದು?

ಪ್ಯಾರಿ—ಅಕಬರ ಬಾದಶಹರ ಕ್ಷಮಾಶೀಲ ಹೃದಯವನ್ನು ನಾನು

ಸ್ವಾಧೀನಪಡಿಸಿಕೊಂಡಿರುವೆನು; ಆದರೆ ನನ್ನ ಮಾವಂದಿರ ಕಠಿಣ ಹೃದಯ ವನ್ನು ಒಲಿಸಿಕೊಳ್ಳುವದು ನನ್ನಿಂದಾಗದು. ಅವರು ಬಹಳ ಅಭಿಮಾನದ ಸ್ವಭಾವದವರು. ಸಣ್ಣ ಪುಟ್ಟ ಮಾತಿನ ಸಲುವಾಗಿಯೂ ಅವರಿಗೆ ಸಂಶ ಯವುಂಟಾಗುತ್ತದೆ. ಅವರು ಗಳಿಗೆ ಗಳಿಗೆಗೆ ಬಹಳ ಸಿಟ್ಟಾಗುತ್ತಿರುವರು. ನಮ್ಮಿಬ್ಬರ ದುರ್ದೈವದಿಂದಲೇ ಅನ್ನಲೊಲ್ಲಿರೇಕೆ, ಅವರು ನಮ್ಮನ್ನು ಒಳ್ಳೆಯ ದೃಷ್ಟಿಯಿಂದ ನೋಡುವದಿಲ್ಲ. ಆದ್ದರಿಂದ ನೀವು ಇಲ್ಲಿಗೆ ಬಂದ ಅಲ್ಪಕಾರ ಣದಿಂದಲೂ ಅನರ್ಥವುಂಟಾಗಬಹುದು.

ಹೆಂಡತಿಯ ಈ ಮಾತುಗಳು ಖುಸ್ರುವಿಗೆ ಸಯುಕ್ತಿಕವಾಗಿ ತೋರಿ ಆತನ ಮನಸ್ಸು ಖಿನ್ನವಾಯಿತು. ಆತನು ಹೆಂಡತಿಯನ್ನು ಕುರಿತು—

ಖುಸ್ರು—ಪ್ಯಾರೀ, ನಿನ್ನಮಾತು ನಿಜವಿರುವದು. ದೈವದಲ್ಲಿದ್ದದ್ದನ್ನು ತಪ್ಪಿಸುವ ಸಾಮರ್ಥ್ಯವು ನನ್ನಲ್ಲಿರುವದಿಲ್ಲ. ಆದ್ಧರಿಂದ ನನ್ನ ದೈವಕ್ಕನುಸ ರಿಸಿ ಬಂದದ್ದನ್ನು ಉಣ್ಣಲೇಬೇಕು.

ಪ್ಯಾರಿ—ನಾಥ, ತಾವು ಆಡುವ ಮಾತು ಸತ್ಯವಿದ್ದರೂ ಅದಕ್ಕಾಗಿ ತಾವು ಇಷ್ಟು ಖಿನ್ನರಾಗುವ ಕಾರಣವಿಲ್ಲವು; ಯಾಕಂದರೆ ನಮ್ಮ ದೈವವು ಸದ್ಯಕ್ಕೆ ಪ್ರತಿಕೂಲವಾಗಿದ್ದರೂ, ಮುಂದೆಯೂ ಅದು ಹಾಗೆಯೇ ಇರುವ ದೆಂದು ಯಾಕೆ ತರ್ಕಿಸಬೇಕು? ಮನುಷ್ಯನ ಆಯುಷ್ಯದಲ್ಲಿ ಕೇವಲ ಸುಖ ವಾಗಲಿ, ಕೇವಲ ದುಃಖವಾಗಲಿ ಒದಗದೆ, ಸುಖ-ದುಃಖಗಳೆರಡೂ ಕಾಲ ಕ್ಕನುಸರಿಸಿ ಒದಗುತ್ತಿರುತ್ತವೆ. ಅದರಂತೆ ಸದ್ಯಕ್ಕೆ ನಾವು ದುಃಖದ ಸ್ಥಿತಿ ಯಲ್ಲಿರುತ್ತಿದ್ದರೂ ಮುಂದೆ ನಮಗೆ ಸುಖದ ಸ್ಥಿತಿಯು ಉಂಟಾಗಬಹುದು; ಆದ್ದರಿಂದ ತಾವು ಉದಾಸೀನರಾಗಿ ಚಿಂತೆಯಿಂದ ಕಾಲಹರಣ ಮಾಡದೆ, ಉತ್ಸಾಹಶಾಲಿಗಳಾಗಿ ಉದ್ಯೋಗಮಾಡತಕ್ಕದ್ದು.

ಖುಸ್ರುವು ಹೆಂಡತಿಯ ಈ ಸಮಂಜಸ ಮಾತುಗಳಿಗಾಗಿ ಆಕೆಯನ್ನು ಹೊಗಳಿದನು. ಹೊರಗಿನಿಂದ ಶಾಂತವಾಗಿಯೂ, ವೈಭವಶಾಲಿಯಾ ಗಿಯೂ, ವಿಲಾಸಿಯಾಗಿಯೂ ತೋರುತ್ತಿದ್ದ ಮೊಗಲ ಸಿಂಹಾಸನವು ಅಂತ ರಂಗದಲ್ಲಿ ಹೇಗಿರುತ್ತದೆಂಬದರ ಕಲ್ಪನೆಯು ಆತನಿಗೆ ಚನ್ನಾಗಿ ಇರದಿದ್ದರೂ, ಸಿಂಹಾಸನ ಪ್ರಾಪ್ತಿಯ ಪ್ರಸಂಗದಲ್ಲಿ ರಾಜಕುಲದ ರಕ್ತಪಾತವಾಗದೆ ಹೋಗಲಿಕ್ಕಿಲ್ಲೆಂಬ ಸಂಗತಿಯು ಆತನ ಮನಸ್ಸಿನಲ್ಲಿ ಕಟಿಯುತ್ತಿತ್ತು.

ತಂದೆಯ ಅಪ್ರೀತಿಗೆ ಪಾತ್ರನಾಗಿರುವ ತನ್ನ ಗತಿಯು ಏನಾಗುವದೋ ಎಂಬ ಚಿಂತೆಯೂ ಆತನನ್ನು ಬಾಧಿಸುತ್ತಿತ್ತು; ಆದರೆ ಪ್ಯಾರಿಬಾನುವಿನ ದೈವ ವಾದದ ಉಪದೇಶದಂತೆ, ತನಗೆ ಇನ್ನು ಅನುಕೂಲ ಕಾಲವು ಒದಗಿದರೂ ಒದಗಬಹುದೆಂದು ತಿಳಿದು ಆತನು ಸಮಾಧಾನಪಟ್ಟನು. ತನ್ನ ಉದಾಸೀನ ವೃತ್ತಿಯನ್ನು ದೂರಮಾಡಿ ಬಹು ಮಟ್ಟಿಗೆ ತನ್ನನ್ನು ಸಮಾಧಾನಗೊಳಿಸಿದ ಚಾತುರ್ಯಕ್ಕಾಗಿ ಆತನು ತನ್ನ ಹೆಂಡತಿಯನ್ನು ಕುರಿತು— "ಪ್ರಿಯೇ, ನಿನ್ನ ಯೋಗ್ಯತೆಯು ಸಾಮಾನ್ಯವಾದದ್ದಲ್ಲ. ನನ್ನ ಪರಿತಪ್ತ ಹೃದಯವನ್ನು ಕ್ಷಣದಲ್ಲಿ ನೀನು ಶಾಂತಮಾಡಿದೆ. ನಿಜವಾದ ನನ್ನ ಹಿತ ಕರ್ತೃಗಳೆಂದರೆ ನೀವಿಬ್ಬರು. ಒಬ್ಬರು ನನ್ನ ಹಡೆದ ತಾಯಿಯಾದಮಾಸಾಹೇಬರು; ಇನ್ನೊಬ್ಬಳು ನನ್ನ ಪ್ರಿಯತಮೆಯಾದ ನೀನು. ನನ್ನ ಮೇಲಿನ ನಿನ್ನ ಉತ್ಕಟ ಪ್ರೇಮದಿಂದಲೇ ದುಃಖಮಯವಾದ ನನ್ನ ಬಾಳು ಸುಖಮಯವಾಗುತ್ತಿರುವದು! ಪ್ರಿಯೇ, ನೀನೇ ಹೇಳು, ನಾನು ಯಾವಾಗಲೂ ಸಮಾಧಾನದಿಂದಿರಬೇಕೆಂತಲೂ, ಉತ್ಸಾಹಿಯಾಗಿರಬೇಕೆಂತಲೂ ನಿನ್ನಹಾಗೆ ಮನಮುಟ್ಟಿ ಯಾರು ಯತ್ನಿಸುವರು? ಪತಿ-ಪತ್ನಿಯರ ಪರಸ್ಪರ ಹಿತ ಸಂಬಂಧವು ಪರಸ್ಪರರನ್ನವಲಂಬಿಸಿಯಿರುತ್ತಿದ್ದರೂ, ನಿನ್ನ ಹಾಗೆ ಸ್ವಹಿತವನ್ನು ಮರೆತು ನಿರಪೇಕ್ಷ ಬುದ್ಧಿಯಿಂದ ಪತಿಯ ಹಿತವನ್ನು ಚಿಂತಿಸುವ ಸತಿಯರು ಅತಿ ವಿರಲವೆಂದು ನಿಃಸಂಶಯದಿಂದ ಹೇಳಬಹುದು. ಇರಲಿ, ಪ್ರಿಯೇ, ನಿನ್ನ ಸಹವಾಸದಲ್ಲಿ ನಾನು ಎಂಥ ದುಃಖವನ್ನಾದರೂ ಮರೆತು ಸಮಾಧಾನದಿಂದ ಇರುವೆನು. ಎಂದು ಹೆಂಡತಿಯನ್ನು ಶ್ಲಾಘಿಸಿ, ಆಕೆಯ ಸುಖಕಾರಕ ಸಹವಾಸದಲ್ಲಿ ಸಮಾಧಾನದಿಂದ ಕಾಲಗಣ ಮಾಡ ಹತ್ತಿದನು.



## ೭ ನೆಯ ಪ್ರಕರಣ

# ನಿ ರಾ ಶೆ .

ಪ್ರಿಯವಾಚಕರೇ, ಪತಿಭಕ್ತಿಪರಾಯಣಳಾನ ಸಾಧ್ವೀ ಪ್ಯಾರಿಬಾನುವಿನೊಡನೆ ಸುಖಸಮಾಧಾನದಿಂದ ಕಾಲಹರಣ ಮಾಡುತ್ತಿರುವ ಖುಸ್ರುವನ್ನು ಅನಕಾ ಅಲ್ಲಿ ಬಿಟ್ಟು, ಮಂದಾಕಿನಿಯ ಸಮಾಚಾರವನ್ನು ತಕ್ಕೊಳ್ಳುವಾ ನಡೆಯಿರಿ. ಆ ಪತಿವ್ರತೆಯು ಬಹು ಪ್ರಯಾಸದಿಂದ ಖುಸ್ರುವಿನ ಉಂಗುರವನ್ನು ಸಂಪಾದಿಸಿದ ಬಳಿಕ ಏನು ಮಾಡಿದಳೆಂಬದನ್ನು ಅರಿತುಕೊಳ್ಳುವ ಆತುರತೆಯು ನಿಮ್ಮಲ್ಲಿ ಉಂಟಾಗಿರಬಹುದು; ಆದ್ದರಿಂದ ಮಂದಾಕಿನಿಯ ಪೂರ್ವ ವೃತ್ತದೊಡನೆ ಅದನ್ನು ಈಗ ಹೇಳುವೆವು. ಮಂದಾಕಿನಿಯು ಒಬ್ಬ ಶೂರ ರಜಪೂತ ಸರದಾರನ ಮಗಳು. ಚಿಕ್ಕಂದಿನಲ್ಲಿ ಆಕೆಯ ತಾಯಿಯು ತೀರಿಕೊಂಡದ್ದರಿಂದ ಆಕೆಯ ತಂದೆಯೇ ಆಕೆಯನ್ನು ಮಮತೆಯಿಂದ ಬಹು ಕಷ್ಟಪಟ್ಟು ಸಂರಕ್ಷಣ ಮಾಡಿದನು; ಆದರೆ ಸ್ವಲ್ಪ ದಿನಗಳ ಹಿಂದೆ ಆಕೆಯ ತಂದೆಯೂ ತೀರಿಕೊಂಡದ್ದರಿಂದ ಮಂದಾಕಿನಿಯು ಕೇವಲ ಅನಾಥಳಾದಳು. ಹೀಗೆ ಆಕೆಯ ತಂದೆಯಂತು ತೀರಿಕೊಂಡನು, ಪತಿಯು ಕಾರಾಗೃಹವಾಸಿಯಾದನು. ಈ ಸ್ಥಿತಿಯಲ್ಲಿ ಕೇವಲ ಅನಾಥಳಾದ ಮಂದಾಕಿನಿಯು ಬಹು ಕಷ್ಟದಿಂದ ಕಾಲಹರಣ ಮಾಡಹತ್ತಿದ್ದರೆ ಆಶ್ಚರ್ಯವಲ್ಲ. ಮನುಷ್ಯನು ಎಂಥ ಸಜ್ಜನನೇ ಇರಲಿ, ಎಂಥ ದುರ್ಜನನೇ ಇರಲಿ ಏನಿಲ್ಲೆಂದರೂ ಅವನಿಗೆ ಒಬ್ಬನಾದರೂ ಶತ್ರುವೂ, ಒಬ್ಬನಾದರೂ ಮಿತ್ರನೂ ಇದ್ದೇ ಇರುವರು. ಅದರಂತೆ ದುರ್ಜಯಸಿಂಹನಿಗೆ ಲಜಪತ ಸಿಂಹನೆಂಬವನೊಬ್ಬ ರಜಪೂತ ಸರದಾರನು ಶತ್ರುವಾಗಿದ್ದನು. ಮಂದಾಕಿನಿಯ ತಂದೆಯು ಮಂದಾಕಿನಿಯನ್ನು ಲಜಪತ ಸಿಂಹನಿಗೆ ಹೀನ ಕುಲದವನೆಂದು ತಿಳಿದು ಕೊಡದೆ, ದುರ್ಜಯಸಿಂಹನಿಗೆ ಕೊಟ್ಟದ್ದೇ ಈ ದ್ವೇಷದ ಕಾರಣವು. ಲಜಪತನೂ ಮಾನಸಿಂಹನ ಸೇವಕರಲ್ಲಿಯೇ ಒಬ್ಬನಾಗಿದ್ದನು. ಮಂದಾಕಿನಿಗೆ ಒದಗಿದ ವಿಪತ್ತಿನ ಪ್ರಸಂಗದ ಲಾಭವನ್ನು

ಪಡೆಯಲು ಆ ದುಷ್ಟ ಲಜಪತನು ಹೊಂಚು ಹಾಕಿದ್ದನು. ಆತನ ಹೀನ ಕುಲಕ್ಕನುಸರಿಸಿ, ಆತನ ಹೃದಯವೂ ಕ್ಷುದ್ರವಾದದ್ದೇ ಇತ್ತು. ಮಂದಾಕಿನಿಯ ವಿಷಯವಾಗಿ ಆ ನೀಚನು ಅಚ್ಚ ರಜಪೂತರ ಶೀಲಕ್ಕೆ ವಿರುದ್ಧವಾಗಿ ಪಾಪವಾಸನೆಯನ್ನು ತಾಳಿದ್ದನು; ಆದರೆ ಮಂದಾಕಿನಿಯ ಉಜ್ವಲ ಪಾತಿವ್ರತ್ಯದ ಮುಂದೆ ಅವನ ಆಟ ನಡೆಯುವ ಹಾಗಿದ್ದಿಲ್ಲ. ಆ ದುಷ್ಟನು ಮಂದಾಕಿನಿಯನ್ನು ಸಂಕಟಕ್ಕೆ ಗುರಿಮಾಡಿ, ಆಕೆಯನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಇಚ್ಛಿಸಿ ಆ ಸಾಧ್ವಿಯ ಅಹಿತವನ್ನು ಬಗೆ ಬಗೆಯಾಗಿ ಮಾಡಹತ್ತಿದನು. ಮಾನಸಿಂಹನಿಂದ ತನಗೆ ಗಡಿದಾಟಿಸಿದ ಶಿಕ್ಷೆಯಾಗಿದ್ದರೂ ದುರ್ಜಯನು ಅಂಬರ ರಾಜಧಾನಿಯನ್ನು ಬಿಟ್ಟು ಹೋಗದೆ ಅಲ್ಲಿಯೇ ಗುಪ್ತ ಸ್ಥಳದಲ್ಲಿ ಇರುತ್ತಿದ್ದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ; ಆ ಗುಪ್ತ ಸ್ಥಳದ ಗೊತ್ತುಹಚ್ಚಿ ಲಜಪತನೇ ಅದನ್ನು ಮಾನಸಿಂಹನಿಗೆ ತಿಳಿಸಿದ್ದರಿಂದ, ಮಾನಸಿಂಹನು ತನ್ನ ಆಜ್ಞಾಭಂಗಕ್ಕಾಗಿ ಸಿಟ್ಟಾಗಿ ದುರ್ಜಯನನ್ನು ರತನಗಡದಲ್ಲಿ ಸೆರೆಯಲ್ಲಿಟ್ಟಿದ್ದನು. ರತನಗಡವು ಅಂಬರ ರಾಜಧಾನಿಯಿಂದ ೨|೩ ಹರದಾರಿಯಾಗಬಹುದೆಂದು ಹಿಂದೆಯೊಮ್ಮೆ ಹೇಳಿದೆ. ಇಂಥ ಹಲವು ತೊಂದರೆಗಳಿಗೆ ಮಂದಾಕಿನಿಯನ್ನು ಈಡು ಮಾಡಿದರೂ, ಲಜಪತನ ದುಷ್ಟವಾಸನೆಯು ಪೂರ್ಣವಾಗಲಿಲ್ಲ. ಮಂದಾಕಿನಿಯ ಯೋಗ್ಯತೆಯನ್ನು ವಾಚಕರಿಗೆ ತಿಳಿಸಲವಶ್ಯವಿಲ್ಲ. ಲಜಪತನಂಥ ಕ್ಷುದ್ರ ಪ್ರಾಣಿಯ ಗಂಟಲಲ್ಲಿ ಇಳಿಯತಕ್ಕಂಥ ಹೆಣ್ಣುಮಗಳು ಮಂದಾಕಿನಿಯಲ್ಲವೆಂಬ ಮಾತು ವಾಚಕರಿಗೆ ಗೊತ್ತಿರಬಹುದು. ತನ್ನ ಪತಿಯ ಕಾರಾಗೃಹವಾಸಕ್ಕೆ ಲಜಪತನೇ ಕಾರಣನಾದನೆಂಬ ಮಾತು ಮಂದಾಕಿನಿಗೆ ಗೊತ್ತಿದ್ದದ್ದರಿಂದ, ಲಜಪತನು ಮಂದಾಕಿನಿಯ ತೀವ್ರವಾದ ಕೋಪಕ್ಕೆ ಪಾತ್ರನಾಗಿದ್ದನು. ಈ ಸ್ಥಿತಿಯಲ್ಲಿ ಪತಿ ಪ್ರಾಣಳಾದ ಮಂದಾಕಿನಿಯು ತನ್ನ ಜೀವದ ಹಂಗು ಇಲ್ಲದೆ, ಪತಿಯನ್ನು ಬಂಧಮುಕ್ತಮಾಡುವ ಆವೇಶದಿಂದ ರತನಗಡಕ್ಕೆ ಹೋದಳು. ಆ ಸಾಹಸಿಯಾದ ಸತಿಗೆ ಖುಸ್ರುವಿನ ಉಂಗರ ಸಿಕ್ಕದ್ದೊಂದು, ದೊಡ್ಡ ಬೆಂಬಲವೇ ದೊರೆತಂತೆ ಆಗಿತ್ತು.

ಹೀಗೆ ಮಂದಾಕಿನಿಯು ಅತ್ಯಂತ ಸಾಹಸದಿಂದ ರತನಗಡದ ಸಿಂಹದ್ವಾರಕ್ಕೆ ಹೋಗಿ ದ್ವಾರರಕ್ಷಕನಿಗೆ ಉಂಗುರವನ್ನು ತೋರಿಸಲು,

ಆತನು ಸನ್ಮಾನಪೂರ್ವಕವಾಗಿ ಆಕೆಯನ್ನು ದುರ್ಗದೊಳಿಗೆ ಬಿಟ್ಟನು; ಆದರೆ ತನ್ನ ಪತಿ—ದುರ್ಜಯಸಿಂಹನಿರುವ ಕೋಣೆಯು ಆಕೆಗೆ ಹೇಗೆ ಗೊತ್ತಾಗಬೇಕು? ಆಕೆಯು ಹುಚ್ಚು ಹಿಡಿದವರಂತೆ ಅತ್ತಿತ್ತ ಅಲೆದಾಡು ತ್ತಿರಲು, ಒಬ್ಬ ವೃದ್ಧ ಸೈನಿಕನು ಆಕೆಯ ಕಣ್ಣಿಗೆ ಬಿದ್ದನು. ಕೂಡಲೆ ಆಕೆಯು ತನ್ನ ಬಳಿಯಲ್ಲಿಯ ಮುದ್ರಿಕೆಯನ್ನು ಆತನಿಗೆ ತೋರಿಸಿ—"ದುರ್ಜ ಯಸಿಂಹನನ್ನು ಸೆರೆಯಲ್ಲಿಟ್ಟಿರುವ ಕೋಣೆಯು ಎತ್ತಕಡೆಗಿರುವದು" ಎಂದು ಪ್ರಶ್ನೆ ಮಾಡಿದಳು. ಕರ್ಮ ಧರ್ಮ ಸಂಯೋಗದಿಂದ ಆ ವೃದ್ಧ ವ್ಯಕ್ತಿಯು ಸೆರೆಮನೆಯ ಕಾವಲುಗಾರರ ಮುಖ್ಯನೇ ಆಗಿದ್ದನು. ಆತನ ಹೆಸರು ಕ್ಷೇಮಸಿಂಗ. ಕ್ಷೇಮಸಿಂಗನಿಗೆ ಆ ತಾಪಸಿಯಾದ ತರುಣ ರಮಣಿಯನ್ನು ನೋಡಿ ಸಮಾಧಾನವಾದದ್ದಲ್ಲದೆ, ಆಶ್ಚರ್ಯವೂ ಆಯಿತು; ಯಾಕಂದರೆ ಇಂಥ ಅತುಲನೀಯ ಸುಂದರ ಸ್ತ್ರೀಯು ತಾಪಸಿಯ ವೇಷ ತಾಳುವದು ಅಪೂರ್ವವೇ ಆಗಿತ್ತು. ಕ್ಷೇಮಸಿಂಗನು ಸ್ವಲ್ಪ ಹೊತ್ತು ಮೌನದಿಂದ ಆಲೋಚಿಸಿ ಆಕೆಯನ್ನು ಕುರಿತು—"ತಂಗೀ, ನೀನು ಯಾರು? ಎಲ್ಲಿಂದ ಬಂದೆ?" ಎಂದು ಪ್ರಶ್ನಮಾಡಿದನು. ಆಗ ಮಂದಾಕಿನಿಯು ಮೊದ ಮೊದಲಿಗೆ ಸ್ವಲ್ಪ ಅಂಜಿದಳು; ಆದರೆ ಕೂಡಲೆ ಆ ದಿಟ್ಟೆಯು ತನ್ನ ಭಾವೀ ಸುಖವನ್ನು ಲಕ್ಷಿಸಿ ಕ್ಷೇಮಸಿಂಗನನ್ನು ಕುರಿತು—"ನಾನು ರಾಜಾ ಮಾನ ಸಿಂಹರ ಮಹಾಲಿನೊಳಗಿನವಳೊಬ್ಬ ದಾಸಿಯಿರುವೆನು. ಇಲ್ಲಿ ಸೆರೆಯಲ್ಲಿ ರುವ ದುರ್ಜಯಸಿಂಹನು ನನ್ನ ಸನಿಯದ ಹತ್ತಗಡೆಯವನಾದದ್ದರಿಂದ, ಮಹಾರಾಜರ ಅಪ್ಪಣೆಯನ್ನು ಪಡೆದು ಆತನನ್ನು ಕಾಣುವದಕ್ಕಾಗಿ ನಾನು ಬಂದಿರುವೆನು" ಎಂದು ಹೇಳಿದಳು. ಆಗ ಪುನಃ ಕ್ಷೇಮಸಿಂಗನು ಆಕೆ ಯನ್ನು ಕುರಿತು—"ಯಾಕೆ? ನೀನೇಕೆ ಆತನನ್ನು ಕಾಣಬೇಕಾಗಿದೆ?" ಎಂದು ಪ್ರಶ್ನಮಾಡಿದನು. ಅದಕ್ಕೆ ಮಂದಾಕಿನಿಯು ಕೂಡಲೆ—"ದುರ್ಜ ಯಸಿಂಹನಿಗೆ ಮಹಾರಾಜರ ಒಂದು ಗುಪ್ತ ಹುಕುಮನ್ನು ಹೇಳುವ ಬಿಗಿ ಯಾದ ಕೆಲಸವನ್ನು ನಾನು ಮಾಡಬೇಕಾಗಿದೆ" ಎಂದು ಉತ್ತರ ಕೊಟ್ಟಳು. ಅದನ್ನು ಕೇಳಿದ ಕೂಡಲೆ ಕ್ಷೇಮಸಿಂಗನು—"ನಿಮಗೆ ದುರ್ಜಯನಿರುವ ಕೋಣೆಯನ್ನು ತೋರಿಸುವೆನು ಬಾ" ಎಂದು ಹೇಳಿ ಮಂದಾಕಿನಿಯನ್ನು ಕರಕೊಂಡು ಹೋಗಿ ದುರ್ಜಯನಿರುವ ಕೋಣೆಗೆ ಆಕೆಯನ್ನು ಮುಟ್ಟಿಸಿ,

ಅಲ್ಲಿಯ ಕಾವಲುಗಾರನಿಗೆ ಸಂಕೇತದಿಂದ ಅಪ್ಪಣೆ ಮಾಡುವದನ್ನು ಮಾಡಿ ತಾನು ಹೊರಟುಹೋದನು.

ಕಾವಲುಗಾರನು ಕೋಣೆಯ ಬಾಗಿಲವನ್ನು ತೆರೆದ ಕೂಡಲೆ ಮಂದಾಕಿನಿಯು ಆನಂದದಿಂದ ಕೋಣೆಯನ್ನು ಹೊಕ್ಕಳು. ತನ್ನ ಪತಿಯ ಮುಖಾವಲೋಕನವನ್ನು ಯಾವಾಗ ಮಾಡೇನೆಂಬ ಆತುರತೆಯಲ್ಲಿ ಅನ್ಯ ವಿಚಾರಗಳಾವವೂ ಆಕೆಯ ಮನಸ್ಸಿನಲ್ಲಿ ಬರಲಿಲ್ಲವು. ನೆಟ್ಟಗೆ ಆಕೆಯು ಪತಿಯು ಮಲಗಿದಲ್ಲಿಗೆ ಹೋದಳು. ಆಗ ಸಣ್ಣದೊಂದು ಹಾಸಿಗೆಯ ಮೇಲೆ ಗೋಡೆಯ ಕಡೆಗೆ ಮೋರೆಮಾಡಿ ಮಲಗಿದ್ದ ದುರ್ಜಯಸಿಂಹನಿಗೆ ಗಾಢವಾದ ನಿದ್ರೆಯು ಹತ್ತಿತ್ತು. ಆಗ ಪತಿದರ್ಶನೋತ್ಸುಕಳಾದ ಆ ತರುಣಿಯು ಅತ್ತಿತ್ತ ನೋಡಿ ಪತಿಯನ್ನು ಮೈದಡವಿ ಎಬ್ಬಿಸಿದಳು. ಹೀಗೆ ಅಕಸ್ಮಾತ್ ಎಬ್ಬಿಸಿದವರಾರೆಂದು ನಿದ್ರೆಗಣ್ಣಿನ ದುರ್ಜಯನು ಸಿಟ್ಟಿನಿಂದ ನೋಡಲು, ತಾಪಸ ವೇಷದ ಮಂದಾಕಿನಿಯ ಗುರುತು ಒಮ್ಮೆಲೆ ಆತನಿಗೆ ಹತ್ತಲೊಲ್ಲದು. ಇಂಥ ಸುಂದರಾಕಾರದ ತಾಪಸ ವೇಷದ ತರುಣಿಯು ಇಲ್ಲಿಯಾಕೆಂದು ದುರ್ಜಯನು ಆಶ್ಚರ್ಯದಿಂದ ಮಂದಾಕಿನಿಯನ್ನು ನೋಡತೊಡಗಿದನು. ಆಗ ಆ ತರುಣಿಯು ಮಂದಹಾಸದಿಂದ—"ನಾಥ, ನನ್ನ ಗುರುತು ಹತ್ತಲೊಲ್ಲದೇನು?" ಎಂದು ಪ್ರಶ್ನೆ ಮಾಡಲು, ದನಿಯ ಗುರುತು ಹಿಡಿದು ಮತ್ತಿಷ್ಟು ಆಶ್ಚರ್ಯಪಟ್ಟು, ದುರ್ಜಯನು ಅತ್ಯಾತುರದಿಂದ—

ದುರ್ಜಯ—ಸುಂದರೀ, ನೀನು ಇಲ್ಲಿಗೆ ಹೇಗೆ ಬಂದೆ? ಇಲ್ಲಿ ನಿನ್ನ ಕೆಲಸವಾದರೂ ಏನು?

ಮಂದಾಕಿನಿ—(ಮೂಗಿನ ಮೇಲೆ ಬೆರಳಿಟ್ಟುಕೊಂಡು)ಪ್ರಿಯಾ, ಮೆಲ್ಲನೆ ಮಾತಾಡಬೇಕು. ಕಾವಲುಗಾರನು ಬಾಗಿಲಲ್ಲಿಯೇ ನಿಂತಿರುವನು. ನಾನು ನಿಮ್ಮನ್ನು ಬಿಡಿಸುವದಕ್ಕಾಗಿ ಇಲ್ಲಿಗೆ ಬಂದಿರುವೆನು.

ದುರ್ಜಯ—ನೀನು ನನ್ನನ್ನು ಬಿಡಿಸುವ ಬಗೆಹೇಗೆ?

ಮಂದಾಕಿನಿ—(ಉಂಗುರವನ್ನು ಮುಂದೆಮಾಡಿ)ಇದು ನೋಡಿರಿ.

ದುರ್ಜಯ—(ಆಶ್ಚರ್ಯದಿಂದ) ಎಲ! ಖುಸ್ರುವಿನ ಹೆಸರಿನ ಈ ಉಂಗುರವು ನಿನ್ನ ಬಳಿಯಲ್ಲಿ ಹೇಗೆ ಬಂದಿತು?

ಮಂದಾಕಿನಿ—ಶಹಾಜಾದಾನೇ ನನಗೆ ಇದನ್ನು ಕೊಟ್ಟನು.

ದುರ್ಜಯ—ಅದೇಕೆ ಕೊಟ್ಟನು.

ಮಂದಾಕಿನಿ—ನಿಮ್ಮ ಬಿಡುಗಡೆಯಾಗಬೇಕೆಂದು.

ದುರ್ಜಯ—ಮಾನಸಿಂಹರ ರುಜುವಿನ ಆಜ್ಞಾಪತ್ರವೆಲ್ಲಿದೆ?

ಮಂದಾಕಿನಿ—ಈ ಉಂಗುರವೇ ನಿಮ್ಮ ಬಿಡುಗಡೆಯಾಗುವ ಸಾಧನವು. ಬೇರೆ ಆಜ್ಞಾಪತ್ರದ ಹಾದಿಯು ನೋಡುವ ಕಾರಣವಿಲ್ಲ.

ದುರ್ಜಯ—ಮಂದಾಕಿನೀ, ಅದೇನೆ ಇರಲಿ. ಈ ಉಂಗುರವನ್ನು ಖುಸ್ರುವು ತಾನಾಗಿ ನಿನಗೆ ಕೊಟ್ಟನೆಂಬ ಮಾತನ್ನು ನಾನು ನಂಬಲಾರೆನು. ನನ್ನ ಶತ್ರುವಾದ ಖುಸ್ರುವು ನನ್ನ ಬಿಡುಗಡೆಗಾಗಿ ತನ್ನ ಈ ಉಂಗುರವ ಕೊಟ್ಟು ತನ್ನ ಮಾವನಾದ ಮಾನಸಿಂಹನ ರೋಷಕ್ಕೆ ಗುರಿಯಾಗುವ ಸಾಹಸವನ್ನು ಮಾಡಬಹುದೇ? ನನ್ನ ಸೇಡು ತೀರಿಸಿಕೊಳ್ಳುವ ಹಟವನ್ನು ಖುಸ್ರುವು ಚನ್ನಾಗಿ ಅರಿತಿರುವನು. ತನ್ನ ತಂದೆಯನ್ನು ಕೊಲ್ಲಿಸಲು ಮಾಡಿದ ಯತ್ನವನ್ನು ನಾನು ಆತನ ತಂದೆಯಾದ ಸೇಲೀಮನ ಮುಂದೆ ಹೇಳುವೆನೆಂಬ ಭಯವು ಖುಸ್ರುವಿಗೆ ಪೂರಾ ಇರುತ್ತದೆ. ಇದೊಂದೇ ಮಾತನ್ನು ಸಪ್ರಮಾಣವಾಗಿ ನಾನು ಸೇಲೀಮನಿಗೆ ಸಿದ್ಧ ಮಾಡಿ ಕೊಟ್ಟರೆ, ಸೇಲೀಮನು ನನ್ನ ನಂಬಿಗೆಯ ಪ್ರಭುವಾಗುವಲ್ಲಿ ಸಂಶಯವಿಲ್ಲ. ಒಟ್ಟಿಗೆ ಆ ಖುಸ್ರುವನ್ನು ನಾಶಮಾಡಲು ನಾನು ಮಾಡಿದ ಪ್ರತಿಜ್ಞೆಯನ್ನು ಖುಸ್ರುವು ಮರೆಯುವಂತೆ ಇಲ್ಲದ್ದರಿಂದ, ಆ ತರುಣ ಶಹಾಜಾದಾನು ನನ್ನ ಬಿಡುಗಡೆಗಾಗಿ ಹೀಗೆ ಉಂಗುರುವನ್ನು ತಾನಾಗಿ ಎಂದೂ ಕೊಡಲಾರನು; ಆದ್ದರಿಂದ ನೀನು ಉಂಗುರವನ್ನು ಹೇಗೆ ದೊರಕಿಸಿದೆಯೆಂಬದನ್ನು ನಿಜವಾಗಿ ಹೇಳುವತನಕ ನಿನ್ನ ಯಾವ ಮಾತನ್ನೂ ನಾನು ಕೇಳಿಕೊಳ್ಳಲಾರೆನು.

ದುರ್ಜಯಸಿಂಹನ ಈ ನಿಶ್ಚಯವನ್ನು ನೋಡಿ ಮಂದಾಕಿನಿಯು ವಿಚಾರಮಗ್ನಳಾದಳು. ಈ ಪ್ರಸಂಗದಲ್ಲಿ ತನ್ನ ಪತಿಯನ್ನು ವಂಚಿಸುವದು ಶಕ್ಯವಲ್ಲವೆಂತಲೂ, ವಂಚಿಸುವದು ಧರ್ಮವೂ ಅಲ್ಲವೆಂತಲೂ ತಿಳಿದು, ಉಂಗುರವನ್ನು ಸಂಪಾದಿಸುವಾಗ ನಡೆದ ಸಂಗತಿಯನ್ನೆಲ್ಲ ಆಕೆಯು ದುರ್ಜಯನ ಮುಂದೆ ಹೇಳಿದಳು. ಅದನ್ನೆಲ್ಲ ದುರ್ಜಯಸಿಂಹನು ಶಾಂತ ಮನ

ಸ್ಸಿನಿಂದ ಕೇಳಿಕೊಂಡು, ಗಂಭೀರ ಸ್ವರದಿಂದ ಹೆಂಡತಿಯನ್ನು ಕುರಿತು— "ಪ್ರಿಯೇ, ಈ ಕ್ಷಣಭಂಗುರ ದೇಹದ ಸಲುವಾಗಿ ನೀನೇಕೆ ಅವನ ಬಳಿಯಲ್ಲಿ ಬಿಕ್ಷೆ ಬೇಡುವದಕ್ಕೆ ಹೋದೆ? ನಿನ್ನಂಥ ತೇಜಸ್ವಿನಿಯಾದ ಸ್ತ್ರೀಗೆ ಈ ಬಗೆಯ ಹೀನತನವನ್ನು ಸ್ವೀಕರಿಸುವ ಹಾಗೆ ಯಾಕಾಯಿತು? ಪ್ರಿಯೇ, ಖುಸ್ರುವು ನನ್ನನ್ನು ಅವಮಾನಗೊಳಿಸಿದ ಶತ್ರುವು; ಆದರಂತೆ, ಮಾನಸಿಂಹ ಮಹಾರಾಜರು ನ್ಯಾಯಾನ್ಯಾಯಗಳನ್ನು ವಿಚಾರಿಸದೆ ನನ್ನನ್ನು ಪ್ರತಿಬಂಧದಲ್ಲಿರಿಸಿದ ಪ್ರಭುಗಳು; ಆದ್ದರಿಂದ ಇವರಿಬ್ಬರಲ್ಲಿ ನಾನು ಯಾರನ್ನೂ ಪ್ರಾರ್ಥಿಸಲಿಕ್ಕಿಲ್ಲ. ಈ ಸ್ವಾಭಿಮಾನಿಯಾದ ದುರ್ಜಯನಿಗೆ ಯಾರ ದಯೆಯು ಅವಶ್ಯಕತೆಯೂ ಇರುವದಿಲ್ಲ. ಮಂದಾಕಿನೀ, ನನ್ನ ಸಲುವಾಗಿ ನೀನು ವ್ಯರ್ಥವಾಗಿ ಇಷ್ಟು ಕಷ್ಟಪಟ್ಟು ಯಾಕೆ ಹೀನವೃತ್ತಿಯನ್ನು ತಾಳಿದೆ?" ಎಂದು ಕೇಳಲು, ಪತಿಯು ಈ ಮಾತುಗಳನ್ನು ಕೇಳಿ ಮಂದಾಕಿನಿಯು ಅಸಮಾಧಾನಪಟ್ಟು ಸದ್ಗದಿತ ಸ್ವರದಿಂದ ಪತಿಯನ್ನು ಕುರಿತು—ನಾಥನೇ, ನಾನು ಹೀಗೆ ಯಾಕೆ ಮಾಡಿದೆನೆಂಬದನ್ನು ನನ್ನ ಬಾಯಿಂದಲೇ ಕೇಳಬೇಕೆಂದು ತಾವು ಇಚ್ಛಿಸುತ್ತಿರುವಿರೋ? ತಮ್ಮ ಜೀವನ ಸರ್ವಸ್ವಕ್ಕಾಗಿ ನಾನು ಬೇಕಾದದ್ದು ಮಾಡೇನು! ನನ್ನ ಶ್ರಿಷ್ಮತ್ವ-ಕನಿಷ್ಮತ್ವಗಳು, ಇಷ್ಟ-ಅನಿಷ್ಟಗಳು, ಮಾನ-ಅಪಮಾನಗಳು, ಪುಣ್ಯ-ಪಾಪಗಳು ಇವೆಲ್ಲ ತಮ್ಮನ್ನೇ ಅವಲಂಬಿಸಿ ಇರುವವು. ಪ್ರಿಯಕರಾ, ಇನ್ನು ನೀವು ವಿಲಂಬ ಮಾಡಬೇಡಿರಿ. ನಾನು ಇಲ್ಲಿಗೆ ಬಂದು ಬಹಳ ಹೊತ್ತಾಯಿತು. ಈಗ ಕಳೆದು ಹೋಗುತ್ತಿರುವ ಒಂದೊಂದು ಕ್ಷಣವು ಬಹಳ ಬೆಲೆಯುಳ್ಳದ್ದಾಗಿರುವದು. ನಿಮ್ಮ ಎಲ್ಲ ಉಡಿಗೆ-ತೊಡಿಗೆಗಳನ್ನು ನನಗೆ ಕೊಟ್ಟು, ನನ್ನ ಈ ಕಫನಿ ಮೊದಲಾದವುಗಳನ್ನು ನೀವು ಧರಿಸಿರಿ. ಈಗ ಸಂಧ್ಯಾಕಾಲವಾಗಿರುವದರಿಂದ ನಾಲ್ಕೂ ಕಡೆಗೆ ಕಗ್ಗತ್ತಲೆಯು ಮುಸುಕತೊಡಗಿದೆ. ಈ ಕತ್ತಲೆಯಲ್ಲಿ ನಿಮ್ಮನ್ನು ಯಾರೂ ಗುರುತಿಸಲಿಕ್ಕಿಲ್ಲ. ಕಾವಲುಗಾರರಿಗೆ ಈ ಉಂಗುರವನ್ನು ತೋರಿಸಿದರೆ, ಕೂಡಲೆ ಅವರು ಬಾಗಿಲು ತೆರೆದು ಕೊಡುವರು; ಅದರಿಂದ ನೀವು ಯಾವ ತೊಂದರೆಯೂ ಇಲ್ಲದೆ ರತನಗಡದಿಂದ ಹೊರಬೀಳುವಿರಿ.

ತನ್ನ ಹೆಂಡತಿಯ ಈ ತ್ಯಾಗವನ್ನೂ, ಪ್ರೇಮಲ ಸ್ವಭಾವವನ್ನೂ

ನೋಡಿ ದುರ್ಜಯನು ಬಹಳ ಸಮಾಧಾನಪಟ್ಟನು; ಆದರೆ ಆ ಸಮಾಧಾನ ವನ್ನು ಆತನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಕಂಪಿತಸ್ವರದಿಂದ--ಪ್ರಿಯ ಮಂದಾಕಿನೀ, ಹೀಗೆ ನಾನು ಹೊರಟುಹೋದರೆ ನಿನ್ನ ಗತಿಯೇನಾ ದೀತು ?" ಎಂದು ಕೇಳಲು, ಮಂದಾಕಿನಿಯು—ನಾಥ, ನನ್ನ ಗತಿ ಯೇನು, ಅದು ಆಗುವದೇನು? ನಾನು ಆಗುವದನ್ನೆಲ್ಲ ಮೊದಲೇ ಗೊತ್ತು ಮಾಡಿ ಇಟ್ಟುಕೊಂಡಿರುವೆನು. ಇಂದು ರಾತ್ರಿ ನಮ್ಮ ಈ ಅದಲು ಬದ ಲಿನ ಸುದ್ದಿಯು ಯಾರಿಗೂ ಗೊತ್ತಾಗುವದಿಲ್ಲ, ನಾಳೆ ಬೇಳಗಾದ ಬಳಿಕ ಜನರಿಗೆ ಗೊತ್ತಾಗುವದು; ಆಮೇಲೆ ಏನಾದದ್ದನ್ನು ನಾನು ಅನುಭವಿಸು ವೆನು. ಪ್ರಿಯಕರಾ, ಮೊಗಲಸಿಂಹರವರು ಸ್ತ್ರೀಹತ್ಯ ಮಾಡುವದಿಲ್ಲವಾದ್ದ ರಿಂದ ನನ್ನ ಸಲುವಾಗಿ ತಾವು ಅಷ್ಟು ಚಿಂತೆಯನ್ನು ಮಾಡಬಾರದು. ಎಂದು ನುಡಿಯಲು, ದುರ್ಜಯಸಿಂಹನು ಕೆಲವು ಹೊತ್ತು ಸ್ತಬ್ಧನಾಗಿದ್ದು ವಿಚಾರ ಮಾಡಿ ಪುನಃ ಮಂದಾಕಿನಿಯನ್ನು ಕುರಿತು—ಹೃದಯೇಶ್ವರೀ, ನೀನು ಭ್ರಮೆಗೆ ಒಳಗಾಗಿರುವೆ. ವಿಧಾತೃವು ಈ ದುರ್ಜಯಸಿಂಹನ ಹೃದ ಯವನ್ನು ಎಷ್ಟು ಕಠೋರವಾಗಿ ಮಾಡಿರುವನೆಂಬದರ ವಿಚಾರವನ್ನು ನೀನು ಇನ್ನೂ ಮಾಡಿರುವದಿಲ್ಲವೆಂಬಂತೆ ತೋರುತ್ತದೆ. ನನ್ನ ಪರಿಚಯವು ನಿನಗೆ ಇನ್ನೂ ಚನ್ನಾಗಿ ಆಗಿರುವಂತೆ ತೋರುವದಿಲ್ಲ. ನನ್ನ ಶತ್ರುವಾದ ಖುಸ್ರುವು ದಯತೋರಿಸಿ ನಿನಗೆ ಉಂಗುರ ಕೊಡುವನು, ನಾನು ಸ್ತ್ರೀವೇಷ ವನ್ನು ಧರಿಸಿ ಉಂಗುರದ ಸಹಾಯದಿಂದ ಸೆರೆಮನೆಯಿಂದ ಪಾರಾಗಿ ಹೋಗ ಬೇಕೆಂದು ನೀನು ಹೇಳುತ್ತಿ; ಆದರೆ ಇಂಥ ಹೀನತರದ ಕೃತಿಯು ದುರ್ಜ ಯಸಿಂಹನಿಂದ ಎಂದೂ ಆಗಲಿಕ್ಕಿಲ್ಲ. ರಜಪೂತ ವೀರರು ಹೀಗೆ ಓಡಿ ಹೋಗಿ ತಮ್ಮ ಜೀವವನ್ನು ಉಳಿಸಿಕೊಳ್ಳುತ್ತಿರುವದಿಲ್ಲ; ಆದ್ದರಿಂದ ಪ್ರಿಯ ಮಂದಾಕಿನೀ, ನಿನ್ನ ಈ ಪ್ರಯತ್ನವೂ ವ್ಯರ್ಥವಾಯಿತೆಂದು ತಿಳಿ. ನಾನು ಏಕಲಿಂಗಜಿಯ ಆಣೆಮಾಡಿ ಹೇಳುವೆನೇನಂದರೆ—ಇಂಥ ಹೀನೋಪಾಯ ದಿಂದ ನಾನು ಎಂದೂ ಪಾರಾಗಿ ಹೋಗುವದಿಲ್ಲ; ಆದ್ದರಿಂದ ನೀನು ಹೋಗು; ಬಂದಹಾಗೆ ತಿರುಗಿ ಹೋಗು, ನನ್ನ ಮೇಲೆ ನಿನ್ನ ನಿಜವಾದ ಪ್ರೇಮವಿರುತ್ತಿದ್ದರೆ, ಹಾಗು ನಿಜವಾಗಿಯೇ ನೀನು ನನ್ನನ್ನು ಪೂಜ್ಯನೆಂದು ಭಾವಿಸುತ್ತಿದ್ದರೆ ಆವಸರ ಮಾಡಬೇಡ. ಆಗುವದನ್ನೆಲ್ಲ ನೋಡುತ್ತಲಿರು,

ಕೈಕಾಲುಗೆಡಬೇಡ. ನಾನು ನಿನ್ನವನಿರುವೆನು; ಮತ್ತು ಕಡೆಗೂ ನಿನ್ನವನಾಗಿಯೇ ಇರುವೆನು. ಪ್ರಾಚೀನ ಕರ್ಮದಿಂದ ಅಥವಾ ನನ್ನ ಮೂರ್ಖತನದಿಂದ ಒಂದು ಪಕ್ಷದಲ್ಲಿ ಈ ಲೋಕದೊಳಗೆ ನಿನ್ನ ಸಹವಾಸದ ಯೋಗವು ಒದಗಬಾರದಿದ್ದರೂ ಸ್ವರ್ಗಲೋಕವಿರುವದು, ಸ್ವರ್ಗಲೋಕದೊಳಗಿನ ನಂದನವನವಿರುವದು, ಅಲ್ಲಿ ಪೂರ್ಣ ಸ್ವಾತಂತ್ರ್ಯವಿರುವದು; ಅಲ್ಲಿ ನಮ್ಮ ವಿಲಾಸಕ್ಕೆ ಯಾರೂ ಪ್ರತಿಬಂಧ ಮಾಡಲಾರರು; ಆದರೆ ಪ್ರಿಯೇ, ಆ ಸ್ವರ್ಗಪ್ರಾಪ್ತಿಗಾಗಿ ಧರ್ಮದಂತೆ ಆಚರಿಸುವದನ್ನು ಮಾತ್ರ ನಾವು ತಪ್ಪೋಣ ಬೇಡ. ನಮ್ಮ ಕ್ಷತ್ರಿಯ ಧರ್ಮಾಚರಣೆಯಲ್ಲಿ ದೇಹಪಾತವಾದರೂ ಚಿಂತೆಯಿಲ್ಲ. ಧಾರ್ಮಿಕ ದೇಹಪಾತವು ಬೇಗನೆ ಆದಷ್ಟು ನಮಗೆ ಸ್ವರ್ಗಪ್ರಾಪ್ತಿಯ ಕಾಲವು ಸಮೀಪಿಸುವದೆಂದು ತಿಳಿ; ಆದ್ದರಿಂದ ಉಜ್ವಲ ಕ್ಷಾತ್ರಧರ್ಮಕ್ಕೆ ವಿರುದ್ಧವಾಗಿ ಈಗ ಕಳ್ಳತನದಿಂದ ಓಡಿ ಮಾತ್ರ ಹೋಗಲಾರೆನು. ರಜಪೂತ ವೀರರು ಮರಣದ ಹಂಗನ್ನು ಸರ್ವಥಾ ಇಡುವದಿಲ್ಲ. ಹೀಗೆ ಅಯೋಗ್ಯರೀತಿಯಿಂದ ಬದುಕುವದಕ್ಕಿಂತ ಗೌರವದಿಂದ ಸಾಯುವದೇ ಶ್ರೇಯಸ್ಕರವೆಂದು ನೀನು ತಿಳಿ. ನಿನ್ನ ದುರ್ಜಯಸಿಂಹನು ಹೇಗಾದರೂ ಬದುಕುವದಕ್ಕಿಂತ ನಿಜವಾದ ಕ್ಷತ್ರಿಯನೆನಿಸಿಕೊಳ್ಳಲಿಕ್ಕೆ ಬಹಳವಾಗಿ ಮೆಚ್ಚಿರುವನು. ಒಟ್ಟಿಗೆ, ಶತ್ರುವಿನಿಂದ ಅನುಗ್ರಹಿತನಾಗಿ ಹೆಂಗಸಿನಂತೆ ಓಡಿಹೋಗುವದಕ್ಕಿಂತ, ಶೌರ್ಯದಿಂದ ಪ್ರಾಪ್ತವಾದ ಮರಣವು ನನಗೆ ನೂರುಪಟ್ಟು ಹೆಚ್ಚಿನದಾಗಿರುವದು.

ಹೀಗೆ ನುಡಿಯುವಾಗ ದುರ್ಜಯಸಿಂಹನ ಕಣ್ಣುಗಳು ಕೆಂಪಡರಿದವು. ಆತನ ಸ್ವರವು ತೀವ್ರವೂ, ಸ್ವಾಭಿಮಾನಪೂರ್ಣವೂ ಆಯಿತು. ದುರ್ಜಯಸಿಂಹನ ಈ ಅಭಿಮಾನದ ಸ್ವಭಾವವನ್ನೂ, ಆತನ ಅಸಹಿಷ್ಣುತೆಯನ್ನೂ ಮಂದಾಕಿನಿಯು ಪೂರಾ ಅರಿತಿದ್ದರೂ, ಸ್ತ್ರೀಯರ ಹೃದಯದಲ್ಲಿರುವ ಪತಿಯ ಸಂಬಂಧದ ಸ್ವಾಭಾವಿಕವಾದ ಶ್ರದ್ಧೆಯ ಮೂಲಕ ಆಕೆಯು ಮಾಡತಕ್ಕದ್ದನ್ನು ಮಾಡಿದಳು. ತನ್ನ ಪ್ರಯತ್ನವು ವ್ಯರ್ಥವಾದದ್ದನ್ನು ನೋಡಿ ಕೋಮಲಹೃದಯದ ಆಕೆಯ ಕಣ್ಣುಗಳೊಳಗಿಂದ ಬಳಬಳ ನೀರುಗಳು ಉದುರಿದವು. ಖಿನ್ನ ಮುಖಮುದ್ರೆಯಿಂದ ಆಕೆಯು ದೈನ್ಯಸ್ವರದಿಂದ– "ನಾಥ, ನನ್ನ ಶ್ರಮವು ವ್ಯರ್ಥವಾದದ್ದಕ್ಕಿಂತ, ತಮ್ಮ ಕಾರಾಗೃಹ

ವಾಸದ ಕಷ್ಟವು ತಪ್ಪಲಿಲ್ಲೆಂಬ ವಿಚಾರದಿಂದ ನನಗೆ ಬಹಳ ದುಃಖವಾಗಿದ್ದರೂ, ತಮ್ಮ ಯೋಗದಿಂದ ವೀರಪತ್ನಿಯೆನಿಸುವ ನಾನು, ತಮ್ಮ ಕ್ಷಾತ್ರತೇಜಕ್ಕಾಗಿ ಸಮಾಧಾನಪಟ್ಟು ತಮ್ಮ ಅಪ್ಪಣೆಯಂತೆ ಹೊರಟು ಹೋಗುವೆನು; ಆದರೆ ನನ್ನ ಈ ಎಲ್ಲ ಕಷ್ಟಕ್ಕೆ ಮೂಲಕಾರಣನಾದ ಖುಸ್ರುವಿನ ಮೇಲಿನ ರೊಚ್ಚು ಮಾತ್ರ ನನ್ನಲ್ಲಿ ಹೆಚ್ಚುತೊಡಗಿರುವದು. ಆ ನೀಚವೃತ್ತಿಯ ಶಹಾಜಾದಾನು ಪರಸ್ತ್ರೀಯರ ಅಭಿಲಾಷೆಯೆಂಬ ತನ್ನ ಪಾಪರೂಪ ಭಡಾಗ್ನಿಯಿಂದ ದಗ್ಧನಾಗುತ್ತಿರುವಾಗ ನಾನು ಆ ಅಗ್ನಿಗೆ ಗಾಳಿಬೀಸದೆ ಮಾತ್ರ ಇರಲಾರೆನು. ಪ್ರಾಣಪ್ರಿಯಾ, ವೀರಪತ್ನಿಗೆ ವಿರುದ್ಧವಾದ ಆಚರಣೆಯನ್ನು ನಾನು ಇನ್ನು ಮೇಲೆ ಎಂದೂ ಆಚರಿಸಲಿಕ್ಕಿಲ್ಲವೆಂಬದನ್ನು ನೆನಪಿನಲ್ಲಿಡಿರಿ; ಅದರಂತೆ ತಮ್ಮ ಕೀರ್ತಿಗೆ ಕಲಂಕವುಂಟಾಗುವಂಥ ಆಚರಣೆಯು ಇನ್ನು ನನ್ನಿಂದ ಎಂದೂ ಆಗಲಾರದು. ಅಂಥ ಹೀನವೃತ್ತಿಯಿಂದ ಆಚರಿಸಲಿಕ್ಕೆ ತಮಗೂ ನಾನು ಇನ್ನು ಆಗ್ರಹಮಾಡಲಿಕ್ಕಿಲ್ಲ, ಎಂದು ನುಡಿದು, ಮಂದಾಕಿನಿಯು ನಿರಾಶೆಯಿಂದ ಒಬ್ಬಾನೊಬ್ಬ ಉನ್ಮಾದಿನಿಯಂತೆ ಆ ಕೋಣೆಯೊಳಗಿಂದ ತಟ್ಟನೆ ಹೊರಟು ಹೋಗಿಬಿಟ್ಟಳು.



## ೮ ನೆಯ ಪ್ರಕರಣ

# ಮಾಡಿದ್ದೊಂದು ಆದದ್ದೊಂದು!

ಒಳ್ಳೆಯದನ್ನು ಮಾಡಬೇಕೆಂದು ಮನುಷ್ಯನು ಮಾಡುವ ಯತ್ನವು ಯಾವಾಗಲೂ ಸಫಲವೇ ಆಗುವದೆಂದು ಹೇಳಲಾಗುವದಿಲ್ಲ; ಒಳ್ಳೆಯದನ್ನು ಮಾಡಹೋದಾಗ ಒಮ್ಮೊಮ್ಮೆ ಕೆಡಕೂ ಆಗುವದುಂಟು. ನಮ್ಮ ಸಂಸಾರವು ಸುಖಮಯವಾಗಬೇಕೆಂತಲೂ, ನಾವು ಸುಸಂಪನ್ನರಾಗಬೇಕೆಂತಲೂ

ಇಚ್ಛಿಸುತ್ತಿರುವೆವು; ಆ ಇಚ್ಛೆಯಂತೆ ಬಹಳವಿಲ್ಲ ಸ್ವಲ್ಪವಾದರೂ ನಾವು ನಮ್ಮ ತಿಳುವಳಿಕೆಯಂತೆ ಯತ್ನಿಸುತ್ತಲೂ ಇರುವೆವು; ಆದರೆ ನಮ್ಮ ದುರ್ದೈವದಿಂದಲೋ, ಅಥವಾ ದಿಕ್ಕು ತಪ್ಪಿದ ನಮ್ಮ ಆಚರಣೆಯಿಂದಲೋ ನಮ್ಮ ಅನುಭವಕ್ಕೆ ಒಟ್ಟಿನಿಂದ ಸಂಸಾರವು ದುಃಖಮಯವೆಂತಲೇ ತೋರುವದು. ಇದೇ ಸ್ಥಿತಿಯು ಈಗ ಮಂದಾಕಿನಿಯದಾಗಿತ್ತು. ಆಕೆಯು ತನ್ನ ಗಂಡನನ್ನು ಬಿಡಿಸಿಕೊಂಡು ಬಂದು ಆತನೊಡನೆ ಎಲ್ಲಿಗಾದರೂ ದೇಶಾಂತರಕ್ಕೆ ಹೋಗಿ ಅಲ್ಲಿ ಸುಖಸಮಾಧಾನಗಳಿಂದ ಸಂಸಾರ ಮಾಡಬೇಕೆಂದು ಮಾಡಿದ್ದಳು; ಆದರೆ ಆಕೆಗೆ ಸುಖದ ಹಾದಿಯು ನೀಗುವದರ ಬದಲು, ಆಕೆಯು ನಿರಾಶೆಯು ತಗ್ಗಿನಲ್ಲಿ ಹೆಚ್ಚು ದುಃಖಪಡುತ್ತ ಬಿದ್ದುಕೊಳ್ಳಬೇಕಾಯಿತು. ಈ ಪ್ರಸಂಗದಲ್ಲಿ ಮತ್ತೊಬ್ಬ ಸಾಮಾನ್ಯ ಸ್ತ್ರೀಯಾಗಿದ್ದರೆ ಕೈಕಾಲುಗೆಟ್ಟು ಹೊಟ್ಟೆಬೇನೆ ಹಚ್ಚಿಕೊಂಡು ಕೊರಗುತ್ತ ಸತ್ತುಹೋಗುವ ಪ್ರಸಂಗವೂ ಬರಬಹುದಾಗಿತ್ತು; ಆದರೆ ಮಂದಾಕಿನಿಯು ಕೆಚ್ಚೆದೆಯವಳು; ಅತ್ಯಂತ ಆಶಾವಾದಿಯು; ದೃಢನಿಶ್ಚಯದವಳು; ಮಹಾ ಪೌರುಷಿಯು! ಅಂತೇ ತನ್ನ ಪತಿಯು ತನ್ನನ್ನು ನಿರಾಶೆಗೊಳಿಸಿದ್ದಕ್ಕಾಗಿ ಕೈಕಾಲು ಗೆಡವೆ ಹೆಚ್ಚು ಸತ್ವದಿಂದ ಕಾರ್ಯವನ್ನು ಸಿದ್ಧಿಗೆ ಒಯ್ಯಲು ನಿಶ್ಚಯಿಸಿದಳು. ನಮ್ಮಂಥ ಅಹಂಕಾರಿಗಳಾದ ಸಾಂಸಾರಿಕರಲ್ಲಿ ಇಂಥ ಮಂಡತನವಿಲ್ಲದಿದ್ದರೆ ನಡೆಯದು. ಹಿಂದೆ ಹೇಳಿದಂತೆ ಮಂದಾಕಿನಿಯು ಉದ್ದಿಷ್ಟ ಕಾರ್ಯದ ಸಿದ್ಧಿಯನ್ನು ಪಡೆಯದೆ ಪತಿಯಿಂದ ಹೆಸರಿಡಿಸಿಕೊಂಡದ್ದಕ್ಕಾಗಿ ಪಶ್ಚಾತ್ತಾಪ ಪಡುತ್ತ ರತನಗಡದ ಬಾಗಿಲಿಗೆ ಬರುತ್ತಿರಲು, ಆ ಬಿಳಿಯ ಗಡ್ಡದ ಕ್ಷೇಮಸಿಂಗನು ಆಕೆಯನ್ನು ಅಡ್ಡಗಟ್ಟಿ ನಿಂತು ಗಂಭೀರ ಸ್ವರದಿಂದ—"ತಂಗೀ, ಮಾನಸಿಂಹ ಮಹಾರಾಜರವರು ನಿನ್ನನ್ನು ಕರೆದಿರುವರು! ಅವರು ಕೋಟೆಯ ಗೋಡೆಯ ಮೇಲಿನ ನಿರೀಕ್ಷಣ ಗೃಹದಲ್ಲಿರುತ್ತಾರೆ ನಡೆ." ಎಂದು ಹೇಳಿದನು. ಮಾನಸಿಂಹರ ಹೆಸರು ಕೇಳಿದ ಕೂಡಲೆ ಆ ದುರ್ದೈವಿಯಾದ ಮಂದಾಕಿನಿಯ ಹೃದಯವು ಕಂಪಿಸಿ, ಆಕೆಯ ಮುಖಕ್ಕೆ ಪ್ರೇತಕಳೆಯೇರಿತು. ತಾನು ಸುಳ್ಳೊಂದು ಸೊಟ್ಟೊಂದು ಹೇಳಿ, ದುರ್ಗದ ಕಾವಲುಗಾರನನ್ನು ಮೋಸಗೊಳಿಸಿದ್ದಕ್ಕಾಗಿಯೂ, ಪತಿಯನ್ನು ಬಿಡಿಸುವ ರಾಜದ್ರೋಹವನ್ನು ಮಾಡಹೋದದ್ದಕ್ಕಾಗಿಯೂ ಕಠಿಣ ಹೃದಯದ ಮಾನಸಿಂಹನು ತನಗೂ,

ವಿಶೇಷವಾಗಿ ತನ್ನ ಪತಿಗೂ ಯಾವ ಶಿಕ್ಷೆ ವಿಧಿಸುವನೋ ಎಂದು ಆಕೆಯು ಘೋರವಾಗಿ ಚಿಂತಿಸತೊಡಗಿದಳು. ಮಾನಸಿಂಹನ ಬಳಿಗೆ ಹೋಗಲಿಕ್ಕೆ ಆಕೆಯ ಕಾಲುಗಳೇ ಏಳದಂತಾದವು. ಆಕೆಯು ನಡುಗುವ ಧ್ವನಿಯಿಂದ ಕ್ಷೇಮಸಿಂಗನನ್ನು ಕುರಿತು—"ದಾದಾ! ನೀನು ನನ್ನ ತಂದೆಗೆ ಸಮಾನನು. ನನ್ನಂತಹ ಗಂಡು ಹೆಣ್ಣುಮಕ್ಕಳೂ ನಿನಗೆ ಇರಬಹುದು; ಆದ್ದರಿಂದ ಮಾನ ಸಿಂಹ ಮಹಾರಾಜರ ಬಳಿಗೆ ನಾನು ಬಾರದಂತೆ ಏನಾದರೂ ಉಪಾಯ ವನ್ನು ಮಾಡಬಾರದೇ? ದಾದಾ! ನನ್ನನ್ನು ಹೊಟ್ಟೆಯಲ್ಲಿ ಹಾಕಿಕೋ. ನನ್ನಂಥ ಒಬ್ಬ ಸಾಮಾನ್ಯ ರಮಣಿಯ ಬಳಿಯಲ್ಲಿ ಮಹಾರಾಜರ ಕೆಲಸ ವೇನಿರಬಹುದು? ನಾನೊಬ್ಬ ದುರ್ದೈವಿಯಾದ ಬಡಸ್ತ್ರೀಯಿರುವೆನು, ಸಿಕ್ಕಲ್ಲಿ ತಿರುಗುತ್ತಿರುವೆನು. ಪುಣ್ಯವಂತಾ, ಮಹಾರಾಜರಲ್ಲಿಗೆ ನಾನು ಬಾರ ದಿದ್ದರೆ ನಡೆಯಲಿಕ್ಕಿಲ್ಲವೆ? ಅವರಿಗೆ ಏನಾದರೂ ಸಮಾಧಾನ ಹೇಳಿ ಪುಣ್ಯ ಕಟ್ಟಿಕೊಳ್ಳಬಾರದೇ? ಆ ವೀರಾಗ್ರಣಿ ಅಂಬರಾಧೀಶನ ಬಳಿಗೆ ಬರಲಿಕ್ಕೆ ನನಗೆ ಅಂಜಿಕೆ ಬರುತ್ತದೆ." ಅನ್ನಲು, ಕ್ಷೇಮಸಿಂಗನು--ತಂಗೀ, ನಾನು ಮಹಾರಾಜರ ಅಪ್ಪಣೆಯಂತೆ ನಡೆಯುವವನೊಬ್ಬ ದಾಸನು. ದೊಡ್ಡವರ ಮುಂದೆ ಸೇವಕರು ಹೆಚ್ಚು ಮಾತಾಡಲಿಕ್ಕೆ ಬರುವದಿಲ್ಲ. ಬಾ, ನನ್ನ ಸಂಗಡ ಬಾ; ನಾನು ಅವರ ಬಳಿಗೆ ನಿನ್ನನ್ನು ಕರಕೊಂಡು ಹೋಗುತ್ತೇನೆ." ಎಂದು ಹೇಳಿ ಆತನು ಮುಂದಕ್ಕೆ ಸಾಗಹತ್ತಿದನು. ಮಂದಾಕಿನಿಯು ಗತ್ಯಂತರಗಾಣದೆ ಆತನ ಬೆನ್ನುಹತ್ತಿ ನಡೆದಳು. ಗೋಡೆಯ ಹಲವು ಪಾವಟಗೆಗಳನ್ನು ಏರಿ ಹೋದಬಳಿಕ ಅವರು ಸ್ವಚ್ಛ ಪ್ರಕಾಶಬಿದ್ದಿರುವ ದೊಂದು ಕೋಣೆಯಲ್ಲಿ ಬಂದರು. ಅಲ್ಲಿ ಏನೋ ವಿಚಾರಮಾಡುತ್ತ ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡುತ್ತಿದ್ದ ಮಾನಸಿಂಹನನ್ನು ನೋಡಿದ ಕೂಡಲೆ ಮಂದಾಕಿನಿಯ ಹೃದಯವು ಪುನಃ ಕಂಪಿಸಿತು. ಆದರೂ ಆ ಸತಿಯು ಧೈರ್ಯತಾಳಿ ಆ ವೀರಶ್ರೇಷ್ಠನನ್ನು ಕುರಿತು ಮೃದು ಸ್ವರ ದಿಂದ—"ಭವಾನೀ ಮಾತೆಯು ತಮ್ಮ ಕಲ್ಯಾಣ ಮಾಡಲಿ" ಎಂದು ಹರಿಸಿದಳು. ಆಗ ಮಾನಸಿಂಹನು ಒಮ್ಮೆ ತೀಕ್ಷ್ಣದೃಷ್ಟಿಯಿಂದ ಮಂದಾ ಕಿನಿಯನ್ನು ನೋಡಿ ಗಂಭೀರ ಸ್ವರದಿಂದ—"ಮಂದಾಕಿನೀ, ನೀನು ದುರ್ಜ

ಯಸಿಂಹನನ್ನು ಬಿಡಿಸಲಿಕ್ಕೆ ಬಂದಿದ್ದೆಯಲ್ಲವೆ? ಸುಳ್ಳಾಡಬೇಡ, ಸತ್ಯವಾಗಿ ಹೇಳು?

ಮಂದಾಕಿನಿ—(ಅಂಜುತ್ತಂಜುತ್ತ)ಹೌದು ಮಹಾರಾಜ; ಆದರೆ ಇದಕ್ಕಾಗಿ ನನ್ನನ್ನು ಕ್ಷಮಿಸಬಹುದೆಂದು ಆಶಿಸುವೆನು.

ಮಾನಸಿಂಹ—(ನಗುತ್ತ) ಇದರಲ್ಲಿ ನಿನ್ನ ವಿಶೇಷ ಅಪರಾಧವೇನು ಕಾಣುವದಿಲ್ಲ; ನೀನು ಪತಿವ್ರತೆಯಾದ ಆರ್ಯ ಸ್ತ್ರೀಯಿರುತ್ತೀ; ಸಾಧ್ವಿಯಾದ ನೀನು ಪತಿಯ ಬಿಡುಗಡೆಗಾಗಿ ಹೀಗೆ ಯತ್ನಿಸತಕ್ಕದ್ದೇ ಸರಿ; ಈ ಸಂಬಂಧದಿಂದ ನೀನು ಅಪರಾಧಿಯಾಗಿರುವಂತೆ ನನಗೇನು ತೋರುವದಿಲ್ಲ; ಆದರೆ ನಿನ್ನ ಕಾರ್ಯವನ್ನು ಸಾಧಿಸುವ ಸರಳ ಮಾರ್ಗವಿರುತ್ತಿದ್ದು, ನೀನು ಅಡ್ಡಹಾದಿಯ ಹಿಡಿದದ್ದೊಂದು ತಪ್ಪು ನಿನ್ನಿದಾಗಿರುತ್ತದೆ. ನೀನು ನೆಟ್ಟಗೆ ನನ್ನ ಬಳಿಗೆ ಬಂದು ದುರ್ಜಯಸಿಂಹನ ಬಿಡುಗಡೆಗಾಗಿ ನನ್ನನ್ನು ಬೇಡಿಕೊಂಡಿದ್ದರೆ ನಿನ್ನ ಆ ಪ್ರಾರ್ಥನೆಯನ್ನು ನಾನು ಅಲ್ಲಗಳೆಯುತ್ತಿದ್ದಿಲ್ಲ. ಹಾಗೆ ಮಾಡದೆ ನೀನು ಅಯೋಗ್ಯರೀತಿಯಿಂದ ವರ್ತಿಸಿದ್ದರಿಂದ ನಿನ್ನ ಯತ್ನವು ನಿಷ್ಫಲವಾಯಿತು. ಮಾನಸಿಂಹನ ರಕ್ಷಕರೂ, ಗೂಢಚಾರರೂ ಎರಡು ಕಣ್ಣಿನವರಿರದೆ ನಾಲ್ಕು ಕಣ್ಣಿನವರಿರುತ್ತಾರೆಂಬದನ್ನು ನೀನು ಚನ್ನಾಗಿ ಲಕ್ಷದಲ್ಲಿಡು. ಇಂಥ ಪ್ರಸಂಗದಲ್ಲಿಯೂ ನಿನ್ನ ಅಪರಾಧವನ್ನು ನಾನು ಕ್ಷಮಿಸುವೆನು; ಆದರೆ ನನ್ನದೊಂದು ಮಾತನ್ನು ನೀನು ಕೇಳಬೇಕಾಗುವದು.

ಮಂದಾಕಿನಿ—(ಕೈಜೋಡಿಸಿ ಆಶಾಯುಕ್ತಸ್ವರದಿಂದ)ಯಾವಮಾತು, ಕೇಳಬೇಕು ಮಹಾರಾಜ!

ಮಾನಸಿಂಹ—ಶಹಾಜಾದಾ ಖುಸ್ರುವಿನ ಹೆಸರಿನ ಉಂಗುರವನ್ನು ನನ್ನ ಕೈಯಲ್ಲಿ ಕೊಟ್ಟರೆಯೇ ನಾನು ನಿನ್ನನ್ನು ಕ್ಷಮಿಸುವೆನು.

ಮಂದಾಕಿನಿ—ಮಹಾರಾಜ, ನಾನು ಹಾಗೆ ಮಾಡಿದರೆ ನನ್ನ ಸೌಭಾಗ್ಯದೇವತೆಯನ್ನು ಬಂಧಮುಕ್ತ ಮಾಡಿಸುವಿರಾ?

ಮಾನಸಿಂಹ—ಇಲ್ಲ, ನಾನು ನಿನ್ನ ಯಾವ ನಿರ್ಬಂಧಕ್ಕೂ ಒಳಗಾಗುವದಿಲ್ಲ. ನಿನ್ನ ಅಪರಾಧಕ್ಕಾಗಿ ನೀನು ಕ್ಷಮೆಯನ್ನು ಇಚ್ಛಿಸುತ್ತಿದ್ದರೆ, ಆ ಉಂಗುರವನ್ನು ನನ್ನಕಡೆಗೆ ಕೊಡು.

ಮಂದಾಕಿನಿ--(ನಿರಾಶೆಯ ದಿಟ್ಟತನದಿಂದ) ಅದನ್ನು ನಾನು ಕೊಡದಿದ್ದರೆ?

ಮಾನಸಿಂಹ—(ಗಂಭೀರ ಸ್ವರದಿಂದ) ಈ ದುರ್ಗದಲ್ಲಿ ಕಾವಲುಗಾರರಾದ ಎಷ್ಟೋ ತಾರ್ತರಿಯ ಹೆಂಗಸರಿರುವರು. ನನ್ನ ಅಪ್ಪಣೆಯಾದ ಕೂಡಲೆ ಅವರು ನಿನ್ನ ಶೋಧಮಾಡಿ ನಿನ್ನಲ್ಲಿಯ ಉಂಗುರವನ್ನು ತಕ್ಕೊಳ್ಳುವರು. ಆಮೇಲೆ ನೀನು ಸೆರೆಮನೆಯ ಸೋಬತಿಯಾಗಬೇಕಾಗುವದು. ರಾಜಕೀಯ ಕಾರಣದ ಸಲುವಾಗಿ ದುರ್ಜಯಸಿಂಹನನ್ನು ಸೆರೆಯಲ್ಲಿಡಲು ನಾನು ಸ್ವತಃ ಅಪ್ಪಣೆಮಾಡಿರುವೆನು. ಅಂಥ ಸೆರೆಯಾಳನ್ನು ಓಡಿಸಿಕೊಂಡು ಹೋಗುವ ಅಪರಾಧವು ಭಯಂಕರವಾದದ್ದಿದ್ದು, ಅಪರಾಧಿಗೆ ತಕ್ಕಶಿಕ್ಷೆಯು ಆಗಲೇಬೇಕಾಗುತ್ತದೆ ತಿಳಿಯಿತೇ?

ಮಂದಾಕಿನಿ--(ಸ್ವಾಭಿಮಾನವು ಜಾಗ್ರತವಾದದ್ದರಿಂದ ಸಿಟ್ಟಾಗಿ ಮಾನಸಿಂಹನನ್ನು ನೋಡುತ್ತ ತೀವ್ರಸ್ವರದಿಂದ) ರಾಜಕೀಯ ಕಾರಣಕ್ಕಾಗಿ? ಅದೆಂಥ ರಾಜಕೀಯ ಕಾರಣವದು? ರಜಪೂತ ಕೇಸರಿಯಾದ ರಾಜಾ ಮಾನಸಿಂಹನೇನು ಮೊಗಲನಲ್ಲ. ಮತ್ತು ಮೊಗಲರ ಪಕ್ಷಕಟ್ಟಿ ಅನ್ಯಾಯಮಾಡಹೋಗುವದು ಆತನಿಗೆ ಯೋಗ್ಯವಲ್ಲ. ನಾನ ರಜಪೂತ ಸ್ತ್ರೀಯಿರುವೆನು; ಧರ್ಮವನ್ನೂ, ಕರ್ತವ್ಯವನ್ನೂ ಅನುಸರಿಸಿಯೇ ನಾನು ಮಾಡತಕ್ಕದ್ದನ್ನು ಮಾಡಿರುವೆನು; ಅಂದಬಳಿಕ ನಾನು ಅಪರಾಧಿಯು ಹೇಗೆ? ನಾನು ಮಾಡಿದ್ದು ಅಪರಾಧವೇ ಅಲ್ಲ. ಈ ಕೆಲಸದಲ್ಲಿ ನಾನು ಪಾಪ ಮಾಡಿರುವದಿಲ್ಲ; ನಾನು ನ್ಯಾಯಾಸನದ ಮುಂದೆ ತಪ್ಪುಗಾರಳೆಂದು ನಿರ್ಣಯಿಸಲ್ಪಡುವಹಾಗಿಲ್ಲ. ಅಂದಬಳಿಕ ನೀವು ನಿಮ್ಮ ಮನಸ್ಸಿಗೆ ಬಂದ ಶಿಕ್ಷೆಯನ್ನು ನನಗೆ ಮಾಡಿರಿ; ಆದರೆ ನಾನು ನಿರಪರಾಧಿಯಿರುವೆನೆಂಬದು ಮಾತ್ರ ಸತ್ಯವಾದದ್ದು. ಅಧಿಕಾರದ ಮುಂದೆ ಜಾಣತನವು ನಡೆಯದಿದ್ದರೂ, ಕಡೆಗೆ ಸತ್ಯವೇ ಸತ್ಯವಾದೀತಲ್ಲದೆ ಅಸತ್ಯವು ಸತ್ಯವಾಗಲಾರದು. ದುರ್ಜಯಸಿಂಹನಾದರೂ ನಿಜವಾಗಿ ಅಪರಾಧಿಯಿರುವನೋ. ಇಲ್ಲವೋ ಎಂಬದರ ವಿಚಾರವು ತಮ್ಮ ಮನಸ್ಸಿಗೆ ಆಗಿರಬಹುದೆಂಬದನ್ನು ನಾನು ಈಗ ಆಡಿತೋರಿಸುವದರಿಂದ ಪ್ರಯೋಜನವಾಗದು; ಆದರೆ ಮಹಾರಾಜ, ರಜ

ಪೂತ ಕುಲತಿಲಕರು ತಾವು ನನ್ನಂಥ ಅನಾಥ ತರುಣಿಯಕಡೆಗೆ ನಿಸ್ಪೃಹ ದೃಷ್ಟಿಯಿಂದ ನೋಡುವ ಕೃಪೆಮಾಡಬೇಕು.

ಮಂದಾಕಿನಿಯ ಈ ಮಾತುಗಳನ್ನು ಕೇಳಿ ಮಾನಸಿಂಹನು ಮನಸ್ಸಿನಲ್ಲಿ—"ಈ ಮಂದಾಕಿನಿಯು ಸರ್ವಸಾಮಾನ್ಯ ಅಬಲೆಯಾಗಿರದೆ ಸಬಲೆಯಾಗಿರುವಳು. ಅಂಜಿಕೆ ತೋರಿಸಿದರೆ ಕೆಲಸವಾಗಲಿಕ್ಕಿಲ್ಲ. ಎಂದು ಯೋಚಿಸಿ ಕಲ್ಪನೆಗಿಂದ ಹೆಚ್ಚು ಪ್ರಸನ್ನತೆಯಿಂದ ಆಕೆಯನ್ನು ಕುರಿತು—"ಮಂದಾಕಿನೀ, ಸುಮ್ಮನೆ ಸಿಟ್ಟಾಗಬೇಡ. ಖುಸ್ರುವಿನ ಈ ಉಂಗುರವು ನಿನಗೆ ಹೇಗೆ ಸಿಕ್ಕಿತೆಂಬದನ್ನು ನಿಜವಾಗಿ ಹೇಳಿಬಿಡು" ಎನ್ನಲು, ಮಂದಾಕಿನಿಗೆ ಖುಸ್ರುವಿನ ಮುಂದೆ ಹಿಂದಕ್ಕೆ ಹೇಳಿದ ಕಾರಣದ ನೆನಪಾಗಿ ಆಕೆಯು ಮಾನಸಿಂಹನನ್ನು ಕುರಿತು—"ನಾನು ಖುಸ್ರುವಿನ ಕೋಣೆಯೊಳಗಿಂದ ಇದನ್ನು ಕದ್ದುಕೊಂಡು ಬಂದೆನು" ಎಂದು ಸ್ಪಷ್ಟ ಸ್ವರದಿಂದ ಹೇಳಿದಳು. ಅದನ್ನು ಕೇಳಿ ಮಾನಸಿಂಹನಿಗೆ ಪುನಃ ಸಿಟ್ಟು ಬಂದಿತು. ಆತನು ಉತ್ತೇಜಿತ ಸ್ವರದಿಂದ—"ನೀನು ತೀರಾ ಸುಳ್ಳು ಹೇಳುತ್ತಿರುವೆ. ನೀನು ಅಲ್ಲಿಂದ ಕದ್ದುಕೊಂಡು ಬರುವದು ತೀರಾ ಅಸಂಭವವು. ಉಂಗುರದ ರಹಸ್ಯವನ್ನು ತಿಳಿದುಕೊಳ್ಳಬೇಕೆಂದು ನನ್ನ ಮನಸ್ಸಿನಲ್ಲಿರುವದರಿಂದ ಇದ್ದ ಸಂಗತಿಯನ್ನು ನಿಜವಾಗಿ ಹೇಳು. ಈಗ ನಾನು ನಿನ್ನನ್ನು ಅಂಥದೊಂದು ಮಹತ್ವದ ಕೆಲಸಕ್ಕಾಗಿಯೇ ಕರೆಸಿರುವೆನು; ಆದರೆ ಆ ಕೆಲಸವಾವುದೆಂದು ನನಗೆ ಪ್ರಶ್ನೆ ಮಾಡಬೇಡ. ನಿನ್ನ ವ್ಯವಹಾರದಿಂದ ಅಥವಾ ಕರ್ಮದಿಂದ ನನ್ನ ಕೆಲಸಕ್ಕೆ ತೊಂದರೆಯಾದರೆ, ನಿನ್ನ ವಿಪತ್ತುಗಳ ಪರಂಪರೆಯು ಹೆಚ್ಚುವದೆಂದು ತಿಳಿ; ಇದಲ್ಲದೆ ಅಂಥ ಪ್ರಸಂಗ ಒದಗಿದರೆ ಅಕಾಲದಲ್ಲಿ ನಿನ್ನನ್ನು ವಿಧವೆಯಾಗ ಮಾಡಲಿಕ್ಕೂ ನಾನು ಹಿಂದೆ ಮುಂದೆ ನೋಡಲಿಕ್ಕಿಲ್ಲ" ಎಂದು ಹೇಳಿದನು. ಮಾನಸಿಂಹನ ಈ ಕಠೋರ ವಚನಗಳನ್ನು ಕೇಳಿ ಮಂದಾಕಿನಿಯ ಹೃದಯವು ಪುನಃ ಕಂಪಿಸಿತು. ಆಕೆಯು ಮಾನಸಿಂಹನ ಕಠೋರ ಸ್ವಭಾವವನ್ನು ಪೂರ್ಣವಾಗಿ ತಿಳಿದಿದ್ದಳು. ಆತನ ಸ್ವಾರ್ಥಕ್ಕೆ ಅಡ್ಡಬರುವ ಮನುಷ್ಯನು ಯಾವನಿದ್ದರೂ ಅವನು ಜಗತ್ತಿನಲ್ಲಿ ಉಳಿಯಲಾರನೆಂಬದೂ, ಅವನು ಮಾನಸಿಂಹನ ಕಣ್ಣುತಪ್ಪಿಸಿ ಹೋಗಲಾರನೆಂಬದೂ ಆಕೆಗೆ ಗೊತ್ತಿತ್ತು. ಆದ್ದರಿಂದ ನಿಜವಾದ ಸಂಗತಿಯನ್ನು ಹೇಳದಿದ್ದರೆ ಆಕೆಯ

ಪರಿಣಾಮವಾಗುವದಾಗಿದ್ದಿಲ್ಲ. ಆಕೆಯು ಮಾನಸಿಂಹನ ಚರಣದೆಡೆಯಲ್ಲಿ ಕುಳಿತು ಕಣ್ಣೀರು ಸುರಿಸುತ್ತ—“ಮಹಾರಾಜ, ಶಾಂತರಾಗಿರಿ, ನನ್ನನ್ನು ನಾಶಗೊಳಿಸಬೇಡಿರಿ; ನನ್ನ ಸೌಭಾಗ್ಯ ತಿಲಕವನ್ನು ಅಳಿಸಬೇಡಿರಿ. ದುರ್ಜಯಸಿಂಹನ ಜೀವಕ್ಕಿಂತಲೂ ಶ್ರೇಷ್ಠವಾದದ್ದು ಈ ಜಗತ್ತಿನಲ್ಲಿ ನನಗೆ ಬೇರೆ ಯಾವದೂ ಇರುವದಿಲ್ಲ. ಆದ್ದರಿಂದ ನನಗೆ ನನ್ನ ಪತಿಯ ಜೀವನದ ಭಿಕ್ಷೆಯನ್ನು ಹಾಕಿರಿ. ನಾನು ಸುಳ್ಳು ಹೇಳುವದಿಲ್ಲ, ಈ ಉಂಗುರವನ್ನು ಖುಸ್ರುವು ತಾನಾಗಿಯೇ ನನಗೆ ಕೊಟ್ಟನು. ಎಂದು ಹೇಳಿ ತಾನು ಉಂಗುರವ ಸಂಪಾದಿಸಿದ ಬಗೆಯನ್ನೆಲ್ಲ ಒಂದೂ ಬಿಡದಂತೆ ಹೇಳಿದಳು. ಪತಿ ಪ್ರೇಮದ ಮೂಲಕ ಖುಸ್ರುವಿಗೆ ಕೊಟ್ಟಿರುವ ವಚನವನ್ನು ಆಕೆಯು ಮುರಿದಳು. ಪತಿಯ ಸಲುವಾಗಿ ಪ್ರಾಣವನ್ನೇ ಕೊಡಲು ಸಿದ್ಧರಾದವರಿಗೆ ನೀಚ ಸ್ವಾರ್ಥಪರಾಯಣರಿಗಾಗಿ ಕೊಟ್ಟ ವಚನದ ಮಹತ್ವವು ಹೇಗೆ ತೋರುವದು?

ಮಂದಾಕಿನಿಯು ಹೇಳಿದ ವೃತ್ತಾಂತವನ್ನು ಕೇಳಿ ಮಾನಸಿಂಹನಿಗೆ ಕೆಲಮಟ್ಟಿಗೆ ಆಶ್ಚರ್ಯವಾಯಿತು. ಖುಸ್ರುವು ಮಂದಾಕಿನಿಗೆ ಮೋಹಿಸಿರುವೆನೆಂದು ತಿಳಿದು, ಈಕೆಯನ್ನು ತನ್ನಲ್ಲಿಟ್ಟುಕೊಂಡರೆ ಈಕೆಯ ಮುಖಾಂತರವಾಗಿ ಖುಸ್ರುವನ್ನು ಯಂತ್ರದ ಗೊಂಬೆಯಂತೆ ಕುಣಿಸಬಹುದೆಂತಲೂ ಆ ರಜಪೂತ ವೀರನು ಒಮ್ಮೆ ಭಾವಿಸಿದನು. ಆತನು ಈ ಬಗೆಯ ಹಲವು ವಿಚಾರಮಾಡುತ್ತ ಮಂದಾಕಿನಿಯನ್ನು ಕುರಿತು—ಮಂದಾಕಿನೀ, ಖುಸ್ರುವಿನಿಂದ ನಿನಗೆ ದೊರೆತಿರುವ ಉಂಗುರವು ನಿನ್ನ ಬಳಿಯಲ್ಲಿಯೇ ಇರಲಿ; ಅದನ್ನು ನನಗೆ ಕೊಡುವ ಕಾರಣವಿಲ್ಲ. ಅದರಂತೆ ದುರ್ಜಯಸಿಂಹನ ಜೀವದ ವಿಷಯವಾಗಿಯೂ ನೀನು ಚಿಂತಿಸಬೇಡ. ಇನ್ನು ತಿಂಗಳೊಪ್ಪತ್ತಿನಲ್ಲಿ ನಾನು ನಿನ್ನ ಗಂಡನನ್ನು ಬಂಧಮುಕ್ತನಾಗಮಾಡಿ, ಮೊದಲಿನ ಕೆಲಸದ ಮೇಲೆಯೇ ಆತನನ್ನು ನಿಯಮಿಸಿಕೊಳ್ಳುವೆನು. ಅದರಂತೆಯೇ ನಿನ್ನನ್ನು ನನ್ನ ಹೊಟ್ಟೆಯ ಮಗಳೆಂದು ತಿಳಿದು, ನನ್ನ ಅರಮನೆಯಲ್ಲಿ ಆಶ್ರಯವನ್ನು ಕೊಟ್ಟು ನಿನ್ನನ್ನು ಸುಖಿಯಾಗಮಾಡುವೆನು; ಆದರೆ ಈಗಿನ ಪ್ರಸಂಗದಲ್ಲಿ ನಾನು ಹೇಳಿದಂತೆ ಕೇಳುವೆನೆಂದು ನೀನು ನನಗೆ ವಚನಕೊಡಬೇಕು. ನಿನ್ನ ಸಹಾಯದಿಂದ ನಾನು ಸಣ್ಣದೊಂದು ಕಾರ್ಯವನ್ನು

ಸಾಧಿಸಿಕೊಳ್ಳಬೇಕೆಂದಿದ್ದೇನೆ. ಆ ಕಾರ್ಯದಲ್ಲಿ ಯಾವ ಪ್ರಕಾರದ ಹೀನತ್ವವನ್ನೂ ನೀನು ವಹಿಸುವ ಕಾರಣವಿಲ್ಲ. ನಿನ್ನಂಥ ಸ್ವಾಭಿಮಾನದ ಪತಿವ್ರತೆಯಿಂದಲೇ ಅಂಥ ಕಾರ್ಯಗಳು ಆಗುತ್ತಿರುತ್ತವೆ. ಆದ್ದರಿಂದ ಈಗ ನೀನು ನನ್ನ ಸಂಗಡ ಮೊದಲು ಅಂಬರ ರಾಜಧಾನಿಗೆ ನಡೆ. ಅಲ್ಲಿಗೆ ಹೋದಬಳಿಕ ನೀನು ಏನು ಮಾಡಬೇಕೆಂಬದನ್ನು ನಾನು ಹೇಳುವೆನು. ಎಂದು ಹೇಳಿದನು. ಅದಕ್ಕೆ ಮಂದಾಕಿನಿಯು—ಮಹಾರಾಜ, ತಾವು ನನ್ನನ್ನು ಇಷ್ಟು ಗೌರವಿಸಿ ನನ್ನವಚನದಲ್ಲಿ ವಿಶ್ವಾಸವಿಡುತ್ತಿರುವಾಗ "ನಾನು ತಮ್ಮ ಅಪ್ಪಣೆ ಪಾಲಿಸುವೆನೆಂ"ದು ನಾನು ವಚನಕೊಡುವದೇನು ಆಶ್ಚರ್ಯವು? ನನ್ನ ಗೌರವಕ್ಕೂ, ಮಾನ-ಮರ್ಯಾದೆಗಳಿಗೂ, ಪಾತಿವ್ರತ್ಯಕ್ಕೂ ಕೊರತೆಬಾರದಿರುವಂತೆ ಸ್ವತಃ ತಾವೇ ನೋಡಿಕೊಂಡಬಳಿಕ ನನಗೆ ಮತ್ತೇನು ಬೇಕು? ಮಾನಸಿಂಹ ಮಹಾರಾಜರ ಮಗಳು ಮಾನಸಿಂಹರ ಮಾತನ್ನು ಮೀರುವಳೋ?" ಎಂದ ನುಡಿದು ಮಾನಸಿಂಹನ ಅಪ್ಪಣೆಯಂತೆ ಮೇಣೆಯಲ್ಲಿ ಕುಳಿತು ಕ್ಷೇಮಸಿಂಗನ ಕಾವಲಿನಿಂದ ಅಂಬರ ರಾಜಧಾನಿಗೆ ಹೊರಟಳು! ಮಾನಸಿಂಹನು ಅಶ್ವಾರೂಢನಾಗಿ ಅಂಬರ ರಾಜಧಾನಿಗೆ ವೇಗದಿಂದ ಹೋಗಿ ಮುಟ್ಟಿದನು. ಹೀಗೆ ಪತಿಯನ್ನು ಬಂಧಮುಕ್ತ ಮಾಡಹೋದ ಮಂದಾಕಿನಿಯು ದೈವವಿಲಾಸದಿಂದ ತಾನೇ ಒಂದು ಬಗೆಯ ಸೆರೆಯಲ್ಲಿ ಸಿಕ್ಕು ಅಂಬರಾಧೀಶ್ವರನ ಅಧೀನಳಾದಳು; ಆದ್ದರಿಂದ ಭವಿತವ್ಯವೆನ್ನಬೇಕು ಇದಕ್ಕೇ? ಅದು ಮನುಷ್ಯನನ್ನು ಯಾವಾಗ ಎಲ್ಲಿಗೆ ಹೇಗೆ ಎಳೆದೊಯ್ಯುವದೆಂಬದನ್ನು ಹೇಳಲಾಗುವದಿಲ್ಲ. ಒಟ್ಟಿಗೆ ಮಂದಾಕಿನಿಯು ಮಾಡಿದ್ದೊಂದು ಅದು ಆದದ್ದೊಂದು ಆಯಿತು!



೯ ನೆಯ ಪ್ರಕರಣ

# ಪ್ಯಾರಿಯ ಕುತೂಹಲ!

ಮರುದಿವಸವೇ ಮಾನಸಿಂಹನು ಮಂದಾಕಿನಿಗೆ ಹೇಳತಕ್ಕದ್ದನ್ನು ಹೇಳಿ, ಎಚ್ಚರಿಕೆಯಿಂದ ನಡೆದುಕೊಳ್ಳಲು ಎಚ್ಚರಕೊಟ್ಟು, ಯೋಗ್ಯ ವಾಹನದಲ್ಲಿ ಆಕೆಯನ್ನು ಕುಳ್ಳಿರಿಸಿ ಆಕೆಯ ಕೆಲಸಕ್ಕೆ ಬೇಕಾಗುವ ಸಾಮಗ್ರಿಗಳನ್ನೂ, ಜನರನ್ನೂ ಸಂಗಡ ಕೊಟ್ಟು ಫತ್ತೇಪುರ ಸಿಕ್ರಿಯ ಬಳಿಯಲ್ಲಿಯ ವಿತಾಗ ಎಂಬ ಹೆಸರಿನ ಸಣ್ಣ ಹಳ್ಳಿಗೆ ಕಳಿಸಿದನು. ಈ ಹಳ್ಳಿಯಲ್ಲಿ ಮಾನಸಿಂಹ ಮಹಾರಾಜನು ಕಟ್ಟಿಸಿದ ಒಂದು ದೇವಾಲಯವೂ, ಒಂದು ಮಠವೂ ಇದ್ದವು. ಮಠದಲ್ಲಿ ಒಬ್ಬ ಶೈವ ಸನ್ಯಾಸಿಯು ವಾಸಿಸುತ್ತಿದ್ದನು. ಆತನಿಗೆ ಮಾನಸಿಂಹರವರಿಂದ ವರ್ಷಾಶನವು ದೊರೆಯುತ್ತಿತ್ತು. ಅಕಬರನ ಹೊಸ ರಾಜಧಾನಿಯಾದ ಫತ್ತೇಪುರ ಸಿಕ್ರಿಯಿಂದ ಒಂದು ಮೈಲಿನೊಳಗೆ ಇದ್ದ ಈ ಹಳ್ಳಿಯು ಸುತ್ತಲಿನ ಪರ್ವತಗಳ ಸಾಲಿನಿಂದ ಬಹು ಮನೋಹರವಾಗಿ ಒಪ್ಪುತ್ತಿತ್ತು. ಪರ್ವತ ಶ್ರೇಣಿಯಿಂದ ಹೊರಟು ಬರುತ್ತಿರುವ ಸಣ್ಣ ಪುಟ್ಟ ನದಿಗಳು ಮಂಜುಳ ನಾದದಿಂದ ಜುಳು ಜುಳು ಹರಿಯುತ್ತ ಆ ಶಾಂತ ಪ್ರದೇಶವನ್ನು ಜಾಗ್ರತಗೊಳಿಸುತ್ತಿದ್ದವು. ವನರಾಜಿಯು, ಹಾಗು ಅದರಲ್ಲಿಯ ಲತಾ ಪುಷ್ಪಗಳ ಶೋಭೆಯಂತು ಅವರ್ಣನೀಯವಾಗಿತ್ತು. ಚಿಗರೆ, ಕಾಡಾಕಳು, ಕಾಡಹಂದಿ ಇವುಗಳ ಹಿಂಡುಗಳು ಅಲ್ಲಲ್ಲಿ ಕಣ್ಣಿಗೆ ಬೀಳುತ್ತಿದ್ದವು. ಆ ಪ್ರಾಣಿಗಳು ಅರಣ್ಯದ ಹೊರಗಿನ ಬೈಲು ಪ್ರದೇಶದಲ್ಲಿಯೂ ಸ್ವತಂತ್ರವಾಗಿ ಬಂದು ಆನಂದದಿಂದ ಸಂಚರಿಸುತ್ತಿದ್ದವು. ಅಲ್ಲಲ್ಲಿ ನವಿಲುಗಳ ಹಿಂಡುಗಳು ಕೇಕೆ ಹಾಕುತ್ತ ಆಕಾಶದ ಕಡೆಗೆ ನೋಡುತ್ತ ನರ್ತನ ಮಾಡುತ್ತಿದ್ದವು. ಈ ಮನೋಹರವಾದ ಅರಣ್ಯವು ಸಿಕ್ರಿಯಿಂದ ತೀರ ಸಮೀಪದಲ್ಲಿ ಇದ್ದದ್ದರಿಂದ ಅಕಬರನೂ, ಆತನ ಜನರೂ ಆಗಾಗ್ಗೆ ಅಲ್ಲಿಗೆ ಬೇಟೆಯಾಡಲಿಕ್ಕೆ ಬರುತ್ತಿದ್ದರು; ಯಾಕಂದರೆ ಆ ವನದಲ್ಲಿ ಬೇಟೆಯಾಡಲು ಯೋಗ್ಯವಾದ ಮೃಗ-ಪಕ್ಷಿಗಳು ವಿಪುಲವಾಗಿ ಇದ್ದವು.

ಮಾನಸಿಂಹನು ಮಂದಾಕಿನಿಯನ್ನು ಯಾವದೋ ಒಂದು ಗುಪ್ತ ಕಾರ್ಯದ ಸಲುವಾಗಿ ಈ ಹಳ್ಳಿಗೆ ಕಳಿಸಿದ್ದನು. ಆ ರಜಪೂತ ತರುಣಿಯು ಚಾರಿಣಿಯ ವೇಷದಿಂದ ಅಲ್ಲಿಯ ಮಠದಲ್ಲಿ ಇರತೊಡಗಿದಳು. ಮಂದಾಕಿನಿಯು ಮೊದಲೇ ಲೋಕೋತ್ತರ ಸೌಂದರ್ಯಶಾಲಿನಿಯು; ಅದರಲ್ಲಿ ಈ ಹೊಸ ವೇಷದಿಂದ ಆಕೆಯ ಸೌಂದರ್ಯವು ಮತ್ತಿಷ್ಟು ಹೆಚ್ಚಾಯಿತು. ದಿಟ್ಟಿಯಾದ ಆ ಶೂರ ರಜಪೂತ ಸ್ತ್ರೀಯು ಹಳದಿಯ ಬಣ್ಣದ ವಸ್ತ್ರವನ್ನುಟ್ಟು, ಹಣೆಯಲ್ಲಿ ರಕ್ತಚಂದನದ ರೇಖೆಯನ್ನು ಧರಿಸಿ, ಕೊರಳಲ್ಲಿಯೂ, ಮುಂಗೈಗಳಲ್ಲಿಯೂ, ತೋಳುಗಳಲ್ಲಿಯೂ ರಕ್ತಚಂದನ ಹಚ್ಚಿದ ಅಕ್ಷಮಾಲಿಗಳನ್ನು ಹಾಕಿಕೊಂಡು, ಕೈಯಲ್ಲಿ ಕೆಂಪು ಬಣ್ಣದ ತ್ರಿಶೂಲವನ್ನು ಧರಿಸಿ ಮಾನಸಿಂಹನ ಉದ್ದೇಶ ಸಿದ್ಧಿಗಾಗಿ ಸಮಯವನ್ನು ನಿರೀಕ್ಷಿಸುತ್ತ ಆಗಾಗ್ಗೆ ಆ ಅರಣ್ಯದಲ್ಲಿ ಸಂಚರಿಸುತ್ತಿದ್ದಳು. ಹೀಗಿರುವಾಗ ಕಾಲಚಕ್ರದ ಗತಿಯನ್ನನುಸರಿಸಿ ಒಮ್ಮೆ ಖುಸ್ರುವು ಬೇಟಿಯಾಡುವದಕ್ಕಾಗಿ ತನ್ನ ಹೆಂಡತಿಯಾದ ಪ್ಯಾರಿಬಾನುವಿನೊಡನೆ ಆ ಅರಣ್ಯಕ್ಕೆ ಬಂದನು. ಹೀಗೆ ಹೆಂಡಿರನ್ನು ಸಂಗಡ ಕರಕೊಂಡು ಬೇಟಿಗೆ ಹೋಗುವದು ಮೊಗಲ ವಂಶಜರ ಪದ್ಧತಿಯೇ ಆಗಿತ್ತು. ಆಗ ಖುಸ್ರುವಿನ ಸಂಗಡ ಬಹಳ ಜನರಿದ್ದಿಲ್ಲ; ಆತನು, ಆತನ ಹೆಂಡತಿಯಾದ ಪ್ಯಾರಿಬಾನುವು, ಆಕೆಯ ಸಖಿಯಾದ ಅಮೀರೆಯು, ನಾಲ್ಕುಜನ ತಾರ್ತರ ಸ್ತ್ರೀಯರು, ಸಹಾಯಕರಾದ ನಾಲ್ವರು ಸವಾರರು ಇಷ್ಟೇ ಜನರಿದ್ದರು. ಇವರೆಲ್ಲರು ಸಿಕ್ರಿಯಿಂದ ಹೊರಟು "ಹಿರಣ್ಮಿನಾರ ಮಂದಿರ"ಕ್ಕೆ ಬಂದರು. ಅಕಬರ ಬಾದಶಹನು ತನ್ನ ಪ್ರೀತಿಯ ಬೇಟಿಯ ಆನೆಯ ದೇಹವನ್ನು ಹುಗಿಸಿ ಅದರ ಮೇಲೆ ಈ "ಹಿರಣ್ಮಿನಾರ"ವನ್ನು ಕಟ್ಟಿಸಿದನೆಂದು ಜನರು ಹೇಳುವರು. ಕೆಲವರು, ಈ ಪ್ರದೇಶದಲ್ಲಿ ಚಿಗರಿಯ ಹಿಂಡುಗಳು ಬಹಳ ಇದ್ದದರಿಂದ, ಅವುಗಳ ಬೇಟಿಗಾಗಿ ಈ ಮಂದಿರವನ್ನು ಕಟ್ಟಿಸಿದನೆಂತಲೂ ಹೇಳುವರು; ಈ ಲೋಕವಾರ್ತೆಯು ಹೇಗಿದ್ದರೂ ಆ ಮಂದಿರದ ಮೇಲೆ ಬೇಟಿಯ ಸಲುವಾಗಿ ಒಂದು ಪ್ರಶಸ್ತ ಸ್ಥಳವು ರಚಿಸಲ್ಪಟ್ಟಿರುವದು ನಿಜವು. ಅಕಬರ ಬಾದಶಹನು ಈ ಸ್ಥಳದಲ್ಲಿ ಕುಳಿತು, ದೂರದ ಅಡವಿಯೊಳಗಿಂದ ಬೇಟಿಗಾರರು ಎಬ್ಬಿಸಿದ ಚಿಗರೆಗಳು ಬೈಲಿಗೆ ಬರಲು ಆತನು ತನ್ನ ತಪ್ಪದ ತುಬಾಕಿಯ ಗುರಿಯಿಂದ ಅವುಗಳ ಬೇಟಿಯಾಡು

ತ್ತಿದ್ದನು. "ಆ ಹಿರಣ್ಮಿನಾರವು" ಕಾಲದ ಆಘಾತದಿಂದ ಈಗಲೂ ಬಾಳಿ ನಿಂತು ಗತಕಾಲದ ಸ್ಮರಣವನ್ನು ಜನರ ಮನಸ್ಸಿನಲ್ಲಿ ಜಾಗ್ರತಗೊಳಿಸುತ್ತಿರುವದು.

ಖುಸ್ರುವು ಈ ವಿತಾಗದ ಆರಣ್ಯದ್ದೊಂದು ಭಾಗದಲ್ಲಿ ಬೇಟೆಯಾಡುವದರಲ್ಲಿ ಮಗ್ನನಾಗಿರಲು, ಅದೇ ವೇಳೆಯಲ್ಲಿ ಪ್ಯಾರಿಬಾನುವು ತನ್ನ ಗೆಳತಿಯಾದ ಅಮೀರೆಯೊಡನೆ ಆ ಬೇಟೆಯ ಸ್ಥಳದಿಂದ ಸ್ವಲ್ಪ ದೂರದಲ್ಲಿರುವ ಒಂದು ಹೊಳೆಯ ದಂಡೆಯ ಮೇಲಿನ ಪ್ರಶಸ್ತವಾದ ಹಾಸುಗಲ್ಲಿನ ಮೇಲೆ ಆನಂದದಿಂದ ಕುಳಿತಿದ್ದಳು. ಅವರಿಬ್ಬರ ಸುಖಸಲ್ಲಾಪಗಳು ಭರದಿಂದ ಸಾಗಿದ್ದವು. ಆ ಪ್ರಮದೆಯರಿಗೆ ಯಾತರ ಚಿಂತೆಯಿರಬೇಕೆನ್ನುವ ಹಾಗೆ ಮೇಲೆ ಮೇಲೆ ನೋಡುವವರಿಗೆ ತೋರುತ್ತಿತ್ತು; ಆದರೆ ಬೂದಿಮುಚ್ಚಿದ ಕೆಂಡದಂತೆ ಕ್ಷಣಿಕ ಸುಖದ ಆವರಣದಲ್ಲಿ ಆಗಾಗ್ಗೆ ಮರೆಯಾಗುವ ಸಾಂಸಾರಿಕ ದುಃಖರೂಪ ಅಗ್ನಿಯ ತಾಪವು ಅನುಭವಿಸುವವರಿಗೆ ಮಾತ್ರ ಗೊತ್ತು. ಸಂಸಾರವು ನೋಡುವದಕ್ಕೆ ಚಂದವಲ್ಲದೆ ಮಾಡುವದಕ್ಕೆ ಚಂದವಲ್ಲ! ಅಂತೇ ಧನಿಕರ ಧನದ ಮಬ್ಬು, ವಿದ್ವಾಂಸರ ವಿದ್ಯೆಯ ಮಬ್ಬು, ವಿಲಾಸಿಗಳ ವಿಲಾಸದ ಮಬ್ಬು, ಇನ್ನೂ ಇಂತಹ ಹಲವು ಮನೋಹರ ಮಬ್ಬುಗಳು, ನೋಡುವವರಿಗೆ ಆಯಾ ಮಬ್ಬಿನವರ ದುಃಖಗಳನ್ನು ನೋಡಗೊಡದೆ ಆ ನೋಡುವವರ ಕಣ್ಣುಗಳನ್ನು ಮುಚ್ಚುತ್ತಿದ್ದರೂ, ಅವರವರ ದುಃಖಗಳು ಅವರವರನ್ನು ತಾಪಗೊಳಿಸದೆ ಇರುವದಿಲ್ಲ. ಅಂತೇ ಬೇಕಾದವರನ್ನು ಕೇಳಿದರೂ "ಸಂಸಾರದಲ್ಲಿ ಸುಖವಿಲ್ಲರಿ" ಎಂಬದೊಂದೇ ಒಂದು ಉಕ್ತಿಯು ಸಾಧಾರಣವಾಗಿ ಎಲ್ಲರ ಮುಖದಿಂದ ಹೊರಡುವದು. ಸಂಸಾರಾಸಕ್ತರಲ್ಲದ ಜ್ಞಾನಿಗಳು, ಸಂಸಾರವು ದುಃಖದಾಯಕವೆಂದು ಹೇಳುವರು; ಅದರಂತೆ ಸಂಸಾರವನ್ನೇ ಅಧಿದೈವತವೆಂದು ತಿಳಿದು ಅದರ ಉಪಾಸನೆ ಮಾಡುವ ಸಂಸಾರಾಸಕ್ತರಾದ ಅಜ್ಞಾನಿಗಳೂ ಅದನ್ನು ದುಃಖಮಯವೆಂತಲೇ ಒಡನುಡಿಯುವರು; ಅಂದಬಳಿಕ ಸಂಸಾರವು ದುಃಖಮಯವೆಂದು ಸರ್ವಸಮ್ಮತ ಸಿದ್ಧವಾಗಿರಲು, ಅದನ್ನು ಸುಖಮಯವಾಗ ಮಾಡಬೇಕೆಂಬ ಔತ್ಸುಕ್ಯದಿಂದ ಮಾಡಬಾರದ್ದನ್ನು ಮಾಡಿ ಮತ್ತಿಷ್ಟು ದುಃಖಪಡುವ ಸಂಸಾರಸಕ್ತವಾದ ಲೋಕದ ಸಂಸಾರ ಸುಖದ ಕಲ್ಪನೆಯು ಭ್ರಮ

ಮೂಲವಲ್ಲದೆ ಮತ್ತೇನು? ಅಂತೇ ಅಕಬರ ಬಾದಶಹನ ಮೊಮ್ಮಗನ ಹೆಂಡತಿಯಾದ ಪ್ಯಾರಿಬಾನುವಿನ ಬಾಳು ಪರಮ ಸುಖಕರವೆಂದು ನೋಡು ವವರಿಗೆ ತೋರುತ್ತಿದ್ದರೂ, ಪ್ರತ್ಯಕ್ಷ ಪ್ಯಾರಿಬಾನುವನ್ನೇ ಈ ಬಗ್ಗೆ ಪ್ರಶ್ನೆ ಮಾಡಿದರೆ ನಿಜವಾದ ಉತ್ತರವು ಆಕೆಯ ಮುಖದಿಂದ ತಟ್ಟನೆ ಹೊರಡದೆ ಇರಲಿಕ್ಕಿಲ್ಲ. ಅಥವಾ ಈ ಕಾದಂಬರಿಯಲ್ಲಿ ಅದೇ ಮಾತನ್ನು ಬಿಚ್ಚಿ ಇಟ್ಟಿ ರುವದರಿಂದ ಅದನ್ನು ಈಗಲೇ ಸ್ಪಷ್ಟೀಕರಿಸುವ ಅವಶ್ಯವೂ ಇಲ್ಲ. ಇರಲಿ.

ಹೀಗೆ ಅವರಿಬ್ಬರು ತರುಣಿಯರು ಸುಖಸಲ್ಲಾಪದಲ್ಲಿ ಕಾಲಹರಣ ಮಾಡುತ್ತ ಶಿಲಾತಲದಲ್ಲಿ ಕುಳಿತುಕೊಂಡಿರಲು, ಅತ್ತ ಸ್ವಲ್ಪ ದೂರದಲ್ಲಿ ಒಂದು ಮಾವಿನ ಮರದ ಬುಡದಲ್ಲಿ ಒಬ್ಬ ಸುಂದರ ಚಾರಿಣಿಯು ನಿಂತಿರುವ ದನ್ನು ಅಮೀರೆಯು ನೋಡಿದಳು. ಆಕೆಯು ಪ್ಯಾರಿಬಾನುವನ್ನು ಕೈಹಿ ಡಿದು ಅಲ್ಲಾಡಿಸಿ—"ಅಲ್ಲಿ ನೋಡು ಆ ಗಿಡದ ಬುಡದಲ್ಲಿ ಮಿಂಚಿನಂತೆ ಚಲ್ವಿಕೆಯ ಹೊಳಪಿನಿಂದ ಕಣ್ಣು ಕುಕ್ಕುತ್ತಿರುವ ಆ ತರುಣಿಯನ್ನು!" ಅನ್ನಲು, ಪ್ಯಾರಿಯು ನೋಡಿ ನಿಜವಾಗಿಯೇ ಆಶ್ಚರ್ಯಪಟ್ಟು—"ಇವ ಳಾರೇ ಅಮೀರೇ, ಬಾದಶಹರ ಜನಾನಖಾನೆಯಲ್ಲಿಯೂ ಅಪರೂಪವಾಗಿ ರುವ ಈ ಸೌಂದರ್ಯ ಶಾಲಿನಿಯು ಇವಳು ಯಾರಿರಬಹುದು?" ಎಂದು ಕೇಳಿದಳು; ಆದರೆ ಅಮೀರೆಗೂ ಯಾವ ಸಂಗತಿಯೂ ಗೊತ್ತಿಲ್ಲದ್ದರಿಂದ, ಆಕೆಯು ತಲೆಯಲ್ಲಾಡಿಸುತ್ತ ಪ್ಯಾರಿಬಾನುವನ್ನು ಕುರಿತು—"ನನಗೆ ಗೊತ್ತಿ ಲ್ಲವ್ವಾ ಯಾರೆಂಬದು! ವೇಷದಿಂದಂತು ಆಕೆಯು ಹಿಂದೂ ತಾಪಸಿಯಾಗಿ ತೋರುವಳು! ಪ್ಯಾರೀ, ಏನು ಚಮತ್ಕಾರವು ನೋಡಿದೆಯಾ? ಇಂಥ ಚಿಕ್ಕವಯಸ್ಸಿನಲ್ಲಿ ಈ ಸುಂದರಿಗೆ ಈ ವೈರಾಗ್ಯದ ವೇಷವೇ? ಹಿಂದೂ ಜನರಲ್ಲಿ ಇಂಥ ಚಾರಿಣಿಯರು ಅಥವಾ ತಪಸ್ವಿನಿಗಳು ಬಹು ಜನರು ಇರು ವರು. ಇದಲ್ಲದೆ ಈ ನದಿಯ ಆಚೆಯ ಕಡೆಯಲ್ಲಿ ಮಾನಸಿಂಹ ಮಹಾ ರಾಜರವರ ಒಂದು ಮಠವಿರುವದೆಂದು ಕೇಳಿದ್ದೇನೆ. ಆ ಮಠದಲ್ಲಿ ಸನ್ಯಾಸಿ ಗಳು, ಸಾಧು-ಸಂತರು, ಬಾವಾ-ಬೈರಾಗಿಗಳು, ಭೈರವ-ಯೋಗಿನಿಯರು ಇರುತ್ತಿರುವರೆಂತಲೂ ಕೇಳಿದ್ದೇನೆ. ಅವರೊಳಗಿನವಳೇ ಈಕೆಯೊಬ್ಬಳು ಇರಬಹುದು. ಈ ಜನರು ಕೈನೋಡಿ ಭೂತ-ಭವಿಷ್ಯಕಾಲಗಳ ಸಂಗತಿ

ಗಳನ್ನು ಹೇಳುವರು. ಇದಲ್ಲದೆ ರೋಗಿಗಳಿಗೆ ಔಷಧವನ್ನು ಕೊಟ್ಟು ರೋಗನಿವಾರಣವನ್ನು ಮಾಡುವರು. ಎಂದು ಹೇಳಲು, ಪ್ಯಾರಿಬಾನುವೂ ಅಮೀರೆಯ ಮಾತುಗಳಿಗೆ ತಲೆ ಹಾಕಿ ಸಮ್ಮತಿಸಿ—"ಹೌದು, ನಿಜವಾಗಿಯೇ ಈ ಸಂಗತಿಯನ್ನು ನಾನು ನಮ್ಮ ಅಪ್ಪನ ಬಾಯಿಂದ ಕೇಳಿದ್ದೇನೆ. ಒಬ್ಬ ಹಿಂದೂ ಸನ್ಯಾಸಿಯು ಬರಿಯ ಕೈಯನ್ನು ನೋಡಿ ತನಗೆ—"ನೀನು ಬಾದಶಹನ ಸೇನಾಪತಿಯಾಗುವೆ" ಎಂದು ಹೇಳಿದಂತೆ •ನಾನು ಸೇನಾಪತಿಯೇ ಆದೆನೆಂದು ಅಪ್ಪನು ಆಗಾಗ್ಗೆ ಹೇಳುತ್ತಿರುವನು. ಅಮೀರೇ, ಹೋಗು ಹೋಗು, ಆ ಚಾರಿಣಿಯನ್ನು ನಾನು ಒಂದುಮಾತು ಕೇಳಬೇಕಾಗಿದೆ; "ಶಹಾಜಾದಿ ಬೇಗಮೆಯು ಕರೆಯುವಳೆಂ"ದು ಹೇಳಿ ಆಕೆಯನ್ನು ಕರಕೊಂಡು ಬಾ ಹೋಗು." ಎಂದು ಹೇಳಿದಳು.

ಪ್ಯಾರಿಯ ಈ ಅಪ್ಪಣೆಯನ್ನು ಕೇಳಿ ಅಮೀರೆಯು ನಿರಾಶೆಯಿಂದ—ಛೀ! ನಾನು ಕರೆಯುವದರಿಂದ ಏನು ಪ್ರಯೋಜನವಾಗುವದು? ಈ ಜನರು ಸಂಸಾರವಿರಾಗಿಗಳಾಗಿರುವರು. ಇವರು ಕೇವಲ ಖುದಾನ ಸೇವಕರು ಮಾತ್ರ ಇರುವರು. ಅಂದಬಳಿಕ ಇಂಥವರು ಎರಡನೆಯವರ ಅಪ್ಪಣೆಯನ್ನು ಯಾಕೆ ಪಾಲಿಸುವರು? ಸ್ವತಃ ಬಾದಶಹನು ಬಂದರೂ ಇವರಿಗೆ ಆತನ ಹಂಗು ಇರುವದಿಲ್ಲ. ಹರಿದಾಸ ಸ್ವಾಮಿಜಿಯವರನ್ನೂ, ಆಗ್ರಾದ ನಿರಾಹಾರ ಸ್ವಾಮಿಜಿಯವರನ್ನೂ ಆಗ್ರಾಕ್ಕೆ ಕರಕೊಂಡು ಬರಬೇಕೆಂದು ಅಕಬರ ಬಾದಶಹರು ಬೇಕಾದಷ್ಟು ಯತ್ನಿಸಿದರು; ಆದರೆ ಆ ಸತ್ಪುರುಷರು ಹೋಗಲಿಲ್ಲ, ಕಡೆಗೂ ಹೋಗಲೇ ಇಲ್ಲ. ಅಂದಬಳಿಕ ನನ್ನ ಕರೆಯುವಿಕೆಯಿಂದ ಆ ತಾಪಸಿಯು ಬಾರದಿದ್ದರೆ ಏನು ಮಾಡಬೇಕು? ಎಂದು ಕೇಳಲು, ಪ್ಯಾರಿಯು ಆಕೆಯ ಮಾತನ್ನು ಅಲ್ಲಗಳೆಯದೆ ಮನಸ್ಸಿನಲ್ಲಿ ಸ್ವಲ್ಪ ವಿಚಾರಮಾಡಿ ಉತ್ಸುಕತೆಯಿಂದ ಅಮೀರೆಯನ್ನು ಕುರಿತು—ಸಖೀ, ಹಾಗಾದರೆ ನಾವೇ ಆಕೆಯ ಬಳಿಗೆ ಹೋಗೋಣ ನಡೆ; ಈ ಹೊಳೆಯೇನೂ ಅಷ್ಟು ದೊಡ್ಡದಿರುವದಿಲ್ಲ. ಅದು ಅಷ್ಟು ಗುಂಡಿಯೂ ಇದ್ದಂತೆ ತೋರುವದಿಲ್ಲ. ಎಂದು ಹೇಳಿದಳು. ಪ್ಯಾರಿಯ ಈ ಮಾತುಗಳನ್ನು ಕೇಳಿ ಅಮೀರೆಯು ಆಶ್ಚರ್ಯಯುಕ್ತ ನೇತ್ರಗಳಿಂದ ಆಕೆಯನ್ನು ನೋಡುತ್ತ—ಏನಂದಿ? ನಾವೇ ನದಿದಾಟಿ ಹೋಗೋಣವೆಂದೆಯಾ? ಛೀ ಹುಚ್ಚಿ! ದಿಲ್ಲೀಶ್ವರನ

ಸೊಸೆಯು ಹೀಗೆ ಎಲ್ಲಿಯಾದರೂ ಬರಿಗಾಲಿನಿಂದ ಸಿಕ್ಕಲ್ಲಿ ತಿರುಗಾಡಬಹುವೇ? ಜನರಿಗೆ ಇದು ಗೊತ್ತಾದರೆ ಅವರು ಏನು ಅಂದಾರು? ಬಾದಶಹರಿಗೆ ಗೊತ್ತಾದರೆ ಅವರು ಏನು ಅಂದಾರು? ನೀನು ಇತ್ತ ಬರುವಾಗ ಶಹಾಜಾದಾ ಖುಸ್ರುರವರಿಗೆ—"ನಾವು ಈ ಹೊಳೆಯ ದಂಡೆಯ ಮೇಲೆಯೇ ತಮ್ಮ ಹಾದಿಯ ನೋಡುತ್ತ ಕುಳಿತಿರುವೆವು" ಎಂದು ಹೇಳಿ ಬಂದಿರುವೆ; ಅಂದಬಳಿಕ ನಾವು ಈ ಸ್ಥಳಬಿಟ್ಟು ಸಿಕ್ಕಲ್ಲಿ ತಿರುಗುವದು ಅವರಿಗೆ ಗೊತ್ತಾದರೆ ಅವರು ಏನು ಅಂದಾರು? ನೀನು ಅವರನ್ನು ಹೇಗಾದರೂ ಸಮಾಧಾನಪಡಿಸೀ; ಆದರೆ ನಾನು ಮಾತ್ರ ಅವರಿಂದ ಸಿಟ್ಟುಮಾಡಿಸಿಕೊಳ್ಳಬೇಕಾದೀತು." ಎಂದು ಹೇಳಿದಳು; ಆದರೂ ಪ್ಯಾರಿಬಾನುವಿನ ಹೋಗುವ ಆತುರತೆಯು ಕಡಿಮೆಯಾಗಲಿಲ್ಲ. ಈ ಸಂಸಾರದಲ್ಲಿ ದೈವವೆಂಬದು ಯಾವಾಗಲೂ ಹೊಸ ಹೊಸ ಹಾದಿಗಳನ್ನು ಸಿದ್ಧಮಾಡುತ್ತಿರುತ್ತದೆ; ಮತ್ತು ಆ ಒಳ್ಳೆಯ ಅಥವಾ ಕೆಟ್ಟಹಾದಿಯನ್ನು ಹಿಡಿದು ಹೋಗುವಂತೆ ಅದೇ ದೈವರೂಪವಾದ ನಮ್ಮ ಪ್ರಾಚೀನ ಕರ್ಮವು "ಬುದ್ಧಿಃ ಕರ್ಮಾನುಸಾರಿಣೀ" ಎಂಬ ಉಕ್ತಿಗನುಸರಿಸಿ ನಮ್ಮ ಬುದ್ಧಿಯನ್ನು ಪ್ರೇರಿಸುತ್ತದೆ. ಅದರಂತೆ ಈಗ ಪ್ಯಾರಿಬಾನುವು ಚಾರಿಣಿಯ ಕಡೆಗೆ ಹೋಗುವದನ್ನು ನಿಶ್ಚಯಿಸಿದಳು. ಆಕೆಯು ಈ ಪ್ರಸಂಗದಲ್ಲಿ ಸ್ವಲ್ಪ ಆತ್ಮಸಂಯಮನ ಮಾಡಿ ಹೋಗುವದನ್ನು ಬಿಟ್ಟಿದ್ದರೆ ನೆಟ್ಟಗಾಗುತ್ತಿತ್ತೆಂಬಂತೆ ತೋರುತ್ತದೆ; ಆದರೆ "ಭವಿತವ್ಯಂ ಭವತ್ಯೇವ ನಾರಿಕೇಲ ಫಲಾಂಬುವತ್" ಎಂಬಂತೆ ಆಗುವದು ಆಗಿಯೇ ತೀರುವದಲ್ಲದೆ, ಅದನ್ನು ತಪ್ಪಿಸುವವರಾದರೂ ಯಾರಿರುವರು? ಇದ್ದರೆ ಈಶ್ವರ ಕೃಪೆಗೆ ಪಾತ್ರರಾದ ಮಹಾತ್ಮರೊಬ್ಬರು ಇರಬಹುದು. ಇರಲಿ.

ತನ್ನನ್ನು ಹೋಗಗೊಡಬಾರದೆಂದು ಅಮೀರೆಯು ಹೀಗೆ ಏನೇನೋ ಹೇಳುತ್ತಿರುವದನ್ನು ನೋಡಿ ಪ್ಯಾರಿಬಾನುವು ಆಕೆಯನ್ನು ಕುರಿತು—ಅಮೀರೇ, ಬಾದಶಹರ ಬೇಟೆಗಾಗಿಯೇ ಕಾದಿಟ್ಟಿರುವ ಈ ಅರಣ್ಯದಲ್ಲಿ ಅಪ್ಪಣೆಯಿಲ್ಲದೆ ಯಾರು ಬರುವರು ಹೇಳು? ಇನ್ನು ಜಡ್ಡಿನ ಬಾದಶಹರಿಗೆ ಈ ಸುದ್ದಿಯು ತಿಳಿಯುವದಂತು ತೀರ ಅಶಕ್ಯವು. ಈಗ ಶಹಾಜಾದಾರವರು ಬೇಟೆಯಾಡುವದರಲ್ಲಿ ಮಗ್ನರಾಗಿ ಹೋಗಿರುವದರಿಂದ, ಅವರು ಯಾವಾಗ ಬರುವರೋ ಏನೋ, ಇದರಮೇಲೆಯೂ ಅವರು ಬಂದು ನಮ್ಮನ್ನು ಹುಡುಕಿ

ಸಿಟ್ಟಾದರೆ, ಅವರನ್ನು ನಾನು ಸಮಾಧಾನ ಪಡಿಸುವೆನು; ನಿನ್ನ ಮೇಲೆ ಸಿಟ್ಟಾದರೆ ಆ ಸಿಟ್ಟನ್ನು ಇಳಿಸುವದು ನನಗೆಕೂಡಿತು; ಆದ್ದರಿಂದ ಅಮೀರೀ, ಇಲ್ಲದ ನೆವ ಹೇಳಬೇಡ; ಏಳು ಬೇಗನೆ ಆ ಚಾರಿಣಿಯ ಬಳಿಗೆ ಹೋಗಿ ಬರೋಣ ಏಳು. ಮತ್ತೆ ಎಲ್ಲಿಯಾದರೂ ಆಕೆಯು ದೂರ ಹೋದಗೀದಾಳು! ಎಂದು ಹೇಳಿ ಅಮೀರೆಯನ್ನು ಕೈಹಿಡಿದು ಎಳೆಯಹತ್ತಿದಳು. ಆಗ ಅಮೀರೆಯು ನಿರ್ವಾಹವಿಲ್ಲದೆ ಪ್ಯಾರಿಯ ಕೈಹಿಡಿದುಕೊಂಡು ಹೊಳೆಯನ್ನು ದಾಟಹತ್ತಿದಳು. ತಳದ ಬೆಣಚಿಗಲ್ಲುಗಳು ಸ್ಪಷ್ಟವಾಗಿ ಕಾಣಿಸುತ್ತಿರುವ ಆ ಹೊಳೆಯ ನೀರು ಕೇವಲ ಮೊಣಕಾಲಮಟ ಇದ್ದದ್ದರಿಂದ ಅವರ ಬೆಲೆಯುಳ್ಳ ಅರಿವೆಗಳು ತೋಯದೆ, ಅವರು ನದಿಯನ್ನು ದಾಟಿ ಚಾರಿಣಿಯು ನಿಂತಿದ್ದ ಗಡದಬುಡಕ್ಕೆ ಹೋದರು. ಅವರು ಸನ್ಮಾನದಿಂದ, ಚಾರಿಣಿಗೆ ಸಲಾಮುಮಾಡಿ ಆಕೆಯನ್ನು ಕುರಿತು—"ಮಾಯಿಾ, ನೀವು ಯಾರಿರುವಿರಿ?" ಎಂದು ಪ್ರಶ್ನಮಾಡಿದರು.

ಈ ಚಾರಿಣಿಯು ಅನ್ಯರಾರೂ ಆಗಿರದೆ, ಮಂದಾಕಿನಿಯೇ ಆಗಿದ್ದಳೆಂಬದು ವಾಚಕರಿಗೆ ತರ್ಕವಾಗಿರಬಹುದು. ಮಾನಸಿಂಹನ ಹೇಳಿಕೆಯಂತೆ ಮಂದಾಕಿನಿಯು ಪ್ಯಾರಿಬಾನುವೆಂಬ ಚಿಗರೆಯನ್ನು ಹೇಗೆ ಬಲೆಯಲ್ಲಿ ಕೆಡವಲೆಂದು ಯೋಚಿಸುತ್ತ ದಿನಾಲು ಆ ಅರಣ್ಯದಲ್ಲಿ ಸಂಚರಿಸುತ್ತಿದ್ದಳು. ಆಕೆಗೆ ಹಾಗೆ ಆ ಅರಣ್ಯದಲ್ಲಿ ಸಂಚರಿಸಲಿಕ್ಕೆ ಮಾನಸಿಂಹನ ತಂತ್ರದಿಂದ ಪರವಾನಿಗೆಯು ದೊರೆತಿದ್ದರೂ ದೊರೆತಿರಬಹುದು; ಅಥವಾ ಇಂಥ ತಪಸ್ವಿನಿಯರಿಗೆ ಆ ಬಾದಶಾಹಿಯ ಬೇಟೆಯ ಕಾದಿಟ್ಟ ಅರಣ್ಯದಲ್ಲಿ ತಿರುಗಾಡಲಿಕ್ಕೆ ಪ್ರತಿಬಂಧವಿರದಿದ್ದರೂ ಇರಬಹುದು. ಹೇಗೇ ಇರಲಿ, ಮಂದಾಕಿನಿಯ ಇಚ್ಛೆಯಂತೆ ಇಂದು ಸಂಧಿಯು ಒದಿಗಿಬಂತೆಂಬದು ನಮಗೆ ಹೇಳಬೇಕಾದ ಮುಖ್ಯ ಮಾತಾಗಿರುವದು. ತನಗೆ ಮಾಡಿದ ಮೇಲಿನಪ್ರಶ್ನಕ್ಕೆ ಮಂದಾಕಿನಿಯು ಉತ್ತರ ಕೊಡುವಮೊದಲು ಬೆರಳುಮಾಡಿ ಅವರಿಗೆ ಒಂದು ಶಿಲಾತಲವನ್ನು ತೋರಿಸಿ—"ಇಲ್ಲಿ ಕುಳಿತುಕೊಳ್ಳಿರಿ; ನಾನು ಒಬ್ಬ ಚಾರಿಣಿಯಿರುವೆನು. ನನ್ನಿಂದ ನಿಮ್ಮ ಕೆಲಸವೇನಾದರೂ ಆಗುವಹಾಗಿದ್ದರೆ ಹೇಳಿರಿ." ಎಂದು ಕೇಳಿದಳು. ಆಗ ಪ್ಯಾರಿಬಾನುವು ಸುಮ್ಮನೆ ಕುಳಿತುಕೊಳ್ಳಲಾರದೆ ಅಮೀರೆಯ ಕಿವಿಯಲ್ಲಿ ಮೆಲ್ಲಗೆ—"ಅಲ್ಲೇ, ಚಾರಿಣಿಯಿದ್ದರೆ

ನೆಟ್ಟಗಾಯಿತಲ್ಲ. ಇನ್ನು ನಮಗೆ ಬೇಕಾದದ್ದನ್ನು ಕೇಳಿಕೊಳ್ಳೋಣ," ಎಂದು ನುಡಿದಳು. ಈ ಕಿವಿಮಾತಿನ ಕಡೆಗೆ ತನ್ನ ಲಕ್ಷವೇ ಇಲ್ಲೆಂದು ನಟಿಸುತ್ತ ಚಾರಿಣಿಯು ಆ ಸುಂದರಿಯನ್ನು ಕುರಿತು—

ಚಾರಿಣಿ—(ಸ್ವಲ್ಪ ನಕ್ಕು) ನೀವು ಎಲ್ಲಿ ಇರುವಿರಿ? ನಿಮ್ಮ ಉಡಿಗೆ ತೊಡಿಗೆಗಳನ್ನೂ, ಲೋಪವಾಗದ ತೇಜಸ್ಸನ್ನೂ ನೋಡಿದರೆ ನೀವು ಒಳ್ಳೇ ಕುಲೀನರಾದ ಶ್ರೀಮಂತ ಮನೆತನದವರೆನ್ನುವಹಾಗೆ ನನಗೆ ತೋರುತ್ತದೆ ಯಾಕೆ? ನನ್ನಮಾತು ನಿಜವಷ್ಟೇ?

ಅಮೀರೆ—ಈಕೆಯು ಶಾಹಾಜಾದಾ ಖುಸ್ರುವಿನ ಹೆಂಡತಿಯಾದ ಪ್ಯಾರೀಬೇಗಮಳಿರುವಳು . ಅಕಬರಬಾದಶಹರ ಮೊಮ್ಮಗ "ಖುಸ್ರು" ಇವರ ಗೊತ್ತು ತಮಗಿರಬಹುದು. ಅವರ ಮೇಲೆ ಬಾದಶಹರ ಪ್ರೇಮವು ವಿಶೇಷವಾಗಿ ಇರುವದು.

ಚಾರಿಣಿ—(ಸ್ವಲ್ಪ ವಿಚಾರಮಾಡಿ) ಹಾಗಾದರೆ ಬೇಗಮ ಸಾಹೇಬರು ಇಲ್ಲಿಯವರೆಗೆ ಬರಲು ಯಾಕೆ ಆಯಾಸಪಟ್ಟರು? ನನ್ನಂಥ ಸನ್ಯಾಸಿನಿಯ ಕಡೆಗೆ ಇವರ ಕೆಲಸವೇನು? ಏನಾದರೂ ಕೆಲಸವಿದ್ದರೆ ಅವಶ್ಯವಾಗಿ ಹೇಳಿರಿ.

ಪ್ಯಾರಿಬಾನು—ಮಾಯೀ, ನೀವು ಭೂತ-ಭವಿಷ್ಯ-ವರ್ತಮಾನಕಾಲಗಳನ್ನು ಅರಿಯುವಿರೆಂದು ನನ್ನ ನಂಬಿಗೆಯಿರುವದು. ಆದ್ದರಿಂದ ನನ್ನ ದೈವದಲ್ಲಿ ಏನಿರುತ್ತದೆಂಬದನ್ನುನನ್ನಕೈನೋಡಿ ನೀವುಹೇಳುವಿರಾ? ಹೇಳಿರಿ, ಅದನ್ನು ಕೇಳಲು ನನಗೆ ಬಹಳ ಕುತೂಹಲವುಂಟಾಗಿದೆ.

ಚಾರಿಣಿ—ನಿಮ್ಮ ದೈವದಲ್ಲೇನಿರುತ್ತದೆಂಬದನ್ನು ಹೇಳಲಿಕ್ಕೆ ಪ್ರತಿಬಂಧವೇನೂಇಲ್ಲ; ಆದರೆ ನಾನು ಹೇಳುವದು ಭೀತಿಕಾರಕವಾಗಿಯಾಗಲೀ, ಶೋಚನೀಯವಾಗಿಯಾಗಲೀ ಇದ್ದರೆ ಅದನ್ನು ಕೇಳುವ ಧೈರ್ಯವು ನಿಮಗಿರುವದೋ? ಕೆಲವು ಗುಪ್ತ ಸಂಗತಿಗಳನ್ನೂ, ಮನಸ್ಸು ನೋಯಿಸುವ ಶಬ್ದಗಳನ್ನೂ ನಾನು ನಿಮಗೆ ಹೇಳಿದರೆ ನನ್ನ ಮೇಲೆ ನೀವು ಸಿಟ್ಟಾಗಲಿಕ್ಕಿಲ್ಲವಷ್ಟೇ?

ಚಾರಿಣಿಯ ಈ ಮಾತುಗಳನ್ನು ಕೇಳಿ ಪ್ಯಾರಿಬೇಗಮೆಯ ಎದೆಯು ದಸಕ್ಕೆಂದಿತು; "ಈಕೆಯು ನನ್ನ ಮನಸ್ಸಿನ ಶಾಂತಿಯ ಭಂಗವಾಗುವಂತಹ

ಸಂಗತಿಯನ್ನೆಲ್ಲಿ ಹೇಳುವಳೋ” ಎಂಬ ಅಂಜಿಕೆಯೂ ಆಕೆಯ ಮನಸ್ಸಿನಲ್ಲಿ ಉತ್ಪನ್ನವಾಯಿತು; ಆದರೆ ಭವಿಷ್ಯ ಕೇಳುವ ಆಕೆಯ ಕುತೂಹಲವು ಬಲವತ್ತರವಾದದ್ದರಿಂದ ಹೇಗಾದರೂ ಮನಸ್ಸಿನ ಸಮಾಧಾನ ಮಾಡಿಕೊಂಡು ಆಕೆಯು ಚಾರಿಣಿಯನ್ನು ಕುರಿತು--

ಪ್ಯಾರಿಬಾನು—ಮಾಯಿ, ಒಳಿತು ಕೆಡಕು ಏನಿದ್ದದ್ದನ್ನೂ ಕೇಳುವ ನಿಶ್ಚಯದಿಂದ ನಾನು ಇಲ್ಲಿಗೆ ಬಂದಿರುವಾಗ ಅಂಜುವೆನೇಕೆ? ನನ್ನ ಈಗಿನ ಸ್ಥಿತಿಯು ಅತ್ಯುತ್ತಮತರದ್ದಾಗಿರುವದು. ಖುದಾನ ಕೃಪೆಯಿಂದ ಸ್ತ್ರೀ ಜನ್ಮದ ಶ್ರೇಷ್ಠ ಸುಖವು ನನಗೆ ಸಂಪೂರ್ಣವಾಗಿ ದೊರೆತಿರುವದು; ಆದರೆ ಈವರೆಗೆ ನನಗೆ ದೊರೆತಿರುವ, ಈಗ ದೊರೆಯುತ್ತಿರುವ, ಮುಂದೆ ದೊರೆಯಬೇಕಾಗಿರುವ ಸುಖಗಳು ನನ್ನ ಪತಿಯ ದೈವವನ್ನೇ ಅವಲಂಬಿಸಿ ಇರುವದರಿಂದ, ನನ್ನ ಪತಿಯ ಕಲ್ಯಾಣಕ್ಕಾಗಿಯಾದರೂ ಮುಂದೆ ಏನಾಗುವದೆಂಬದನ್ನು ಕೇಳುವಾಗ ನನಗಾಗುವ ಅಸಮಾಧಾನವನ್ನು ನಾನು ಸಹಿಸುವೆನು; ಆದ್ದರಿಂದ ನನ್ನ ಈ ಕೈಯನ್ನು ನೋಡಿ ಇದ್ದದ್ದನ್ನು ಸ್ಪಷ್ಟವಾಗಿ ಹೇಳಿರಿ.

ಚಾರಿಣಿ--(ಕೈಯನ್ನು ವಿಚಾರಪೂರ್ವಕವಾಗಿ ನೋಡುತ್ತ)ಬೇಗಮ್ಮಾಸಾಹೇಬ, ನಿಮ್ಮ ಉಜ್ವಲ ದೈವದಲ್ಲಿ ರಾಜಯೋಗವು ಸ್ಪಷ್ಟವಾಗಿ ಕಾಣಿಸುತ್ತಿರುವದು. ನೀವು ಇನ್ನು ಬಹು ಬೇಗನೆ ರಾಜರಾಜೇಶ್ವರಿಯಾಗುವಿರಿ. ಬಹಳ ಹೇಳುವದೇನು? ಹಿಂದುಸ್ಥಾನದ ವೈಭವಶಾಲಿಯಾದ ಸಾಮ್ರಾಜ್ಞಿಯಾಗುವ ಭಾಗ್ಯವು ನಿಮಗೇ ಪ್ರಾಪ್ತವಾಗುವದು.

ಚಾರಿಣಿಯ ಈ ಮಾತುಗಳನ್ನು ಕೇಳಿ ಪ್ಯಾರೀಬೇಗಮೆಯು ಕೊಳ್ಳೆಂದು ನಗತೊಡಗಿದಳು. ಆಕೆಯ ಈ ನಗೆಯು ಚಾರಿಣಿಗೆ ಸೇರಲಿಲ್ಲ. ಆಕೆಯು ಕೆಲಮಟ್ಟಿಗೆ ತೀವ್ರವಾದ ಸ್ವರದಿಂದ—“ಯಾಕೆ ನಕ್ಕಿರಿ ಬಿಬೀಸಾಹೇಬ,” ಎಂದು ಕೇಳಿದಳು. ಅದಕ್ಕೆ ಪ್ಯಾರಿಬಾನುವು—

ಪ್ಯಾರಿಬಾನು—ನಿಮ್ಮ ಮಾತು ಕೇಳಿ ಯಾರಿಗೆ ನಗೆ ಬರಲಿಕ್ಕಿಲ್ಲ ಮಾಸಾಹೇಬ? ನಮ್ಮ ಮಾವಂದಿರಾದ ಸುಲ್ತಾನ ಸೇಲೀಮು ಸಾಹೇಬರು ಸಿಂಹಾಸನವೇರುವದು ಸ್ಪಷ್ಟವಾಗಿ ಕಾಣುತ್ತಿರುವದು; ಅಂದಬಳಿಕ ಮೊದಲು ನಮ್ಮ ಅತ್ತೆಯವರಾದ ಜೋಧಬಾಯಿಸಾಹೇಬರವರು ಸಾಮ್ರಾ

ಜ್ಞಿಯಾಗತಕ್ಕವರು. ಹಾಗಾಗದೆ ಬಹು ಬೇಗನೆ ನಾನು ಸಾಮ್ರಾಜ್ಞಿಯಾಗುವ ಬಗೆಯೆತ್ತ?

ಚಾರಿಣಿ—(ಗಂಭೀರ ಸ್ವರದಿಂದ)ಇಲ್ಲ, ಹಾಗಾಗುವದಿಲ್ಲ ಬೇಗಮು ಸಾಹೇಬ! ನಿಮ್ಮ ಕೈಯೊಳಗಿನ ಸ್ಪಷ್ಟವಾದ ಗೆರೆಯನ್ನು ನೋಡಿ ನಾನು ಹೇಳಿದ್ದೇನೆ. ಆ ಗೆರೆಯ ಮೇಲಿಂದ ಈಗಲಾದರೂ ಸ್ಪಷ್ಟವಾಗಿ ಹೇಳುತ್ತೇನೆ, ಶಾಹಾಜಾದಾ ಖುಸ್ರು ಇವರೇ ಬಾದಶಹರಾಗುವರು! ನಿಮ್ಮ ಮಾವಂದಿರಾದ ಸೇಲೀಮುರವರ ರೇಷೆಯು ಹಲವು ಸಂಕಟಗಳಿಂದ ವ್ಯಾಪ್ತವಾಗಿರುತ್ತದೆ. ನಿಮ್ಮ ಪ್ರಾಣೇಶ್ವರನಾದ ಖುಸ್ರುವಿಗೆ ಈ ಸಿಂಹಾಸನವು ಪ್ರಾಪ್ತವಾಗಬೇಕಾದರೆ ಅವರು ದೀರ್ಘ ಪ್ರಯತ್ನ ಮಾಡಬೇಕಾಗುವದು. ಅವರು ದೀರ್ಘಪ್ರಯತ್ನ ಮಾಡದಿದ್ದರೆ, ಅಥವಾ ನಡುವೇ ಪ್ರಯತ್ನ ಮಾಡುವದನ್ನು ಬಿಟ್ಟುಕೊಟ್ಟರೆ ಅವರು ಶೋಚನೀಯ ರೀತಿಯಿಂದ ಮೃತ್ಯುಮುಖದಲ್ಲಿ ಬೀಳಬೇಕಾಗುವದು. ನಿಮ್ಮ ಸೌಭಾಗ್ಯದೇವತೆಯಾದ ಶಹಾಜಾದಾ ಖುಸ್ರುವು ತನ್ನ ತಂದೆಯ ಕೈಯೊಳಗಿಂದ ರಾಜದಂಡವನ್ನು ಕಸಿದುಕೊಳ್ಳದಿದ್ದರೆ, ಹಾಗು ನೀವು ಆ ಮಹತ್ಕಾರ್ಯದ ಸಲುವಾಗಿ ನಿಮ್ಮ ಸ್ವಾಮಿಯ ಮನಸ್ಸನ್ನು ತಿರುಗಿಸದಿದ್ದರೆ ನಿಮಗೆ ಅಕಾಲದಲ್ಲಿ ವೈಧವ್ಯಪ್ರಾಪ್ತಿಯಾಗುವದೆಂದು ತಿಳಿದುಕೊಳ್ಳಿರಿ!

ಎಂದೂ ಕಿವಿಯಿಂದ ಕೇಳದೇಯಿದ್ದ ಈ ಭಯಂಕರ ಮಾತುಗಳನ್ನು ಕೇಳಿದ ಕೂಡಲೆ ಯಾವಾಗಲೂ ಹಿಗ್ಗಿರುವ ಪ್ಯಾರಿಬಾನುವಿನ ಮೋರೆಯು ಒಣಗಿ ಇಷ್ಟಾಯಿತು! ಆಕೆಯು ಮನಸ್ಸಿನಲ್ಲಿ—"ಹಾ! ನಾನು ಇಲ್ಲಿಗೆ ಯಾಕೆ ಬಂದಿದ್ದೇನು? ಸ್ತ್ರೀಯರ ಸ್ವಭಾವವು ಚಂಚಲವೆಂಬದೇನೂ ಸುಳ್ಳಲ್ಲ. ಇಂದು ನಾನು ಕೇಳಿದ ಸುದ್ದಿಯು ಬಹು ಭಯಂಕರವಾದದ್ದು. ಇದರಲ್ಲಿ ಒಳ್ಳೆಯದೇನೂ ಇರುವದಿಲ್ಲ; ಆದ್ದರಿಂದ ಇದನ್ನು ನಾನು ಕೇಳದೆಯಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೆ? ಈಕೆಯ ಮಾತು ನಿಜವಾಗಬಹುದೆ? ಅಥವಾ ನಮ್ಮಂಥ ರಾಣೀವಾಸದ ಜನರಿಂದ ದುಡ್ಡು ಎತ್ತುವದಕ್ಕಾಗಿ ಬಾದಶಾಹೀ ಜನಾನಖಾನೆಗೆ ಬಹುಜನ ಕೈನೋಡುವ ಹೆಂಗಸರು ಬರುತ್ತಿರುವರಲ್ಲ? ಅಂಥವರಲ್ಲಿ ಇವಳೊಬ್ಬಳು ಆಗಿರಬಹುದೇ? ಹಾಗಿದ್ದರೆ ಅಂಥ ದುಡ್ಡು ಎತ್ತುವವರ ಮಾತನ್ನು ನಿಜವೆಂದು ನಂಬಿ ನಾನಾದರೂ

ಇಷ್ಟುಯಾಕೆ ವ್ಯಸನಪಡಬೇಕು?" ಎಂದು ಯೋಚಿಸಿ ಆಕೆಯು ಚಾರಿಣಿಯನ್ನು ಕುರಿತು--

ಪ್ಯಾರಿಬಾನು—ನೀವು ಯಾರಿರುವಿರಿ ಮಾಯಿ?

ಚಾರಿಣಿ—ನಾನು ನಾಲ್ಕೂಕಡೆಗೆ ಸಂಚರಿಸುತ್ತಿರುವ ಒಬ್ಬ ಚಾರಿಣಿಯಿರುತ್ತೇನೆ.

ಪ್ಯಾರಿಬಾನು—ನೀವು ಎಲ್ಲಿ ಇರುತ್ತೀರಿ?

ಚಾರಿಣಿ—ಗಿಡದ ನೆರಳೇ ನಾವಿರುವ ಸ್ಥಳವು; ಆದರೆ ಯಾವಾಗ ಯಾವ ಗಿಡದಬುಡದಲ್ಲಿರುವೆವೆಂಬದರ ನಿಯಮವಿಲ್ಲ; ಯಾಕಂದರೆ ವಿರಕ್ತ ಪ್ರಾಣಿಗಳಿಗೆ ಯಾವತ್ತೂ ಜಗತ್ತೇ ತಮ್ಮ ಮನೆಯಾಗಿ ತೋರುತ್ತವೆ.

ಪ್ಯಾರಿಬಾನು—ನೀವು ನನ್ನ ಸಂಗಡ ನಮ್ಮ ಬಾದಶಾಹೀ ರಂಗಮಹಾಲಿಗೆ ಬರವಿರಾ?

ಚಾರಿಣಿ—ಇಲ್ಲ, ಅಲ್ಲಿ ಬರಲಿಕ್ಕೆ ನನಗೆ ಬಹಳ ಅಂಜಿಕೆ ಬರುತ್ತದೆ.

ಪ್ಯಾರಿಬಾನು—ಆದೇಕೆ? ನೀವು ಎಂದಾದರೂ ಬೇಗಮ ಮಹಾಲಿಗೆ ಹೋಗಿದ್ದಿರೆನ್ನುವಹಾಗೆ ತೋರುತ್ತದೆ.

ಚಾರಿಣಿ—ಹಗಲು ರಾತ್ರಿ ಐಶ್ವರ್ಯದ ವ್ಯಕ್ತವಾದ ಲೀಲೆಯು ನಡೆದಿರುವಲ್ಲಿಗೆ ಹೋಗುವದರಿಂದ ನನ್ನ ಈಶ್ವರಚಿಂತನಕ್ಕೆ ವ್ಯತ್ಯಯ ಬರುವ ಸಂಭವವಿರುವದು; ಆದ್ದರಿಂದ ನಾನು ಎಂದೂ ನಿಮ್ಮ ಬೇಗಮ ಮಹಾಲಿಗೆ ಹೋಗುವದಿಲ್ಲ.

ಚಾರಿಣಿಯ ಈ ನಿಸ್ಪೃಹತೆಯ ಮಾತುಗಳನ್ನು ಕೇಳಿ ಪ್ಯಾರಿಬಾನುವು ಆಶ್ಚರ್ಯಪಡುತ್ತ ಚಾರಿಣಿಯ ನಿಸ್ಪೃಹವೃತ್ತಿಯನ್ನು ಪೂರಾ ಪರಿಕ್ಷಿಸಿಯೇ ತೀರಬೇಕೆಂದು ತಿಳಿದು ತನ್ನ ಕೊರಳೊಳಗಿನ ಮುತ್ತಿನ ಹಾರವನ್ನು ಚಾರಿಣಿಗೆ ಉಚಿತವಾಗಿ ಕೊಡಹೋದಳು! ಆದರೆ ಚಾರಿಣಿಯು ಅದನ್ನು ತಕೊಳ್ಳದೆ ಸಿಟ್ಟಿನ ಮುದ್ರೆಯಿಂದ—ಇದೇನು ಬೇಗಮಸಾಹೇಬ, ನಾನು ಇದನ್ನು ತಕ್ಕೊಂಡು ಮಾಡುವದೇನು? ಈ ಚಾರಿಣಿಯು ಉಚಿತದ ಆಶೆಯಿಂದ ಏನಾದರೂ ಭವಿಷ್ಯವನ್ನು ಹೇಳುತ್ತಿರುವಳೆಂದು ನೀವು ತಿಳಿದಿರುವಿರೇನು? ನೀವು ಕೊಡುವ ಈ ಮುತ್ತಿನ ಹಾರವು ನನ್ನ ದೃಷ್ಟಿಯಿಂದ ಕಲ್ಲುಮಣ್ಣುಗಳಿಗೆ ಸಮಾನವಾಗಿರುವದು. ನಾನು ಇನ್ನೊಮ್ಮೆ ನಿಮಗೆ ಸ್ಪಷ್ಟ

ವಾಗಿ ಹೇಳುತ್ತೇನೆ, ನಿಮ್ಮಿಬ್ಬರ ಭವಿಷ್ಯಕಾಲವೂ ಅಂಧಃಕಾರಮಯವಾಗಿರುವದು. ನೀವಿಬ್ಬರು ಪತಿ–ಪತ್ನಿಯರು ಬಾದಶಾಹಿ ಸಿಂಹಾಸನದ ಪ್ರಾಪ್ತಿಗಾಗಿ ಮನಃಪೂರ್ವಕವಾಗಿ ಧೀರ್ಘಪ್ರಯತ್ನ ಮಾಡದಿದ್ದರೆ, ನಿಮ್ಮಿಬ್ಬರ ಘಾತವು ನಿಶ್ಚಯವಾಗಿ ಆಗುವದು. ಸ್ತ್ರೀಯರು ತಮ್ಮ ಸಾಮರ್ಥ್ಯವನ್ನು ಪ್ರಕಟ ಮಾಡಿದರೆ, ನೆಲವು ಸಮುದ್ರವಾದೀತು, ಸಮುದ್ರವು ನೆಲವಾದೀತು! ಬಹಳ ಹೇಳುವದೇನು? ನೀವಿಬ್ಬರೂ ಸಿಂಹಾಸನ–ಪ್ರಾಪ್ತಿಗಾಗಿ ದೀರ್ಘಪ್ರಯತ್ನ ಮಾಡದಿದ್ದರೆ ನಿಮ್ಮ ಮಾವನ ಕೈಯಿಂದಲೇ ನಿನ್ನ ಗಂಡನ ಕೊಲೆಯಾಗುವದು! ನಾನು ಈ ಭವಿಷ್ಯವನ್ನು ಹೇಳತಕ್ಕದ್ದಲ್ಲ; ಆದರೆ ನೀವು ಹೇಳಲು ಒತ್ತಾಯ ಮಾಡಿದ್ದರಿಂದ ಹೇಳಿದೆನು.

ಯಾವಾಗಲೂ ವಿಲಾಸದಲ್ಲಿ ಮಗ್ನಳಾಗಿರುತ್ತಿದ್ದ ಪ್ಯಾರಿಬಾನುವಿನ ಅಂತಃಕರಣವು, ಚಾರಿಣಿಯ ಮುಖದಿಂದ ಹೊರಟ ಈ ಶಬ್ದಗಳನ್ನು ಕೇಳಿ ಗದಗುಟ್ಟಿ ನಡುಗಿತು. ಆಕೆಯು ಮನಸ್ಸಿನಲ್ಲಿ—"ಈಕೆಯು ಸರ್ವಸಾಮಾನ್ಯ ಚಾರಿಣಿಯಿದ್ದಂತೆ ತೋರುವದಿಲ್ಲ. ಇಂಥ ನಿಸ್ಪೃಹವೃತ್ತಿಯವಳ ಭವಿಷ್ಯವು ಸುಳ್ಳಾಗಬಹುದೇ? ಇದಕ್ಕಾಗಿ ಉಪಾಯವೇನು ಮಾಡಬೇಕಾದೀತು?" ಎಂದು ಕೆಲಹೊತ್ತು ವಿಚಾರಮಾಡಿ ಚಾರಿಣಿಯ ಕಡೆಗೆ ನೋಡಲು, ಆಕೆಯು ಅಕಸ್ಮಾತ್ ಅದೃಶ್ಯಳಾದವಳಂತೆ ಎತ್ತೋ ಹೊರಟು ಹೊಗಿಬಿಟ್ಟಿದ್ದಳು. ತನ್ನ ಸಖಿಯಾದ ಪ್ಯಾರಿಬಾನುವಿನ ಈ ಭಯಂಕರ ಭವಿಷ್ಯ ಶ್ರವಣದಿಂದ ಬೆದರಿಬಿದ್ದು ತನ್ನ ಸಖಿಯನ್ನು ಕನಿಕರದಿಂದ ನೋಡತೊಡಗಿದ್ದ ಅಮೀರೆಯೂ ಆ ಚಾರಿಣಿಯು ಹೋದದ್ದನ್ನು ನೋಡಿದ್ದಿಲ್ಲ. ಆಗ ಸೂರ್ಯಾಸ್ತವಾಗುವದಕ್ಕೆ ಬಹಳ ಅವಕಾಶವಿದ್ದಿಲ್ಲ. "ಎಷ್ಟು ಹೊತ್ತಾಯಿತಲ್ಲ" ಎಂದು ಗಾಬರಿಯಾಗಿ ಪ್ಯಾರಿಬಾನುವು ಅಮೀರೆಯನ್ನು ಕುರಿತು–"ಅಮೀರೇ, ಆ ಚಾರಿಣಿಯು ಎಂಥ ಭಯಂಕರ ಮಾತನ್ನು ಹೇಳಿದಳಲ್ಲೇ? ಅದನ್ನು ಹೇಳುವಾಗ ನನ್ನ ವಿಷಯದ ದಯೆಯು ಆಕೆಯ ಅಂತಃಕರಣದಲ್ಲಿ ಉತ್ಪನ್ನವಾಗಿರಲಿಕ್ಕಿಲ್ಲವೆ? ಇನ್ನು ನಮ್ಮ ಗತಿಯೇನಾದೀತು ಅಮೀರೇ ಎಂದು ಕನಿಕರಪಡುತ್ತ ಕೇಳಿದಳು. ಆಗ ಅಮೀರೆಯು ಪ್ಯಾರಿಯನ್ನು ಸಮಾಧಾನಪಡಿಸುವದಕ್ಕಾಗಿ ಆಕೆಯನ್ನು ಕುರಿತು—ಪ್ಯಾರೀ, ನೀನೇಕೆ

ಇಷ್ಟು ಗಾಬರಿಯಾಗುವೆ? ಹೀಗೆ ಭವಿಷ್ಯ ಹೇಳುವವರನ್ನು ನಾನು ಬಹಳ ನೋಡಿದ್ದೇನೆ. ಅವರ ಭವಿಷ್ಯವು ಸುಳ್ಳಾಗುವದೇ ಬಹಳ. ನನಗೂ ಒಬ್ಬಳು ಹೀಗೆಯೇ ಭವಿಷ್ಯ ಹೇಳಿದ್ದಳು; ಆದರೆ ಒಂದೂ ನಿಜವಾಗಲಿಲ್ಲ. ಇಂಥವರು ಹೇಳುವ ಭವಿಷ್ಯವೆಲ್ಲ ನಿಜವಾಗುತ್ತ ಹೋದರೆ, ಇವರು ಹೀಗೆ ಊರೂರು ಯಾಕೆ ತಿರುಗುತ್ತಿದ್ದರು? ನಿನ್ನ ಇಚ್ಛೆಯಿದ್ದರೆ ಆ ಚಾರಿಣಿಯನ್ನು ಈ ಅಡವಿಯಲ್ಲಿ ಹುಡುಕೋಣ! ಎಲ್ಲಿ ಹೋಗುತ್ತಾಳೆ? ಈಗ ನಮ್ಮ ತಾರ್ತರಿ ದಾಸಿಯರನ್ನು ಕರೆದರೆ ಅವರು ಇದ್ದಲ್ಲಿ ಆಕೆಯನ್ನು ಎಳಕೊಂಡು ಬರುವರು.

ಅಮೀರೆಯ ಈ ಮಾತುಗಳನ್ನು ಕೇಳಿ ಪ್ಯಾರಿಬಾನುವು ಅಧೀರತೆಯಿಂದ—ಬೇಡ ಬೇಡ, ಅಮೀರಾ, ಆಕೆಯ ಶೋಧಮಾಡುವದು ಬೇಡ. ಆಕೆಯೊಬ್ಬ ಸೈತಾನಳಿರುವಳು. ಆಕೆಯು ನನ್ನ ಯಾವತ್ತು ಸುಖದ ಆಶೆಯನ್ನು, ಹಾಗೂ ನನ್ನ ಉತ್ಸಾಹವನ್ನು ಮಣ್ಣುಗೂಡಿಸಿ ಬಿಟ್ಟಳು. ಅಮೀರೇ, ಇನ್ನು ನನಗೆ ಮೊದಲಿನ ಆ ಉಲ್ಲಾಸವೃತ್ತಿಯು ಪ್ರಾಪ್ತವಾಗಬಹುದೇ? ಛೇ ಛೇ! ಇನ್ನು ಮುಂದೆ ಏನಾಗುವದೋ ಯಾರಿಗೆಗೊತ್ತು! ನಡೆ, ಅಮೀರೇ, ಇನ್ನು ನಾವು ನದಿಯ ಆಚೆಯ ಕಡೆಗೆ ಹೋಗೋಣ ನಡೆ. ನಾವು ಇಲ್ಲಿಗೆ ಬಂದು ಬಹಳ ಹೊತ್ತಾಯಿತು." ಎಂದು ನುಡಿಯಲು, ಅವರಿಬ್ಬರು ಹೊಳೆಯನ್ನು ದಾಟಿ ಸುರಕ್ಷಿತವಾಗಿ ಆಚೆಯ ದಂಡೆಗೆ ಹೋದರು. ಅಷ್ಟರಲ್ಲಿ ಖುಸ್ರುವು ಅವರನ್ನು ಹುಡುಕುತ್ತ ಅಲ್ಲಿಗೆ ಬಂದಿದ್ದನು. ಆತನು ಇಬ್ಬರೂ ನದಿದಾಟಿ ಬಂದದ್ದನ್ನು ನೋಡಿ—"ಎಲ್ಲಿಗೆ ಹೋಗಿದ್ದಿರಿ ಬೇಗಮುಸಾಹೇಬ, ನಾನು ಸುಮ್ಮನೆ ನಿಮ್ಮನ್ನು ಹುಡುಕುತ್ತ ಹುಚ್ಚನಹಾಗೆ ತಿರುಗುತ್ತಿರುವೆನು." ಎಂದು ಕೇಳಲು, ಆತನ ಈ ವಿನೋದದ ಮಾತಿನಿಂದ ಪ್ರಫುಲ್ಲಿತಳಾಗಬೇಕಾಗಿದ್ದ ಪ್ಯಾರಿಬಾನುವು ಏನೂ ಉತ್ತರ ಕೊಡಲಾರದೆ ನಿರ್ವಾಹವಿಲ್ಲದೆ ಪತಿಯನ್ನು ಕುರಿತು—''ತಮಗೆ ಬರುವದಕ್ಕೆ ವಿಲಂಬವಾದದ್ದರಿಂದ ಬೇಸರಬಂದು ನಾವು ಈ ಹೊಳೆದಾಟಿ, ಅದೋ ಆ ಎದುರಿಗಿನ ದಿನ್ನೆಯ ಮೇಲೆ ಹೋಗಿದ್ದೆವು. ಶಹಾಜಾದೇ ಸಾಹೇಬ, ಯಾಕೋ ಈದಿನ ನನ್ನ ಮನಸ್ಸಿಗೆ ಬಹಳ ಚಡಪಡಿಕೆಯಾಗಿದೆ," ಅನ್ನುತ್ತಿರಲು, ಖುಸ್ರುವು—ಪ್ಯಾರೀ, ನನಗೂ ಇಂದು ಸಮಾಧಾನವಿಲ್ಲ. ಈದಿನ

ಎಷ್ಟು ಪ್ರಯತ್ನಮಾಡಿದರೂ ಬೇಟೆಯಲ್ಲಿ ಒಂದಾದರೂ ಚಿಗರೆ ದೊರೆಯು ಲಿಲ್ಲ. ಇಂದಿನ ದಿನವೇ ದುರ್ದಿನವು. ನಡೆಯಿರಿ, ನಾವು ಇನ್ನು ಮನೆಗೆ ಹೋಗೋಣ, ಎಂದು ಹೇಳಿ, ಖುಸ್ರುವು ಯಾವತ್ತು ಪರಿವಾರದೊಡನೆ ಫತ್ತೆಪುರಸಿಕ್ರಿಯಲ್ಲಿರುವ ತನ್ನ ಪ್ರಾಸಾದಕ್ಕೆ ಹೋದನು.



### ೧೦ನೆಯ ಪ್ರಕರಣ

## ಸ್ವಾಭಿಮಾನದ ಸೊಬಗು.

ಕಟ್ಟಿ ಕರೆಯುವ ಮುಂಗಾರಿಯ ಮಳೆಗಾಲವು. ಒಂದು ದಿನ ಕೃಷ್ಣ ಪಕ್ಷದ ರಾತ್ರಿಯಲ್ಲಿ ಒಂದೇಸವನೆ ಮಳೆಯು ಸುರಿಯುತ್ತಿತ್ತು. ಗುಡುಗು ಸಿಡಿಲುಗಳ ಅಬ್ಬರದಿಂದ ಜನರ ಹೃದಯಗಳು ಕಂಪಿಸತೊಡಗಿದವು. ಮಿಂಚಿದರೆ ಮಾತ್ರ ಕಾಣುವಷ್ಟು ಗಾಢವಾದ ಅಂಧಃಕಾರವು ಮುಸುಕಿರಲು, ಮಳೆ-ಬಿರುಗಾಳಿಗಳ ಹೊಯ್ತಿನಿಂದ ಮುಂದುಗಾಣದೆ ಜನರು ಮನೆಹಿಡಿದು ಕುಳಿತುಕೊಳ್ಳಬೇಕಾಯಿತು! ಮನೆ ಸೋರಿದರೆ ಮಾಳಿಗೆ ಹತ್ತುವಹಾಗಿಲ್ಲ. ಹರಿ-ವೋರಿಗಳು ಕಟ್ಟಿ, ನೀರು ಮನೆಹೊಕ್ಕರೆ ಹಿತ್ತಲ-ಮುಂಚೆಗೆ ಹೋಗು ವಹಾಗಿಲ್ಲ. ಮಳೆಯು ನಿಲ್ಲುವದೋ, ಹೀಗೆಯೇ ಮಳೆಯಾಗುತ್ತಾಗುತ್ತ ಮನೆ-ಮಾರು ತೇಲಿ ಹೋಗುವವೋ ಅನ್ನುವಹಾಗೆ ಜನರಿಗೆ ಆಗಿತ್ತು. ಇಂಥ ಭಯಂಕರ ರಾತ್ರಿಯಲ್ಲಿ ಅಂಬರಾಧೀಶ್ವರನಾದ ಮಾನಸಿಂಹನು ತನ್ನ ಆಲೋಚನಾ ಗೃಹದಲ್ಲಿ ದೀರ್ಘವಾದ ಆಲೋಚನೆಗೊಳಗಾಗಿ, ಹೊರಗಿನ ಇಂಥ ಮಳೆಯ ಕಡೆಗೆ ಲಕ್ಷವಿಲ್ಲದೆ, ಆಗೋಡೆಯಿಂದ ಈಗೋಡೆಗೆ ಈ ಗೋಡೆಯಿಂದ ಆಗೋಡೆಗೆ ಹೋಗುತ್ತ-ಬರುತ್ತಲಿದ್ದನು. ಬಿರುಗಾಳಿ ಯಿಂದ ಆ ಗೃಹದೊಳಗೆ ಹಚ್ಚಿದ ಸುಗಂಧ ತೈಲದ ಕೆಲವು ದೀಪಗಳು, ಸಿಟ್ಟಿ ನಿಂದ ಉರಿಯುತ್ತಿದ್ದ ಆ ವೀರಾಗ್ರಣಿಯ ಭಯದಿಂದ ಕಂಪಿಸತೊಡಗಿದ್ದವು;

ಕೆಲವು ಆತನೆದುರಿಗೆ ನಿಲ್ಲಲಾರದೆ ಶಾಂತವಾಗತೊಡಗಿದ್ದವು. ಆದರೆ ಅವಾವುಗಳ ಕಡೆಗೂ ಆ ಅಂಬರಾಧೀಶ್ವರನ ಲಕ್ಷವಿದ್ದಿಲ್ಲ; ಅಷ್ಟರಲ್ಲಿ ಒಮ್ಮೆ ಬಿರುಗಾಳಿಯ ಕಸುವಿನ ಪ್ರವಾಹದೊಡನೆ ಮಳೆಯ ತುಷಾರದ ಹನಿಗಳು ಎಲ್ಲ ಕಿಡಿಕೆಗಳೊಳಗಿಂದ ಒಳನುಗ್ಗಿ ಆ ರಜಪೂತ ಶ್ರೇಷ್ಠನ ಮೈ-ಮೋರೆಗಳನ್ನು ಮುತ್ತಲು, ಆತನು ಎಚ್ಚತ್ತು ಸಿಟ್ಟಿನಿಂದ ದಡದಡ ಒಂದೊಂದೇ ಕಿಡಿಕಿಗಳನ್ನು ಇಕ್ಕಿ ಆ ಗೃಹವನ್ನು ಗಾಳಿಯಾಡದಂತೆ ಮಾಡಿಬಿಟ್ಟನು; ಆದರೆ ಅಷ್ಟರೊಳಗೇ ಒಂದೆಂದರೆ ಒಂದೇ ದೀಪವು ಉಳಿದು ಮಿಕ್ಕ ದೀಪಗಳೆಲ್ಲ ಶಾಂತವಾಗಿ ಹೋಗಿದ್ದವು; ಆದರೂ ಆ ರಜಪೂತ ವೀರನು ದೀಪಗಳನ್ನು ಹಚ್ಚುವದಕ್ಕಾಗಿ ಸೇವಕರನ್ನು ಕರೆಯದೇ, ಒತ್ತಟ್ಟಿಗೆ ಒಗೆದುಬಿಟ್ಟದ್ದ ಒಂದು ಪತ್ರದ ಕಡೆಗೆ ನೋಡಿ ಸಂತಾಪಗೊಳ್ಳತೊಡಗಿದ್ದನು. ಆಗ ಆತನ ಮುಖಮುದ್ರೆಯು ಕ್ರೋಧಾವಿಷ್ಟವಾಗಿತ್ತು; ಆತನ ಕಣ್ಣುಗಳು ಕೆಂಡದಂತಾಗಿದ್ದವು; ಆತನ ಕೆಳದುಟಿಯು ಥರಥರ ನಡುಗುತ್ತಿತ್ತು. ಒಮ್ಮೊಮ್ಮೆ ಆತನ ಸಂತಾಪದ ಮಿತಿಯು ಮೀರಲು, ಆತನು ಸರಕ್ಕನೆ ತನ್ನ ಖಡ್ಗವನ್ನು ಒರೆಯೊಳಗಿಂದ ಹಿರಿಯುವನು; ಆದರೆ ಯಾವದೋ ವಿಚಾರವು ಮನಸ್ಸಿನಲ್ಲಿ ಬರಲು ಪುನಃ ಆತನು ಆ ಖಡ್ಗವನ್ನು ಒರೆಗಾಣಿಸುವನು.

ಪ್ರಿಯವಾಚಕರೇ, ರಾಜಾ ಮಾನಸಿಂಹನು ಇಷ್ಟು ಸಿಟ್ಟಾಗಲಿಕ್ಕೆ ಕಾರಣವೇನಿರಬಹುದೆಂಬ ವಿಚಾರವು ನಿಮ್ಮ ಮನಸ್ಸಿನಲ್ಲಿ ಬಂದಿರಬಹುದಲ್ಲವೆ? ಅತ್ತ ಒತ್ತಟ್ಟಿಗೆ ಒಗೆದು ಕೊಟ್ಟಿದ್ದ ಪತ್ರವು ಯಾರದಿರಬಹುದೆಂಬದನ್ನು ತಿಳಕೊಳ್ಳುವದಕ್ಕೂ ನೀವು ಆತುರ ಪಡುತ್ತಿರಬಹುದು. ಆದರೆ ಆ ಪತ್ರವು ಅಲಹಾಬಾದದಿಂದ ಸೇಲೀಮನು ಬರೆದು ಕಳಿಸಿದ್ದಾಗಿತ್ತೆಂಬದನ್ನು ನಿಮಗೆ ನಾವು ಹೇಳಿಬಿಡುವೆವು. ತನ್ನ ಬೀಗನು ಬರೆದಿರುವ ಆ ಪತ್ರವನ್ನು ನೋಡಿ ಮಾನಸಿಂಹನು ಇಷ್ಟು ಯಾಕೆ ಸಿಟ್ಟಾಗಿರಬಹುದು? ಮಾನಸಿಂಹನ ಪರಿಚಯವಂತು ನಿಮಗೆ ಬಹುಮಟ್ಟಿಗೆ ಆದಂತಾಗಿರುವದು; ಆ ರಜಪೂತ ವೀರಾಗ್ರಣಿಯ ಸಹಾಯವಿಲ್ಲದಿದ್ದರೆ ಅಕಬರ ಬಾದಶಹನು ಬಾದಶಾಹಿಯ ಪದವಿಯನ್ನು ಹೊಂದುತ್ತಿದ್ದನೋ ಇಲ್ಲವೋ ಎಂಬದು ಸಂಶಯಗ್ರಸ್ತವಾಗಿತ್ತೆನ್ನುವಷ್ಟು ಆ ಅಂಬರಾಧೀಶ್ವರನು ಕರ್ತೃತ್ವಶಾಲಿಯಾಗಿದ್ದನು. ಅಕಬರ ಬಾದಶಹನ ವಿಜಯಶಾಲಿತ್ವದ ಅರ್ಧಕ್ಕರ್ಧ ಪಾಲಿಗೆ

ಮಾನಸಿಂಹನು ಕಾರಣನೆಂದು ಇತಿಹಾಸಕಾರರು ಒಪ್ಪಿಕೊಳ್ಳುತ್ತಿರುವರು. ಇಂಥ ಘನವಂತನಿಗೆ, ಆತನ ದೃಷ್ಟಿಯಿಂದ ಇನ್ನೂ ಪೋರನಾಗಿರುವ ಸೇಲಿ ಮನು ಉದ್ಧತತನದಿಂದ ಪತ್ರ ಬರೆದಬಳಿಕ, ಆ ಅಭಿಮಾನಿಯಾದ ರಜ ಪೂತನಿಗೆ ಯಾಕೆ ಸಿಟ್ಟುಬರಬಾರದು? ಮೊದಲೇ ಮಾನಸಿಂಹನು ಅತ್ಯಂತ ಅಭಿಮಾನಿಯು, ಅದರಲ್ಲಿ ನಿಜವಾಗಿ ಮೊಗಲ ಬಾದಶಹರ ಕಲ್ಯಾಣವನ್ನು ಮನಮುಟ್ಟಿ ಮಾಡಿದವನು. ಅಂದಬಳಿಕ ತನ್ನ ಬೀಗ ಸೇಲೀಮನ ಆ ಅಪಮಾನಕಾರಕ ಪತ್ರದಿಂದ ಆತನಿಗೆ ಬರುವಷ್ಟಕ್ಕಿಂತ ಹೆಚ್ಚು ಸಿಟ್ಟು ಬಂದಿದ್ದರೆ ಆಶ್ಚರ್ಯವೇನು? ಅತ್ತ ಸೇಲೀಮನೂ ಮಾನಸಿಂಹನ ಮೇಲೆ ಬಹಳ ಸಿಟ್ಟಾಗಿದ್ದನು; ತನ್ನ ಹೆಂಡತಿಯಾದ ಜೋಧಬಾಯಿಯನ್ನೂ, ಮಗನಾದ ಖುಸ್ರುವನ್ನೂ ಮನೆಯಲ್ಲಿಟ್ಟುಕೊಂಡು, ತನಗೆ ಪಟ್ಟವು ದೊರೆ ಯದೆ ತನ್ನ ಮಗ ಖುಸ್ರುವಿಗೆ ದೊರೆಯುವಂತೆ ಮಾನಸಿಂಹನು ಯತ್ನಿಸುವ ನೆಂಬದರ ನಂಬಿಗೆಯಾದ ಬಳಿಕ ಸೇಲೀಮನು ತನ್ನ ಬೀಗನ ಮೇಲೆಯಾ ದರೂ ಯಾಕೆ ಸಿಟ್ಟಾಗಬಾರದು? ಹೀಗೆ ಆ ಬೀಗಬೀಗರು ಪರಸ್ಪರ ಕಲು ಷಿತ ಮನಸ್ಕರಾಗಿರುವಾಗ ಸೇಲೀಮನು ಆ ಪತ್ರವನ್ನು ಬರೆದಿದ್ದನು. ಅದನ್ನು ಓದಿ ಮಾನಸಿಂಹನಿಗೆ ಆಪರಿ ಸಿಟ್ಟು ಬಂದಿತ್ತು; ಅಂಥ ಆ ಪತ್ರದ ಲ್ಲಿಯ ಸಂಗತಿಯೇನೆಂಬದನ್ನು ತಿಳಿಸುವದಕ್ಕಾಗಿ ಇದ್ದಕ್ಕಿದ್ದಹಾಗೆ ಅದನ್ನು ಇದರಡಿಯಲ್ಲಿ ಬರಿಯುವೆವು.

"ಅಂಬರೇಶ್ವರ, ನೀವು ನಮ್ಮ ತೀರ ಹತ್ತರದ ಹತ್ತುಗಡೆಯ ಆಪ್ತ ರಾಗಿರುವಿರಿ. ಈ ಆಪ್ತತ್ವದ ಬಳಿಕೆಯು ಅವಶ್ಯದ ಸರ್ವಸಾಧಾರಣ ಕೆಲ ಸದ ಮಟ್ಟಿಗೆ ಆಗದೆ, ಜನಾನಖಾನೆಯೊಳಗಿನ ರಂಗಮಹಾಲಿನಲ್ಲಿಯೂ ಅದರ ಬಳಿಕೆಯಾಗಹತ್ತಿದೆ. ಆದರೆ ಇನ್ನುಮುಂದೆ ಆಗಬೇಕಾಗಿರುವ ಹಿಂದುಸ್ಥಾನದ ಬಾದಶಹನ ಹಿತವಿಘಾತಕ ಸಂಗತಿಗಳಿಗೆ ಹೀಗೆ ನಿಮ್ಮ ಸಂಬಂಧವಾಗುತ್ತಿರುವದು ಎಂಥ ಉದ್ಧತತನವು! ಇದರ ವಿಚಾರವನ್ನು ನೀವು ಮಾಡಿರುವಂತೆ ತೋರುವದಿಲ್ಲ. ನನ್ನ ಹೆಂಡತಿಯೂ, ನನ್ನ ಮಗನೂ ನನ್ನ ಅಪ್ಪಣೆಯನ್ನು ಮೀರಲಿಕ್ಕೆ ಹವಣಿಸುತ್ತಿರುವದಕ್ಕೆ ನೀವೇ ಕಾರಣರು. ಚಿಕ್ಕಂದಿನಿಂದಲೂ ಮೊಗಲರ ದಾಸರಾಗುವದರಲ್ಲಿಯೇ ನೀವು ಮೈ ಉಂಡಿ ರುವಿರಿ; ಹಾಗೆ ದಾಸರಾಗದಿದ್ದರೆ ನಿರ್ವಾಹವೇ ಇಲ್ಲವೆಂದು ದೇವರು

ನಿಮ್ಮ ಹಣೆಯಲ್ಲಿ ಸ್ಪಷ್ಟವಾಗಿ ಬರೆದಿಟ್ಟಿರುವನು. ಇಂಥ ನಿಮ್ಮ ಈ ಅಪರಾಧವು ಬೇರೆ ಬಗೆಯದಾಗಿದ್ದು, ಅದಕ್ಕಾಗಿ ಸದ್ಯದ ಬಾದಶಹರು ಕ್ಷಮೆ ಮಾಡಿದರೂ ಮುಂದೆ ಬರುವ ಬಾದಶಹನು ಅದನ್ನು ಎಂದೂ ಕ್ಷಮಿಸಲಾರನು. ಹಾವಿಗೆ ಹಾಲುಣಿಸಿದರೂ ಅದು ವಿಷವೇ ಆಗುವಂತೆ, ಮೊಗಲ ಬಾದಶಹರಿಂದಾದ ನಿಮ್ಮ ಕಲ್ಯಾಣವು ಮೊಗಲ ಬಾದಶಹರ ಹಿತವಿಘಾತವಾಗುವಲ್ಲಿಯೇ ಪರಿಣಮಿಸುತ್ತಿರುವದು! ಶಹಾಜಾದಾ ಖುಸ್ರುವನ್ನು, ಪ್ರತಿಬಂಧದಲ್ಲಿರಿಸಿದಂತೆ ನಿಮ್ಮ ಅಂಬರ ರಾಜಧಾನಿಯಲ್ಲಿ ಇಟ್ಟುಕೊಳ್ಳಲಿಕ್ಕೆ ನಿಮಗೆ ಯಾವಬಗೆಯ ಅಧಿಕಾರವೂ ಸರ್ವಥಾ ಇರುವದಿಲ್ಲ. ಇಂದಿನ ನನ್ನ ಈ ಪತ್ರದಿಂದ ಬುದ್ಧಿಪೂರ್ವಕವಾಗಿ ಮುಚ್ಚಿಕೊಂಡಿರುವ ನಿಮ್ಮ ಕಣ್ಣುಗಳು ಪಳಕ್ಕನೆ ತೆರೆದಾವೆಂದು ನಾನು ಬಹಳವಾಗಿ ಆಶಿಸುವೆನು. ನನ್ನ ಹೆಂಡತಿಯನ್ನೂ, ಮಗನನ್ನೂ ಕೂಡಲೆ ಕಳಿಸಿಕೊಡಿರಿ. ನನ್ನ ಅಪ್ಪಣೆಯಂತೆ ಕೂಡಲೆ ವ್ಯವಸ್ಥೆಯಾಗಲೇಬೇಕು. ಇತಿ-

ಶಹಾಜಾದಾ ಸುಲ್ತಾನ ನೂರ ಮಹಮ್ಮದ ಸೇಲೀಮ.

ಮಾನಸಿಂಹನು ಒಮ್ಮೆ ಈ ಪತ್ರವನ್ನು ಓದಿದಾಗ, ಅದು ಯಾರಾದರೂ ಮೋಸದಿಂದ ಬರೆದದ್ದಾಗಿರಬಹುದೆಂದು ತರ್ಕಿಸಿ, ಅದನ್ನು ಮತ್ತೊಮ್ಮೆ ಓದಿದನು. ಆದರಿಂದಲೂ ಸಮಾಧಾನವಾಗದೆ ಮೂರನೆಯ ಸಾರೆ ಪತ್ರ ಓದಿ ನೋಡಿ ಸೂಕ್ಷ್ಮರೀತಿಯಿಂದ ಅದನ್ನು ಅವಲೋಕಿಸಿದನು; ಆಗ ಅಕ್ಷರಗಳು ಸೇಲೀಮನವು, ಭಾಷೆಯು ಸೇಲೀಮನದು, ಪತ್ರದ ಬುಡದಲ್ಲಿಯ ಸಹಿಯು ಸೇಲೀಮನದು, ಪತ್ರಕ್ಕೆ ಮಾಡಿದ ಮುದ್ರೆಯೂ ಸೇಲೀಮನದು! ಆದ್ದರಿಂದ ಈ ಪತ್ರವು ಸೇಲೀಮನು ಬರೆದದ್ದೇ ಎಂದು ಮಾನಸಿಂಹನು ನಿಶ್ಚಯಿಸಿದನು. ಆತನ ಹೃದಯವು ಪುನಃ ಪುನಃ ಕ್ರೋಧಸಂತಪ್ತವಾಗುತ್ತಲಿತ್ತು. ಇಂಥ ಅಪಮಾನವು ಆತನ ಆಯುಷ್ಯದಲ್ಲಿ ಎಂದೂ ಆಗಿದ್ದಿಲ್ಲ. ಆತನು ಸ್ವಾಭಿಮಾನಪೂರ್ಣ ದೃಷ್ಟಿಯಿಂದ ಎದುರಿಗೆ ನೋಡುತ್ತ ದಪ್ಪನೆ ನೆಲಕ್ಕೆ ಕಾಲು ಅಪ್ಪಳಿಸಿ ತೀವ್ರಸ್ವರದಿಂದ—"ಸೇಲೀಮ, ನೀನು ಇಷ್ಟು ಉದ್ಧತನೂ, ಅಭಿಮಾನಿಯೂ ಆದೆಯೇನು? ರಾಜಾ ಮಾನಸಿಂಹನು ಮೊಗಲರ ದಾಸನೋ? ಈ ಮಾನಸಿಂಹನು ಇಲ್ಲದಿದ್ದರೆ ಮೊಗಲರು ನೀವು ಪಠಾಣರಂತೆ ಕಾಲದ ತೀವ್ರ ಪ್ರವಾಹದಲ್ಲಿ ಎತ್ತಿಂದೆತ್ತೋ

ಹರಿದು ಹೋಗುತ್ತಿದ್ದಿರಿ!! ಮಹಾ ಪರಾಕ್ರಮಿಯೂ, ಈ ದೀನ ದುನಿಯೆಯ ಮಾಲಕನೂ, ಆದ ಅಕಬರ ಬಾದಶಹನು ಕೂಡ ಆಡುವ ಸಾಹಸ ಮಾಡದಂತಹ ಮಾತುಗಳನ್ನು ಇಂದು ನೀನು ನನಗೆ ಬರೆದು ಕಳಿಸುವೆಯಾ? ಸೇಲೀಮಾ, ಬಂಗಾಲ-ಬೀಹಾರ-ಓಡಿಸಾ ಈ ಮೂರು ಪ್ರಾಂತಗಳಲ್ಲಿದ್ದು, ಮೊಗಲರಾದ ನಿಮ್ಮನ್ನು ಯಾವಾಗಲೂ ಪೀಡಿಸಿ ಸಾಕು ಸಾಕು ಮಾಡಿಬಿಟ್ಟಿದ್ದ ಪಠಾಣರ ರಾಜ ಸಿಂಹಾಸನವನ್ನು ಯಾರು ಇಲ್ಲದಂತೆ ಮಾಡಿದರು? ಸಿಂಹನಂತೆ ಶಕ್ತಿವಂತರಾಗಿರುವ ಅಫಗಾಣ ಜನರು ದುರ್ಭೇದ್ಯಗಳಾದ ಪರ್ವತಗಳ ಸಾಲುಗಳ ಗೋಡೆಯಿಂದ ತಮ್ಮ ಮಾತೃಭೂಮಿಯನ್ನು ಸುರಕ್ಷಿತವಾಗಿ ಮಾಡಿಕೊಂಡಿರಲು, ಆ ಅಫಗಾಣರ ಸಾಮರ್ಥ್ಯವನ್ನು ಬಗ್ಗುಬಡಿದು ಅವರ ಸ್ವಾತಂತ್ರ್ಯವನ್ನು ಯಾರು ಕಸಿದುಕೊಂಡರು ಸೇಲೀಮ! ನಿರ್ಮಲಾಕಾಶದೊಳಗಿನ ನಿಷ್ಕಲಂಕ ಚಂದ್ರನಂತೆ ಯಾವತ್ತು ರಾಜಸ್ಥಾನಕ್ಕೆ ಭೂಷಣ ಭೂತನಾಗಿರುವ ಮಹಾರಾಣಾ ಪ್ರತಾಪಸಿಂಹನು ಅರ್ಧಕ್ಕಿಂತ ಹೆಚ್ಚು ಹಿಂದುಸ್ಥಾನವನ್ನು ತನ್ನ ಪರಾಕ್ರಮದಿಂದ ಗದಗಮಿಸಿ ಬಿಟ್ಟಿರುವಾಗ, ನನ್ನ ಸಹಾಯವಿಲ್ಲದಿದ್ದರೆ ಬಾದಶಾಹಿಯ ಮಾನವು ಯಾರಿಗೆ ದೊರೆಯುತ್ತಿತ್ತು ಹೇಳು ನೋಡೋಣ! ಹಿಂದುಸ್ಥಾನದ ಹಾಗು ಹಿಂದುಗಳ ಗೌರವ ಸ್ವರೂಪನಾದ ಆ ರಾಣಾಪ್ರತಾಪಸಿಂಹನು ಭರದಿಂದ ಯಾವತ್ತು ಮೊಗಲರನ್ನು ಕುರಿಗಳಂತೆ ತುಂಡರಿಸುತ್ತಿರುವಾಗ, ಆ ವೀರಕೇಸರಿಯನ್ನು ಯಾರು ನಿಜಧಾಮಕ್ಕೆ ಕಳಿಸಿದರು? ಸೇಲೀಮಾ, ಆಗ ನೀನು ಅಸಂಖ್ಯ ಸೈನ್ಯವನ್ನು ತಕ್ಕೊಂಡು ಆ ನರಕೇಸರಿಯ ಮೇಲೆ ಏರಿಹೋದದ್ದರ ಉಪಯೋಗವು ಸ್ವಲ್ಪವಾದರೂ ಆಯಿತೇ? ಕೃತಘ್ನಾ, ಚಿತ್ತೂರ ವಿಜಯದ ನಂತರ ನನ್ನ ಮಸ್ತಕವನ್ನು ಅಲಂಕರಿಸುತ್ತಿದ್ದ ರಾಜಸ್ಥಾನದ ಮುಕುಟವನ್ನು ನಾನು ಎಷ್ಟು ಆನಂದದಿಂದ ನಿನ್ನ ತಲೆಗೆ ಹಾಕಿದೆನೆಂಬದನ್ನು ಮರೆತೆಯಾ? ಈ ದಂಡಯಾತ್ರೆಯ ಯಾವತ್ತು ಶ್ರೇಯಸ್ಸು ನಿನ್ನದೆಂದು ನಾನು ಅಕಬರಬಾದಶಹರ ಮುಂದೆ ಹೇಳಿದಾಗ ನೀನು ಅಲ್ಲಿ ಇದ್ದಿಲ್ಲವೆ? ಹಾಯ್! ಕಡೆಗೆ ನೀನು ಆ ಎಲ್ಲ ಉಪಕಾರಗಳಿಗಾಗಿ ಪ್ರತ್ಯುಪಕಾರವನ್ನು ಈ ಬಗೆಯಾಗಿ ಮಾಡಬಹುದೇ? ಸೇಲೀಮಾ, ರಜಪೂತರ ಉಜ್ವಲ ಕೀರ್ತಿಗೆ ಕಲಂಕವನ್ನುಂಟು ಮಾಡಿಕೊಂಡು ಮೊಗಲರ ದಾಸ್ಯವನ್ನು ಒಪ್ಪಿಕೊಂಡ,

ಹಾಗು ಕಾಬೂಲದಿಂದ ಓರಿಸಾ ಪ್ರಾಂತದವರೆಗೆ ಹಿಂದುಸ್ಥಾನವನ್ನು ತನ್ನ ಬಾಹುಬಲದಿಂದ ಮೊಗಲರ ಕೈಸೇರಿಸಿಕೊಟ್ಟಿರುವ ಆ ಮಾನಸಿಂಹನು ನಾನು ಪ್ರಯತ್ನ ಮಾಡಿದರೆ ನಿಮ್ಮ ಸಿಂಹಾಸನವು ತತ್ತರಿಸಿ ಉರುಳಿ ಬಿದ್ದು, ನಿಮಗೆ ನಿಲ್ಲಲಿಕ್ಕೂ ಸ್ಥಳವಿಲ್ಲದ ಹಾಗಾದೀತೆಂಬ ವಿಚಾರವು ಎಂದೂ ನಿಮ್ಮ ಮನಸ್ಸಿನಲ್ಲಿ ಬಂದಿಲ್ಲವೆ? ದ್ವೇಷ, ತಿರಸ್ಕಾರ, ಸೇಡು ಎಂಬೀ ಮೂರೂ ಶಸ್ತ್ರಗಳನ್ನು ಮಾನಸಿಂಹನು ಕುಶಲತೆಯಿಂದ ಪ್ರಯೋಗಿಸುವದನ್ನು ನೋಡಿದರೆ, ನೀವು ಬಾಯಿಬಾಯಿಬಿಟ್ಟೀರಿ! ನಿನ್ನ ಈ ಪತ್ರದಿಂದ ನನಗೆ ಆ ಶಸ್ತ್ರಗಳನ್ನು ಪ್ರಯೋಗಿಸುವ ಪ್ರಸಂಗವು ಬಂದುಬಿಟ್ಟಿದೆ; ಅಂದಬಳಿಕ ಅದರ ಅನುಭವವು ನಿನಗೆ ಬೇಗನೆ ಆದೀತು!

ಇಷ್ಟು ಮಾತಾಡಿದರೂ ಮಾನಸಿಂಹನಿಗೆ ಸಮಾಧಾನವಾಗಲಿಲ್ಲ. ಕೆಲಹೊತ್ತು ಸುಮ್ಮನಿದ್ದು ಆತನು ಮತ್ತೆ ದೃಢಸ್ವರದಿಂದ—"ಮೊಗಲರ ದಾಸನೆಂದು ಅವನು ನನಗೆ ಹೇಗೆ ಅಂದಿರಬಹುದು! ಈ ಅಪಮಾನವನ್ನು ನಾನು ಹೇಗೆ ಸಹಿಸಲಿ? ಸೇಲೀಮಾ, ಇನ್ನು ನಾನು ವಿಶ್ವಪ್ರಯತ್ನ ಮಾಡಿ ನೀನು ದಿಲ್ಲಿಯ ಸಿಂಹಾಸನವೇರದಂತೆ ಮಾಡಿ, ಆ ಸಿಂಹಾಸನದ ಮೇಲೆ ಖುಸ್ರುವನ್ನು ಕೂಡಿಸುವೆನು. ಖುಸ್ರುವು ಆಜನ್ಮ ನನಗೆ ಅಂಕಿತನಾಗಿರುವ ಹಾಗೆ ನೀನು ಇರಲಾರೆ. ಸದ್ಯಕ್ಕೆ ಅಕಬರ ಬಾದಶಹನು ವೃದ್ಧನಾಗಿ ಬೇನೆಯಿಂದ ಜರ್ಜರನಾಗಿರುವನು. ಆತನಿಂದ ಯಾವ ಕೆಲಸವೂ ಆಗುವ ಹಾಗಿಲ್ಲ. ಆತನ ಶಕ್ತಿಶಾಲಿಗಳಾದ ದೋರ್ದಂಡಗಳು ಈಗ ಶಕ್ತಿಹೀನವಾಗಿರುವವು. ಆತನ ಮನಸ್ಸಿಗೆ ಉತ್ಸಾಹವಿಲ್ಲ. ಆತನ ಬುದ್ಧಿಯು ವಿಕಲವಾಗಿರುವದು; ಆತನ ಪ್ರತಿಜ್ಞೆಯು ಯಾವಾಗ ನಾಶವಾಯಿತೆಂಬದು ಆತನಿಗೇ ಗೊತ್ತಾಗಿರುವದಿಲ್ಲ. ಇಂಥವನಿಂದ ಪ್ರತಿಕಾರವೇನು ಆಗಬೇಕು? ನಾನು ಮಾಡಬಾರದ ಯತ್ನಮಾಡಿ ಅಕಬರ ಬಾದಶಹನ ತರುವಾಯ ಖುಸ್ರುವನ್ನೇ ಪಟ್ಟಕ್ಕೆ ಕುಳ್ಳಿರಿಸುವೆನು" ಎಂದು ನುಡಿದು ಸೇಡು ತೀರಿಸುವ ವಿಕಾರದಿಂದ ಸೇಲೀಮನನ್ನುದ್ದೇಶಿಸಿ—ಸೇಲೀಮಾ, ಹೊತ್ತು ಬಂದರೆ ಈ ಖಡ್ಗವನ್ನೇ—ಚಿತ್ತೂರನ್ನು ಗೆದ್ದದ್ದಕ್ಕಾಗಿ ನಿನ್ನ ತಂದೆಯು ಕೊಟ್ಟಿದ್ದ ವಜ್ರದ ಹಿಡಿಕೆಯ ಈ ಖಡ್ಗವನ್ನೇ ನಿನ್ನ ಹೃದಯದಲ್ಲಿ ಚುಚ್ಚಿ ಹೊಳಿಡಲಿಕ್ಕೆ ನಾನು ಹಿಂದೆ ಮುಂದೆ ನೋಡಲಿಕ್ಕಿಲ್ಲ! ಇನ್ನು ನಿನ್ನ ಈ ಪತ್ರದ ಕಾಲಲ್ಲಿ ನಿನ್ನ

ಶೋಚನೀಯ ಸ್ಥಿತಿಯು ಏನಾಗುವದೆಂಬದನ್ನು ಅನುಭವದಿಂದ ನೋಡು. ಸೇಲೀಮಾ, ನನ್ನ ತಂಗಿಯ ವೈಧವ್ಯಕ್ಕಾಗಿ ಅಂಜಿ ನಾನು ನಿನ್ನ ಪ್ರಾಣಹರಣ ಮಾಡದಿದ್ದರೂ, ಇನ್ನು ಮೇಲೆ ಪ್ರತಿ ಒಂದು ಕೆಲಸದಲ್ಲಿ ನಿನಗೆ ವಿಘ್ನವನ್ನುಂಟು ಮಾಡುವೆನು; ನಿನ್ನ ಪ್ರತಿ ಒಂದು ಸಣ್ಣ-ಪುಟ್ಟ ತಪ್ಪನ್ನು ಬಾದಶಹರ ಕಿವಿಯಮೇಲೆ ಹಾಕಿ ನಿನ್ನ ವಿಷಯಿಕ ಅಪ್ರೀತಿಯನ್ನು ಅವರಲ್ಲಿ ಹೆಚ್ಚಿಸುವೆನು. ನನ್ನ ಪ್ರಿಯ ಜೋಧೆಯು ರಾಜಪತ್ನಿಯೆನಿಸಿಕೊಳ್ಳುವದಕ್ಕಿಂತ ರಾಜಮಾತೆಯೆನಿಸಿಕೊಳ್ಳಬೇಕೆಂಬ ಯತ್ನವನ್ನು ನಾನು ಮನಃಪೂರ್ವಕವಾಗಿ ಮಾಡುವೆನು.

ಈ ಮೇರೆಗೆ ಮಾನಸಿಂಹನು ಮಾತಾಡುತ್ತಿರಲು, ಹೊರಗೆ ಯಾರೋ ಆತನನ್ನು ಕುರಿತು—"ಮಹಾರಾಜ, ತಾವು ಇಷ್ಟು ದೀರ್ಘ ಚಿಂತೆಮಾಡುವ ಕಾರಣವಿಲ್ಲ. ತಮ್ಮ ಮನೋದಯವನ್ನು ಖುದಾನು ಬೇಗನೆ ಸುಲಭವಾಗಿ ಕೈಗೂಡಿಸುವನು" ಎಂದು ನುಡಿದರು; ಮಾನಸಿಂಹನು ಕೆಚ್ಚೆದೆಯವನಾದರೂ, ತನ್ನ ವಿಚಾರವನ್ನನುಲಕ್ಷಿಸಿ ಹೀಗೆ ಉತ್ತರ ಕೊಟ್ಟದ್ದಕ್ಕಾಗಿ ಅಸ್ವಸ್ಥನಾದನು. ಆತನಿಗೆ ಆಶ್ಚರ್ಯವೂ ಆಯಿತು. ಆ ಕ್ಷತ್ರಿಯ ವೀರನ ನಡಕಟ್ಟಿನಲ್ಲಿ ಯಾವಾಗಲೂ ತೀಕ್ಷ್ಣ ಧಾರೆಯದೊಂದು ಕಿರಿಗತ್ತಿಯು ಇರುತ್ತಿತ್ತು. ಮೇಲಿನ ಶಬ್ದಗಳು ಆತನ ಕಿವಿಗೆ ಬಿದ್ದಕೂಡಲೆ ಆತನು ಆ ಕಿರಿಗತ್ತಿಯನ್ನು ಬಲಗೈಯಲ್ಲಿ ಗಟ್ಟಿಯಾಗಿ ಹಿಡಿದು ಬಾಗಿಲ ಚಿಲಕಕ್ಕೆ ಕೈಹಾಕಿ ತೀವ್ರ ಸ್ವರದಿಂದ—"ಯಾರವರು" ಎಂದು ನುಡಿದು ದಡಲ್ಲನೆ ಬಾಗಿಲು ತೆರೆದನು. ಕೂಡಲೆ ಸರ್ವಾಂಗವನ್ನು ಅಚ್ಚ ಕರಿಯ ವಸ್ತ್ರದಿಂದ ಮುಚ್ಚಿಕೊಂಡಿದ್ದ ಒಬ್ಬ ಭೀಮಕಾಯದ ಪುರುಷನು ಮಾನಸಿಂಹನ ಎದುರಿಗೆ ಬಂದು ನಿಂತು ಮೃದುಸ್ವರದಿಂದ—"ಅದಾಬ ಜನಾಬ! ನಾನು ತಮ್ಮ ಆಪ್ತನಿದ್ದು, ಸ್ಯಾರಿಬಾನುವಿನ ತಂದೆಯಿರುತ್ತೇನೆ. ನನ್ನ ಗುರುತು ಇನ್ನೂ ಸಿಗಲಿಲ್ಲವೋ?" ಎಂದು ಕೇಳಲು, ಕೂಡಲೆ ಮಾನಸಿಂಹನಿಗೆ ಆ ಬಂದ ಮನುಷ್ಯನ ಗುರುತು ಹತ್ತಿತು. ಇಬ್ಬರೂ ಆನಂದದಿಂದ ಒಬ್ಬರನ್ನೊಬ್ಬರು ಆಲಿಂಗಿಸಿದರು. ಬಳಿಕ ಮಾನಸಿಂಹನು ಬಂದ ಗೃಹಸ್ಥನನ್ನು ಮೊದಲು ಮಂಚದ ಮೇಲೆ ಕುಳ್ಳಿರಿಸಿ, ಕೆಲಹೊತ್ತಿನ ಮೇಲೆ ತಾನೂ ಕುಳಿತು ಆನಂದದಿಂದ ಆತನನ್ನು ಕುರಿತು—"ಖಾನಸಾಹೇಬ, ನೀವೇ ಏನು ನನ್ನ ಆ

ಗುಪ್ತ ಭಾಷಣಕ್ಕೆ ಉತ್ತರ ಕೊಟ್ಟವರು?" ಎಂದು ಕೇಳಲು, ಖಾನಸಾಹೇಬರು ನಕ್ಕು—"ಹೌದು, ನಾನೇ ಉತ್ತರ ಕೊಟ್ಟೆನು; ಆದರೆ ತಮ್ಮಂಥ ವೀರಪುರುಷರು, ಮೇಲೆ ಮುತ್ಸದ್ದಿಗಳು ಇಷ್ಟು ವೈಮನಸ್ಸಿನಿಂದ ಇಷ್ಟು ಗಟ್ಟಿಯಾಗಿ ಮಾತಾಡುವದು ಯೋಗ್ಯವಲ್ಲ." ಎಂದು ನಗನಗುತ್ತ ಮಾನಸಿಂಹನ ಹೃದಯಕ್ಕೆ ವಾಗ್ಬಾಣ ಪ್ರಯೋಗಮಾಡಲು, ಮಾನಸಿಂಹನು ಅದರಿಂದ ಸಿಟ್ಟಾಗದೆ, ತನ್ನ ಅಜಾಗರೂಕತೆಗಾಗಿ ನಾಚಿದನು. ಕೆಲಹೊತ್ತು ಇಬ್ಬರೂ ಸುಮ್ಮನೆ ಕುಳಿತುಕೊಂಡರು. ಬಳಿಕ ಮಾನಸಿಂಹನು ನಿಟ್ಟುಸಿರು ಬಿಟ್ಟು ಸೇಲೀಮನ ಆ ಪತ್ರವನ್ನು ಖಾನಸಾಹೇಬನ ಕೈಯಲ್ಲಿ ಕೊಟ್ಟು ಪಶ್ಚಾತ್ತಾಪಪೂರ್ಣ ಸ್ವರದಿಂದ—" ನನಗೆ ಸಿಟ್ಟು ಬರುವಂಥ ಈ ಸ್ಪಷ್ಟ ಕಾರಣವು ನನ್ನ ಕಣ್ಣಮುಂದಿರಲು, ನಾನು ವೈಮರೆತು ಹೆಚ್ಚು ಕಡಿಮೆ ನಾಲ್ಕು ಮಾತಾಡಿದ್ದರೆ ಅಪರಾಧಿಯಾಗುವೆನೇನು ಖಾನಸಾಹೇಬ?" ಎಂದು ಕೇಳಲು, ಖಾನನು ಮಾನಸಿಂಹನಿಗೆ ಏನೂ ಉತ್ತರ ಕೊಡದೆ ಆ ಪತ್ರವನ್ನು ಮನಸ್ಸುಗೊಟ್ಟು ಓದಿ ನಿಟ್ಟುಸಿರು ಬಿಟ್ಟು ಆತನನ್ನು ಕುರಿತು—"ಹ! ಅಂತೇ ನೀವು ಹಾಗೆ ಮಾತಾಡಿದಿರಿ! ಸೇಲೀಮನು ಈಗ ದಿನದಿನಕ್ಕೆ ಹೆಚ್ಚು ಹೆಚ್ಚು ತಾಳಗೆಡುತ್ತಲಿದ್ದಾನೆ. ಈ ಪತ್ರ ಬರೆಯುವಾಗ ಆತನು, ಅಕಬರ ಬಾದಶಹರು ಇನ್ನೂ ಬದುಕಿ ಇರುವರೆಂಬ ಮಾತನ್ನು ಲಕ್ಷಿಸುವದು ಉಚಿತವಾಗಿತ್ತು; ಅದರಂತೆ, ನೀವು ಬಾದಶಹರ ಬಲಗೈ ಎಂಬದನ್ನಾದರೂ ವಿಚಾರಿಸಬೇಕಾಗಿತ್ತು."ಎಂದು ಹೇಳಿದನು. ಖಾನನು ಅರ್ಧಮರ್ಧ ಸಂಗತಿಯನ್ನು ಕೇಳಿದ್ದರಿಂದಲೇ ಮಾನಸಿಂಹನು ಆತನಿಗೆ ಆ ಪತ್ರವನ್ನು ತೋರಿಸಿದನು; ಇಲ್ಲದಿದ್ದರೆ ಆ ಪತ್ರವನ್ನು ಆತನು ಯಾರಿಗೂ ಎಂದಿಗೂ ತೋರಿಸುತ್ತಿದ್ದಿಲ್ಲ; ಯಾಕಂದರೆ ತನಗಾದ ಅಪಮಾನವನ್ನು ತೇಜಸ್ವಿಯಾದ ಯಾವ ವ್ಯವಹಾರ ಚತುರನು ಮಂದಿಯ ಮುಂದೆ ಹೇಳಬಹುದು? ಈಗಾದರೂ ಖಾನನು ಆ ಪತ್ರದ ಸಂಬಂಧದಿಂದ ಹೆಚ್ಚಿಗೆ ಚರ್ಚಿಸಬಾರದೆಂದು ತಿಳಿದು ಆತನ ಲಕ್ಷವನ್ನು ಎರಡನೆಯ ಕಡೆಗೆ ಒಯ್ಯುವದಕ್ಕಾಗಿ ಮಾನಸಿಂಹನು ಆತನನ್ನು ಕುರಿತು—

ಮಾನಸಿಂಹ—ಖಾನಸಾಹೇಬ, ಇದೇನು ಇಂದು ಹೊಸರೀತಿಯು! ಇಷ್ಟು ರಾತ್ರಿಯಲ್ಲಿ ಇಂಥ ಮಳೆಯಲ್ಲಿ ಎತ್ತ ಕಡೆಗೆ ಹೊರಟಿರುವಿರಿ? ಪ್ರವಾಸಕ್ಕೆ ಇದು ಯೋಗ್ಯಕಾಲವೇ?

ಖಾನ—(ಗಂಭೀರ ಸ್ವರದಿಂದ)ರಾಜಾಜೀ, ಮಹತ್ವದ ಕೆಲಸವಿದ್ದದ ರಿಂದಲೇ ಇಷ್ಟು ರಾತ್ರಿಯಲ್ಲಿ ಇಂಥ ಮಳೆಯೊಳಗೆ ನಿಮ್ಮಕಡೆಗೆ ಬಂದೆನು. ಅಕಬರಬಾದಶಹರ ಬೇನೆಯು ಸ್ವಲ್ಪ ಗುಣವಾಗುತ್ತಿರುವಾಗ, ಶಹಾಜಾದಾ ದಾನಿಯಲನು ಮಿತಿಮೀರಿ ಸೆರೆಕುಡಿದು ಅಕಾಲದಲ್ಲಿ ದಕ್ಷಿಣದೊಳಗೆ ಮರಣ ಹೊಂದಿದ ಸುದ್ದಿಯು ಬಂದಿತು. ಈ ಪುತ್ರಶೋಕದ ವಾರ್ತೆಯಿಂದ ಬಾದಶ ಹರು ಮತ್ತೆ ಹಾಸಿಗೆ ಹಿಡಿದರು. ದಾನಿಯಲನ ಮೇಲೆ ಬಾದಶಹರ ಪ್ರೀತಿಯು ಎಷ್ಟು ಇತ್ತೆಂಬದನ್ನು ತಮಗೆ ಹೇಳುವ ಕಾರಣವಿಲ್ಲ.

ಮಾನಸಿಂಹ—(ಖಿನ್ನ ಮುದ್ರೆಯಿಂದ) ಖಾನಸಾಹೇಬ, ಈ ಜಗತ್ತಿ ನಲ್ಲಿ ಒಳ್ಳೆಯ ಜನರೇ ದೇವರಿಗೆ ಬೇಕಾಗುತ್ತಾರೆನ್ನುವಹಾಗೆ ನನಗೆ ತೋರು ತ್ತದೆ. ಈ ಗರ್ವಿಷ್ಠ ಸೇಲೀಮನಿಗೆ ದಾನಿಯಲನನ್ನು ಹೋಲಿಸಿ ನೋಡಿ ದರೆ, ಶಾಹಾಜಾದಾ ದಾನಿಯಲನು ಎಷ್ಟು ಒಳ್ಳೆಯವನು! ಆತನ ಶ್ರೇಷ್ಠತ್ವ, ಉದಾತ್ತತೆ, ನಿರ್ಮತ್ಸರವೃತ್ತಿ ಮೊದಲಾದವುಗಳನ್ನು ನೋಡಿ, "ಈತನೇ ಮುಂದೆ ಬಾದಶಹನಾಗಲು ಯೋಗ್ಯನೆಂ"ದು ಬಹುಜನರು ಆಡಿ ದ್ದನ್ನು ನೀವು ಕೇಳಿಲ್ಲವೇ?

ಖಾನ—(ಔದಾಸೀನ್ಯದಿಂದ)ಇವೆಲ್ಲ ಸಂಗತಿಗಳನ್ನು ಲಕ್ಷಿಸಲಿಕ್ಕೆ ಸದ್ಯಕ್ಕೆ ಅವಕಾಶವಿಲ್ಲ ರಾಜಾಜಿ! ಇದಕ್ಕಿಂತಲೂ ತೀವ್ರಸ್ವರೂಪದ್ದೊಂದು ಸುದ್ದಿಯನ್ನು ತಕ್ಕೊಂಡು ನಾನು ಇಲ್ಲಿಗೆ ಬಂದಿದ್ದೇನೆ; ಸೇಲೀಮನು ಬಂಡು ಮಾಡಿ ಆಗ್ರಾಪಟ್ಟಣವನ್ನು ಸ್ವಾಧೀನಪಡಿಸಿಕೊಳ್ಳಲು ಹೊರಟಿರುವನಂತೆ. ಈ ಸುದ್ದಿಯನ್ನು ಕೇಳಿ ಬಾದಶಹರು ಆಗ್ರಾಕ್ಕೆ ಹೊರಡಲು ಸಿದ್ಧರಾಗುತ್ತಲಿ ದ್ದರು. ಅವರಿಗೆ ಈ ಮುಪ್ಪಿನಕಾಲದಲ್ಲಿ ಚಿತ್ತಸ್ವಾಸ್ಥ್ಯವು ದೊರೆಯಬಾರ ದೆಂದು ದೇವರ ಸಂಕೇತವಿದ್ದಹಾಗೆ ತೋರುತ್ತದೆ; ಆದರೆ ರಾಜಾಜೀ, ಇನ್ನು ಮುಂದೆ ನಾವು ಏನುಮಾಡತಕ್ಕದ್ದು?

ಈ ಅಜೀಮಖಾನನ ಪರಿಚಯವನ್ನು ನಾವು ಇನ್ನೂ ವಾಚಕರಿಗೆ ಚನ್ನಾಗಿ ಮಾಡಿಕೊಟ್ಟಿರುವದಿಲ್ಲ. ಪ್ರಸಂಗವಶಾತ್ ಆತನ ಹೆಸರನ್ನು ಮಾತ್ರ ಹಿಂದೆಯೊಮ್ಮೆ ಹೇಳಿರುತ್ತದೆ. ಈತನೊಬ್ಬ ಐದುಸಾವಿರ ಸೈನಿಕರ ಮನಸಬದಾರನಿದ್ದು, ಬಾದಶಹರ ಮುಖ್ಯ ಸೇನಾಪತಿಯಾಗಿದ್ದನು. ಈತನು ಖುಸ್ರುವಿನ ಹೆಂಡತಿ-ಪ್ಯಾರಿಬಾನುವಿನ ತಂದೆಯಾದದ್ದರಿಂದ,

ಮಾನಸಿಂಹನ ಬೀಗನಾದನೆಂದು ಬೇರೆ ಹೇಳುವಕಾರಣವಿಲ್ಲ. ಈತನಂಥ ಸಮರಕುಶಲರೂ, ಕಾರಸ್ಥಾನಿಗಳೂ, ಮಹಾವೀರರೂ ಆಗಿನ ಕಾಲದ ಅಮೀರ ಉಮರಾವರಲ್ಲಿ ಬಹು ಕ್ವಚಿತ್ತಾಗಿ ಇದ್ದರೆಂದು ಹೇಳಬಹುದು. ಈತನೂ, ಮಾನಸಿಂಹನೂ ಸ್ವಾರ್ಥಾಭಿಲಾಷೆಯಿಂದ ಸೇಲೀಮನ ಪಟ್ಟದ ಬಾಧ್ಯತೆಯನ್ನು ತಪ್ಪಿಸಿ, ಖುಸ್ರುವನ್ನು ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಬೇಕೆಂದು ಹವಣಿಸುತ್ತಿದ್ದರು. ಹೀಗೆ ಖುಸ್ರುವಿನ ಈ ಮಾವ—ಸೋದರಮಾವಂದಿರು ಮಾಡುವ ಪ್ರಯತ್ನವನ್ನು ನೋಡಿ ಸೇಲೀಮನು ಸ್ವಾಭಾವಿಕವಾಗಿಯೇ ಇವರಿಬ್ಬರ ಮೇಲೆ ಬೆಂಕಿಯು ಕಾರುತ್ತಿದ್ದನು. ಖುಸ್ರುವು ಬಾದಶಹನಾಗಬೇಕೆಂದು ಮಾನಸಿಂಹನು ಆತುರಪಡುವದಕ್ಕಿಂತ ಹೆಚ್ಚಾಗಿ ಅಜೀಮಖಾನನು ಆತುರಪಟ್ಟು ಮೇಲೆ ಹೇಳಿದಂತೆ ಆತನು ಮಾನಸಿಂಹನನ್ನು ಕುರಿತು—"ನಾವು ಇನ್ನುಮುಂದೆ ಏನು ಮಾಡಬೇಕು?" ಎಂದು ಪ್ರಶ್ನಮಾಡಿದನು. ಅದಕ್ಕೆ ಮಾನಸಿಂಹನು "ಇದರ ವಿಚಾರವನ್ನು ನಾಳಿಗೆ ಮಾಡೋಣವೆಂ"ದು ಹೇಳಿದ್ದರಿಂದ ನಿದ್ದೆಗೆಟ್ಟು ಕಂಗಾಲಾಗಿದ್ದ ಅವರಿಬ್ಬರು ವೀರರು ಆ ಅಪರಾತ್ರಿಯಲ್ಲಿ ಸ್ವಸ್ಥ ನಿದ್ದೆಮಾಡಬೇಕೆಂದು ಮಲಗಿಕೊಂಡರು.



## ೧೧ನೆಯ ಪ್ರಕರಣ

# ಸೇಲೀಮನೂ, ಜೋಧಬಾಯಿಯೂ.

ಇತ್ತ ಅಲಹಾಬಾದದ ಕೋಟೆಯೊಳಗಿನದೊಂದು ಗುಪ್ತ ದಿವಾಣಖಾನೆಯಲ್ಲಿ ಕುಳಿತು ಸುಲ್ತಾನ ಸೇಲೀಮನು ರಾತ್ರಿ ಯಾವದೋ ಒಂದು ದೀರ್ಘವಿಚಾರದಲ್ಲಿ ಮಗ್ನನಾಗಿದ್ದನು. ಆತನ ಚಿತ್ತವು ಅತ್ಯಂತ ಅಸ್ವಸ್ಥವಾಗಿತ್ತು. ಏನುಮಾಡಿದರೂ ಆತನಿಗೆ ವಿಚಾರದ ನೆಲೆಯು ಹತ್ತದೆ,

ಬರಬರುತ್ತ ಆತನ ಚಿತ್ತವು ಹೆಚ್ಚು ಹೆಚ್ಚು ಚಂಚಲವಾಗತೊಡಗಿತು. ಗಂಗಾ-ಯಮುನೆಗಳ ಸಂಗಮದ ಸ್ಥಾನದಲ್ಲಿ ಕಟ್ಟಿದ್ದ ಆ ಪ್ರಯಾಗಕ್ಷೇತ್ರದ ಕೋಟೆಯ ಬೆಳದಿಂಗಳ ಸುರಮ್ಯ ನೋಟದಿಂದ ಆತನ ಮನಸ್ಸಿಗೆ ಸರ್ವಥಾ ಶಾಂತಿಯು ಉಂಟಾಗಲೊಲ್ಲದು. ಹೀಗೆ ಬಹಳಹೊತ್ತು ಅಸ್ವಸ್ಥ ಚಿತ್ತ ದಿಂದ ಕಳೆದ ಬಳಿಕ ಸೇಲೀಮನು ತನ್ನ ಪಲ್ಲಂಗದ ಮೇಲೆ ಎದ್ದು ಕುಳಿತು ತೀವ್ರ ಸ್ವರದಿಂದ ತನ್ನ ಗುಲಾಮನನ್ನು ಕರೆದನು; ಆದರೆ ಆಗಿನ ಕಾವಲಿ ನಲ್ಲಿ ಒಬ್ಬನೂ ಗುಲಾಮನಿದ್ದಿಲ್ಲ. ಪ್ರಭುವು ಕರೆದದ್ದನ್ನು ಕೇಳಿ ಒಬ್ಬ ತಾರ್ತರೀ ರಮಣಿಯು ಒಳಗೆ ಬಂದು ಥರಥರ ನಡಗುತ್ತ ಸುಲ್ತಾನ ಸೇಲೀ ಮನಿಗೆ ಕುರ್ನಿಸಾತ ಮಾಡಿ—"ಜನಾಬಾಲಿಹುಕುಂ" ಎಂದು ನುಡಿಯಲು, ಸೇಲೀಮನು—"ಹೋಗು, ಇಸ್ಕಂದರೀ ಬೀಬಿಗೆ ಸಲಾಮು ಹೇಳು. ಆಕೆಯ ಸಂಗಡ ಸಾಕಿಯನ್ನೂ ಕಳಿಸಿಕೊಡು" ಎಂದು ಹೇಳಿದನು. ಅಪ್ಪ ಣೆಯನ್ನು ಕೇಳಿದ ಕೂಡಲೆ ತಾರ್ತರೀ ರಮಣಿಯು ಹೊರಟುಹೋದಳು. ಸ್ವಲ್ಪ ಹೊತ್ತು ಆಗುವದರೊಳಗೆ ಸಾಕಿಯು ಬಂಗಾರದ ಸುರಯಿಯಲ್ಲಿ ಶಿರಾಜಿ ಎಂಬ ಮದ್ಯವನ್ನು ತುಂಬಿಕೊಂಡು ಬಂದಳು; ಮತ್ತು ಆಕೆಯ ಬೆನ್ನಹಿಂದೆಯೇ ಇಸ್ಕಂದರಿಯೂ ಬಂದಳು. ಇಸ್ಕಂದರಿಯು ಉತ್ತಮ ಗಾಯಕಿಯೂ, ನೃತ್ಯ ಕಲಾಕುಶಲಳೂ ಆದ ವೇಶ್ಯೆಯು. ಆಕೆಯು ಸುಲ್ತಾನ ಸೇಲೀಮನ ನಿರುತ್ಸಾಹಿ ಮನಸ್ಸನ್ನು ಉತ್ಸಾಹಗೊಳಿಸುವ ಆತನ ಮೈತ್ರಿಣಿಯಾಗಿದ್ದು, ಅದೇ ಕೆಲಸಕ್ಕಾಗಿ ಆಕೆಯನ್ನು ಆಗ್ರಾದಿಂದ ಬುದ್ಧಿ ಪೂರ್ವಕವಾಗಿ ಕರೆದುಕೊಂಡು ಬರುವದಾಗಿತ್ತು. ಆಕೆಯು ಸೇಲೀಮನ ಬಳಿಗೆ ಹೋಗಿ ಪದ್ಧತಿಯಂತೆ ತಸಲೀಮಬಜಾಸಿದ ಬಳಿಕ ಕೋಮಲ ಸ್ವರ ದಿಂದ—''ಜಹಾಪನಾಹ! ಇಂದು ಖಾವಂದರಿಗೆ ದಾಸಿಯ ಸ್ಮರಣವು ಏಕೆ ಆಯಿತು? ಮೇಜಾಜ ಶರೀಫ್ ಹೈತೋ" ಎಂದು ಕೇಳಿದಳು. ಆಗ ಸೇಲೀಮನು ಖಿನ್ನತೆಯಿಂದ ನಕ್ಕು—ನಿಜವಾಗಿಯೇ, ಇಂದು ಯಾಕೋ ಮನಸ್ಸಿಗೆ ಸಮಾಧಾನವೇ ಆಗಲೊಲ್ಲದು; ಏನುಮಾಡಿದರೂ ನಿದ್ದೆ ಬರ ಲೊಲ್ಲದು; ಆದ್ದರಿಂದ ನಿನ್ನನ್ನು ಕರೆಸಿದೆನು. ಎಂದು ಹೇಳಿದನು. ಸುಚ ತುರಳಾದ ಇಸ್ಕಂದರೀ ಬೀಬಿಯು ಸೇಲೀಮನ ಮನೋದಯವನ್ನರಿತು ಸಾಕಿಯ ಕೈಯೊಳಗಿನ ಮದ್ಯದ ಸುರಯಿಯನ್ನು ಇಸಕೊಂಡು, ಅದರ

ಲ್ಲಿಯ ಸ್ವಲ್ಪ ಮದ್ಯವನ್ನು ಉತ್ಕೃಷ್ಟವಾದ ಪಾನಪಾತ್ರದಲ್ಲಿ ಸುರವಿ ಅದನ್ನು ನಗನಗುತ್ತ ಸೇಲೀಮನ ಮುಂದೆ ಹಿಡಿದಳು. ಸೇಲೀಮನು ಮದ್ಯಕ್ಕಾಗಿ ಚಡಪಡಿಸುತ್ತಲೇ ಇದ್ದನು. ಕೂಡಲೆ ಆತನು ಆ ಮದ್ಯವನ್ನು ಕುಡಿದು ಹಾಸ್ಯಪೂರ್ಣ ಸ್ವರದಿಂದ—"ಇಸ್ಕಂದರೀ, ಹೋಗು, ಹಿಂದಿನ ದಿವಾಣ ಖಾನೆಯಲ್ಲಿರುವ ಸುಂದರ ವೀಣೆಯನ್ನು ತಂದು ಸ್ವಲ್ಪ ಗಾಯನಮಾಡು, ನಿನ್ನ ಗಾಯನ ಕೇಳಬೇಕೆನ್ನುವಹಾಗೆ ನನಗೆ ಆಗಿದೆ. ಹೋಗು, ನನ್ನ ಪ್ರಿಯೇ ನಾಚಬೇಡ."

ಈ ಮೇರೆಗೆ ಹೇಳಲು, ಇಸ್ಕಂದರಿಯು—"ಇಂದು ಸೇಲೀಮನನ್ನು ಸಂತೋಷಪಡಿಸಿ ದೊಡ್ಡ ಇನಾಮು ಪಡೆಯಬೇಕೆಂ"ಬ ಉಬ್ಬಿನಿಂದ ತಟ್ಟನೆ ವೀಣೆಯನ್ನು ತಂದು ಸ್ವರಕೂಡಿಸಿ ಗಾಯನ ಮಾಡತೊಡಗಿದಳು. ಆಕೆಯು ಒಂದು ಪಲ್ಲವಿಯನ್ನು ಅನ್ನ ಅನ್ನುವದರೊಳಗಾಗಿ ಒಬ್ಬ ತಾರ್ತರಿ ರಮಣಿಯು ಅವಸರದಿಂದ ಅಲ್ಲಿಗೆ ಬಂದು "ಖಾವಿಂದ, ಶಹಾಜಾದೀ ಶಾಹಿ ಬೇಗಮರವರು ತಮಗೆ ಸಲಾಮು ಹೇಳಿರುವರು." ಎಂದು ಹೇಳಿದಳು. ಜೋಧಬಾಯಿಯನ್ನು ಯಾವತ್ತು ರಂಗಮಹಾಲಿನಲ್ಲಿ "ಶಾಹೀ ಬೇಗಮ" ಯೆಂತಲೇ ಎಲ್ಲರೂ ಕರೆಯುತ್ತಿದ್ದರು. ಈ ಸನ್ಮಾನದ ಹೆಸರನ್ನು ಸೇಲೀಮನೇ ತನ್ನ ಆ ಪ್ರಿಯ ಪತ್ನಿಗೆ ಕೊಟ್ಟಿದ್ದನು. ಈ ವರ್ತಮಾನವನ್ನು ಕೇಳಿ ಸೇಲೀಮನು ಚಟ್ಟನೆ ತನ್ನ ಪಲ್ಲಂಗದ ಮೇಲೆ ಎದ್ದು ಕುಳಿತು ಅಸ್ಪಷ್ಟ ಸ್ವರದಿಂದ—"ಯಾರು? ಶಾಹೀಬೇಗಮಳೋ? ಜೋಧಬಾಯಿಯೋ? ಇಷ್ಟು ರಾತ್ರಿಯಲ್ಲಿ ಅಂಬರ ರಾಜಧಾನಿಯನ್ನು ಬಿಟ್ಟು ಯಾಕೆ ಬಂದಿರಬಹುದು?" ಎಂದು ಗುಣಗುಟ್ಟಿದನು. ಆದರೆ ಆತನ ಈ ಗುಣಗುಟ್ಟುವಿಕೆಗೆ ಉತ್ತರ ಕೊಡುವವರಾರು? ಆತನು ಅತ್ತಿತ್ತ ನೋಡಿ ಗಾಯಕಿಗೆ ತಟ್ಟನೆ ಎದ್ದು ಹೋಗುವದಕ್ಕೆ ಸನ್ನೆ ಮಾಡಿದನು. ಅದರಿಂದ ಇಸ್ಕಂದರಿ ಬೀಬಿಯು ಖಿನ್ನಳಾಗಿ, ತನ್ನ ದೊಡ್ಡ ಇನಾಮು ಮುಣುಗಿತೆಂದು ಮನಸ್ಸಿನಲ್ಲಿ ಜೋಧಬಾಯಿಯನ್ನು ಬೈಯುತ್ತ ಹೊರಟು ಹೋದಳು. ಅಷ್ಟರಲ್ಲಿ ಜೋಧಬಾಯಿಯು ಅಲ್ಲಿಗೆ ಬಂದು ಸನ್ಮಾನಪೂರ್ವಕವಾಗಿ ತನ್ನ ಪತಿದೈವತವನ್ನು ವಂದಿಸಿ—"ಜಹಾಪನಾಹರ ಪ್ರಕೃತಿಯು ಹೇಗಿರುವದು?" ಎಂದು ಕೇಳಿದಳು. ಆಗ ಸೇಲೀಮನು ಜೋಧಬಾಯಿಯ ಕೈಹಿಡಿದು ಆಕೆಯನ್ನು

ಪಲ್ಲಂಗದ ಮೇಲೆ ಕುಳ್ಳಿರಿಸಿ ತಾನು ಆಕೆಯ ಬಳಿಯಲ್ಲಿ ಕುಳಿತು ಮರ್ಮ ಭೇದಕ ಉತ್ತರ ಕೊಡುವದಕ್ಕಾಗಿ ಆಕೆಯನ್ನು ಕುರಿತು—ಶಾಹೀ, ನೀನು ಇಟ್ಟುಹೋದಂತೆ ನಾನು ಇದ್ದೇನೆ; ಆದರೆ ಮಾನಸಿಂಹನಿಗೆ ನಾನು ಎರಡನೆ ಯಪತ್ರ ಕಳಿಸಿದರೂ ಆತನು ನಿನ್ನನ್ನು ಕಳಿಸಲಿಕ್ಕೆ ಇಷ್ಟು ತಡಮಾಡಬಹು ದೆಂದು ನಾನು ತಿಳಿದಿದ್ದಿಲ್ಲ.

ಜೋಧಬಾಯಿ—(ಆಶ್ಚರ್ಯದಿಂದ)ಅಂದರೆ! ತಾವು ಅಣ್ಣನಿಗೆ ಮತ್ತೆ ಪತ್ರ ಕಳಿಸಿದ್ದಿರೇನು?

ಸೇಲೀಮ—ಆಹುದು; ಎರಡನೆಯದೊಂದು ಪತ್ರವನ್ನು ನಾನು ಆತ ನಿಗೆ ಬರೆದಿದ್ದೆನು. ಅದರಲ್ಲಿ ಪತಿತ್ವದ, ಹಾಗು ಪಿತೃತ್ವದ ಜವಾಬದಾರಿಯು ಎಷ್ಟು ಕಠಿಣವಾಗಿರುತ್ತದೆಂಬದನ್ನು ನಾನು ಸ್ಪಷ್ಟವಾಗಿ ಬರೆದಿದ್ದೆನು. ನೀನು ಆ ಪತ್ರವನ್ನು ನೋಡಲಿಲ್ಲವೇನು?

ಜೋಧಬಾಯಿ—ಇಲ್ಲ, ನಾನು ಅಂಬರ ರಾಜಧಾನಿಯನ್ನು ಬಿಟ್ಟು ಬಂದಬಳಿಕ ಅಣ್ಣನಿಗೆ ಆ ಪತ್ರವು ಮುಟ್ಟಿರಬಹುದು. ಅಂದಬಳಿಕ ನಾನು ಅದನ್ನು ನೋಡುವ ಬಗೆಹೇಗೆ?

ಸೇಲೀಮ—ಒಳ್ಳೇದು, ಜೋಧಾ, ನಾನು ನಿನ್ನನ್ನು ಒಂದೇಮಾತು ಕೇಳುವೆನು. ಇಷ್ಟು ಬೇಗನೆ ನಿನ್ನಂಥ ರಜಪೂತ ಸ್ತ್ರೀಯ ಸಿಟ್ಟು ಹೇಗೆ ಇಳಿಯಿತು?

ಜೋಧ—ಪ್ರಿಯಾ, ನಿಜವಾಗಿ ನೀವು ಮೊಗಲರೆ!! ರಜಪೂತ ರೊಡನೆ ಇಷ್ಟುದಿವಸ ಬಳಿಕೆ ಮಾಡಿಯೂ ನೀವು ಅವರ ಸ್ವಭಾವವನ್ನರಿ ಯದಿರುವದು ಬಹಳ ದುಃಖದ ಸಂಗತಿಯು! ಸ್ನೇಹ, ಮಾಯಾ, ಕರ್ತವ್ಯ, ಪತಿಸೇವೆ ಈ ಗುಣಗಳು ಜಗತ್ತಿನಲ್ಲಿ ಇಲ್ಲದಿದ್ದರೆ ಅದರಂತೆ ತಾಯಿಯ ಹಾಗು ಹೆಂಡತಿಯ ಕರ್ತವ್ಯಗಳನ್ನು ಆರ್ಯ ಸ್ತ್ರೀಯರು ಮರೆತಿ ದ್ದರೆ, ತಾವು ಕೇಳಿದಂತೆ ರಜಪೂತ ಸ್ತ್ರೀಯರ ಸಿಟ್ಟು ಇಷ್ಟು ಬೇಗನೆ ಇಳಿಯು ತ್ತಿದ್ದಿಲ್ಲ! ಪ್ರಿಯಾ, ಪತಿದೇವತೆಯ ಪ್ರಸನ್ನತೆಯ ಮುಂದೆ ಆರ್ಯಸ್ತ್ರೀ ಯರು ಎಲ್ಲವನ್ನು ತುಚ್ಛವಾಗಿ ಎಣಿಸುವರು.

ಸೇಲೀಮ—ಇನ್ನು ಆದಮಾತನ್ನು ಮರೆತುಬಿಡು ಜೋಧಾ!! ನಾನು ಆಡಬಾರದ್ದನ್ನು ಆಡಿ ನಿನ್ನ ಅಪರಾಧಿಯಾಗಿರಬಹುದು. ನಿನ್ನ ಹೃದಯಕ್ಕೆ

ನೋವಾಗುವಂತೆಯೂ ನಾನು ನಡೆದಿರಬಹುದು; ಆದರೆ ನೀನು ಅದನ್ನೆಲ್ಲ ಮರೆತುಬಿಡುವೆಯೆಂದು ನಾನು ಆಶಿಸುವೆನು. ಶಾಹೀ! ನನ್ನ ಈಗಿನ ಪರಿಸ್ಥಿತಿಯು ಬಹು ಅಂಧಃಕಾರಮಯವಾಗಿರುವದು. ಭವಿಷ್ಯತ್ಕಾಲವಂತು ಇದಕ್ಕೂ ಹೆಚ್ಚು ಭೀಷಣವಾಗಿ ನನ್ನನ್ನು ಅಂಜಿಸುತ್ತಿರುವದು! ಅದಿರಲಿ ಶಾಹೀ, ಈಗ ನೀನೊಬ್ಬಳೇ ಯಾಕೆ ಬಂದೆ? ಖುಸ್ರುವು ಎಲ್ಲಿರುವನು?

ಜೋಧಬಾಯಿ—ಆತನು ಫತ್ತೇಪುರ ಸಿಕ್ರಿಗೆ ಹೋಗಿರುವನು.

ಸೇಲೀಮ—(ತಿರಸ್ಕಾರದಿಂದ ನೋಡುತ್ತ)ಯಾಕೆ ಆತನನ್ನು ಅತ್ತಕಡೆಗೆ ಕಳಿಸಿದರು ಶಾಹೀಬೇಗಮ್? ಇದೊಂದು ನಿನ್ನ ಅಣ್ಣನ ತಂತ್ರವೇ ಇರಬಹುದೆಂದು ನನಗೆ ತೋರುತ್ತದೆ.

ಜೋಧ—ಇಲ್ಲ ನಾಥ, ತಾವು ನಿಷ್ಕಾರಣ ಸಂಶಯಗ್ರಸ್ತರಾಗಬಾರದು, ಸ್ವತಃ ಬಾದಶಹರೇ ಕರೆಕಳುಹಿದ್ದರಿಂದ ಆತನು ಅಲ್ಲಿಗೆ ಹೋಗಿರುವನು. ನಿಜವಾಗಿ ನಾನೂ ಆತನೂ ಇಲ್ಲಿಗೆ ಬರುವದಕ್ಕಾಗಿಯೇ ಅಂಬರ ರಾಜಧಾನಿಯಿಂದ ಹೊರಟೆವು; ನನಗಿಂತ ಮೊದಲೇ ಆತನನ್ನು ತಮ್ಮ ಕಡೆಗೆ ಕಳಿಸುವದಕ್ಕಾಗಿ ನಾನು ಅಜಮೀರದ ಕಡೆಗೆ ಸಾಗಿ, ಆತನನ್ನು ಇತ್ತ ಕಡೆಗೆ ಕಳಿಸಿದೆನು; ಆದರೆ ನಡುವೆ ಮೊಗಲ ರಾವುತರು ಆತನಿಗೆ ಬಾದಶಹರ ಪತ್ರ ಕೊಟ್ಟಿದ್ದರಿಂದ, ಅಜ್ಜನ ಅತ್ಯವಸ್ಥೆಯನ್ನರಿತು ಖುಸ್ರುವು ಸಿಕ್ರಿಗೆ ಹೋದನು. ಇಗೋ, ಈ ಪತ್ರದಲ್ಲಿ ಖುಸ್ರುವು ಈ ಮಾತನ್ನು ಸ್ಪಷ್ಟವಾಗಿ ಬರೆದಿರುವನು.

ಹೀಗೆಂದು ಹೇಳಿ ಜೋಧಬಾಯಿಯು ಸಿಕ್ರಿಯಿಂದ ಖುಸ್ರುವು ಬರೆದ ಪತ್ರವನ್ನು ಕೊಟ್ಟಳು. ಆಗ ಸೇಲೀಮನು ಪತ್ರವನ್ನು ಉತ್ಸುಕತೆಯಿಂದ ಓದಿದನು.

ಸೇಲೀಮ—ಜೋಧಾ, ಖುದಾನು ಕರುಣಿಸಿದನು! ಇಂಥ ಭಯಂಕರ ಬೇನೆಯಲ್ಲಿಯೂ ಆತನು ಶಹಾನಶಹಾರವರನ್ನು ಬದುಕಿಸಿದನು!! ಆದರೆ ಜೋಧಾ, ಈ ಪತ್ರಬರೆದನಂತರ ಖುಸ್ರುವು ಮತ್ತೆ ಪತ್ರ ಬರೆದಿರುವನೋ?

ಜೋಧ—ಇಲ್ಲ, ತಿರುಗಿ ಒಂದೂ ಪತ್ರಬರೆದಿಲ್ಲ.

ಸೇಲೀಮ—ಹಾಗಾದರೆ ಈಗ ಮಾನಸಿಂಹನು ಎಲ್ಲಿರುವನು?

ಜೋಧ—ಬಹಳವಾಡಿ ಆತನು ಅಂಬರದ ಅರಮನೆಯಲ್ಲಿಯೇ ಇರ ಬಹುದಾಗಿ ನನಗೆ ತೋರುತ್ತದೆ.

ಸೇಲೀಮು—ಇಲ್ಲ, ಆತನು ಅಲ್ಲಿ ಇರುವದಿಲ್ಲ. ಇದು ನಿನ್ನ ತಪ್ಪು ತಿಳುವಳಿಕೆಯು. ರಜಪೂತ ವೀರರ ಕುದುರೆಯು ತನ್ನ ಒಡೆಯನ ಲಾಭ ವನ್ನು ಗೊತ್ತುಹಿಡಿದು ಬಹುವೇಗವಾಗಿ ನಡೆದು ಹೋಗುವದನ್ನು ನಾನು ಬಲ್ಲೆನು. ಸಾವಿರಾರು ಕೆಲಸಗಳಿದ್ದರೂ ಬಿಟ್ಟು ನಿನ್ನ ಅಣ್ಣನು ಬಾದಶಹ ರನ್ನು ಕಾಣುವದಕ್ಕಾಗಿ ಹೋಗಿರುವನು. ನಾನೂ ನೀನೂ ಇಲ್ಲಿ ಇರುವದು ಎಷ್ಟು ಸತ್ಯವಾದದ್ದೋ, ಅಷ್ಟೇ ಮಾನಸಿಂಹನು ಬಾದಶಹರ ಕಡೆಗೆ ಹೋದದ್ದು ಸತ್ಯವಾಗಿರುವದೆಂದು ತಿಳಿ.

ಜೋಧಬಾಯಿ—ಆದರೆ ಪ್ರಿಯಾ, ತಾವು ನನ್ನ ಅಣ್ಣನ ಮೇಲೆ ಇಷ್ಟು ಸಂಶಯಗ್ರಸ್ತರು ಯಾಕೆ? ತಮಗೆ ಎಲ್ಲವೂ ಸಂಶಯಗ್ರಸ್ತವಾಗಿ ರುವಂತೆ ನನಗೆ ತೋರುತ್ತಿದೆ. ತಮ್ಮ ಮೊದಲನೆಯ ನಿಷ್ಕಾರಣ ಸಂಶ ಯವು ಮಾನಸಿಂಹನ ಮೇಲಿನದು, ಎರಡನೆಯದು ಖುಸ್ರುವಿನ ಮೇಲಿ ನದು, ಮೂರನೆಯದು ಶೇರ ಅಫಗಾಣನ ಪತ್ನಿಯಾದ ಮೇಹರುನ್ನಿಸೆಯ ಮೇಲಿನದು.

ಸೇಲೀಮು—(ಗಂಭೀರ ಸ್ವರದಿಂದ)ಜೋಧಾ, ನೀನು ಮತ್ತೆ ಆ ಹಳೆಯ ಮಾತುಗಳನ್ನು ಬುದ್ಧಿಪೂರ್ವಕವಾಗಿ ಆಡತೊಡಗಿದೆ; ಆದರೆ ಈಗ ನೀನು ಸ್ಪಷ್ಟವಾಗಿ ಕೇಳುತ್ತಿರುವದರಿಂದ ನಾನೂ ಸ್ಪಷ್ಟವಾಗಿ ಹೇಳುತ್ತೇನೆ ಕೇಳು. ಮಾನಸಿಂಹನ ಮೇಲೆ ನನ್ನ ಇಷ್ಟು ಸಿಟ್ಟು ಯಾಕೆಂಬದನ್ನು ಕೇಳುವ ಇಚ್ಛೆಯು ನಿನಗೆ ಇರುವದೇನು? ಹೇಳುವೆನು ಕೇಳು. ದಾಂಭಿಕ ನಾದ ಮಾನಸಿಂಹನು ಮೊಗಲ ಸಾಮ್ರಾಜ್ಯದ ಸ್ಥಾಪನೆಯಾದದ್ದು ತನ್ನ ಪರಾಕ್ರಮದಿಂದಲೇ ಎಂದು ತಿಳಿದುಕೊಳ್ಳುವನು. ತಾನು ಕೇವಲ ಪ್ರಕಾಶ ಸ್ವರೂಪನು, ನಾವು ಆತನ ನೆರಳು!! ಆತನಿಗೆ ಇದೊಂದು ಭಯಂಕರ ಭ್ರಮೆಯುಂಟಾಗಿರುವದು. ಸ್ವಾಭಿಮಾನಿಗಳೂ, ಶೂರರೂ, ವಿಶ್ವಾಸ ವುಳ್ಳವರೂ ಆದ ಯಾವತ್ತೂ ಮೊಗಲ ಸೈನಿಕರ ಆಧಿಪತ್ಯವು ಆತನ ಕಡೆಗೆ ಇರುವದರಿಂದ, ಆತನು ಗರ್ವದ ಶಿಖರವನ್ನೇರಿ, ಎಲ್ಲವೂ ತನ್ನಿಂದಲೇ ಆಯಿತೆಂದು ತಿಳಿಯುತ್ತಿರುವನು. ಜೋಧಾ, ಎಲ್ಲ ಸಂಗತಿಯು ಆತನಿಗೆ

ಗೊತ್ತಿದ್ದು, ಬುದ್ಧಿಪೂರ್ವಕವಾಗಿ ನನಗೆ ತೊಂದರೆಯನ್ನುಂಟು ಮಾಡು ತ್ತಿರುವನೆಂದು ಹೇಳಲಿಕ್ಕೆ ನನಗೆ ದುಃಖವಾಗುತ್ತದೆ. ಪ್ರತ್ಯಕ್ಷ ನನ್ನ ಹೊಟ್ಟೆಯ ಮಗನ ಮನಸ್ಸು ಕೆಡಿಸುವ ಆ ಕಾರಸ್ಥಾನಿಯಾದ ವೀರ ರಜ ಪೂತನ ಮೇಲೆ ನಾನು ಯಾಕೆಸಿಟ್ಟಾಗಲಿಕ್ಕಿಲ್ಲ ನೀನೇ ಹೇಳು? ಜೋಧಾ, ನನ್ನ ಅತ್ಯಂತ ಪ್ರಿಯನಾದ ಖುಸ್ರುವನ್ನು ಇಲ್ಲದ ರಹಸ್ಯಗಳಲ್ಲಿ ತೊಡಗಿಸಿ ನನ್ನಿಂದ ದೂರ ಇರಿಸಿದವನು ನಿನ್ನ ಅಣ್ಣನೇ ಅಲ್ಲವೆ? ನನ್ನ ಪ್ರಿಯ ಖುಸ್ರುವಿನ ಕಾಲಲ್ಲಿಯೇ ನಾನು ಖುರಮ (ಮುಂದೆ ಈತನೇ ಶಹಾಜಹಾನ ಬಾದಶಹನಾದನು.) ನನ್ನು ಉದಾಸೀನ ಮಾಡಿ ಆತನ ತಾಯಿ ಜಗದ್ಬಾ ಯಿಯ ಪ್ರೇಮದಲ್ಲಿ ವಿರಸವನ್ನುಂಟು ಮಾಡಿದೆನು. ಆ ಕೃಷ್ಣಕಾರಸ್ಥಾನದ ನಿನ್ನ ಅಣ್ಣನು ಬುದ್ಧಿಪೂರ್ವಕವಾಗಿ ನನ್ನ ಪ್ರಿಯ ಖುಸ್ರುವನ್ನು ಪಿತೃದ್ರೋ ಹಿಯಾಗ ಮಾಡುವನು. ಅಂದಬಳಿಕ ಇದಕ್ಕಿಂತ ಹೆಚ್ಚಿಗೆ ನನ್ನ ದ್ರೋಹ ವನ್ನೇನು ಆತನು ಚಿಂತಿಸಬೇಕು? ನಿನ್ನ ಅಣ್ಣನು ಖುಸ್ರುವಿನ ಸರ್ವಸ್ವದ ನಾಶಮಾಡಲು ನಿಂತಿರುವನು; ಆದರೆ ಜೋಧಾ, ಆತನು ಹೀಗೆ ಯಾಕೆ ಮಾಡುತ್ತಿರುವನೆಂಬದು ನಿನಗೆ ಗೊತ್ತಿರುವದೆಯೇ? ನಿನ್ನ ಕೋಮಲ ಹೃದಯವನ್ನು ನೋಯಿಸಬಾರದೆಂದು ಈವರೆಗೆ ಈ ಮಾತನ್ನು ನಿನ್ನಮುಂದೆ ನಾನು ಹೇಳಿದ್ದಿಲ್ಲ. ಇಂದು ಹೇಳುವ ಪ್ರಸಂಗವು ಬಂದದ್ದರಿಂದ ಹೇಳು ವೆನು ಕೇಳು. ನೀನು ನನ್ನ ಧರ್ಮಪತ್ನಿಯಿರುವೆ; ಇಂದಿಲ್ಲ ಕೆಲವು ದಿನಗಳ ಮೇಲೆಯಾದರೂ ಯಾವತ್ತು ಹಿಂದುಸ್ಥಾನವು ನನ್ನ ಪಾದಗಳಿಗೆ ವಿನಮ್ರ ವಾಗುವದು; ಆಗ ನೀನು ರಾಜರಾಜೇಶ್ವರಿಯಾಗುವೆ; ಆದರೆ ಕೃಷ್ಣಕಾರ ಸ್ಥಾನದ ನಿನ್ನ ಅಣ್ಣನಮನಸ್ಸಿನಲ್ಲಿ ಪುನಃ ಈ ಹಿಂದುಸ್ಥಾನದಲ್ಲಿ ಹಿಂದುಪದ ಪಾತಶಾಹಿಯನ್ನುಂಟುಮಾಡುವದಿರುವದರಿಂದ ಆತನು ಖುಸ್ರುವನ್ನು ಗೊಂಬೆಯಂತೆ ಕುಣಿಸುತ್ತ ದಿಲ್ಲಿಯ ಸಿಂಹಾಸನದ ಮೇಲೆ ತನ್ನ ಕಾಲು ಊರಬೇಕೆಂದು ಬಲೆಯನ್ನು ಒಡ್ಡುತ್ತಿರುವನು. ನೀನು ನಿನ್ನ ಅಣ್ಣನನ್ನು ಮೇಲುಗಟ್ಟಿ ಎಷ್ಟು ಮಾತಾಡಿದರೂ ನಾನು ಆತನ ಮಟ್ಟನ್ನು ಚನ್ನಾಗಿ ಅರಿತಿರುವೆನು. ಮೊಗಲರು ತಮ್ಮ ಬಾಹುಬಲದಿಂದ ಸಂಪಾದಿಸಿರುವ ಹಿಂದುಸ್ಥಾನವನ್ನು ತಾನು ಕಸಕೊಳ್ಳಬೇಕೆಂದು ನಿನ್ನ ಅಣ್ಣನು ಯತ್ನಿಸುತ್ತಿ ರುವನು. ಆತನು ಖುಸ್ರುವಿನ ಪಕ್ಷಕಟ್ಟುವದು ಇದಕ್ಕಾಗಿಯೇ. ಆತನ

ಈ ಫಿತೂರಿಯು ಈಗ ವಿಕೋಪಕ್ಕೆ ಬಂದಿರುವದರಿಂದ, ಇನ್ನು ಸಹಿಸುವಂತೆ ಇಲ್ಲ. ಮಾನಸಿಂಹನು ತನ್ನ ಈ ಉದ್ದೇಶವನ್ನು ಸಾಧಿಸಿಕೊಳ್ಳುವದಕ್ಕಾಗಿ ನನ್ನನ್ನು ಬಂಗಾಲದ ಸುಬೇದಾರನನ್ನಾಗಿ ನಿಯಮಿಸಿ ಕಳಿಸಬೇಕೆಂದು ಬಾದಶಹರಿಗೆ ದುಂಬಾಲುಬಿದ್ದಿರುವನು. ಜೋಧಾ, ಈಗ ಉಪೇಕ್ಷೆ ಮಾಡುವದು ಶಕ್ಯವಾಗಿರುವದೋ? ಇಂಥ ಸ್ಪಷ್ಟ ಕಾರಣಗಳು ಕಣ್ಣಿಗೆ ಒಡೆದು ಕಾಣುತ್ತಿರಲು, ನಾನು ಸುಮ್ಮನೆ ಕುಳಿತುಕೊಳ್ಳಲಾ? ನಿನ್ನ ಅಣ್ಣನ ನೀಚತನವು ಇದಕ್ಕೂ ಮುಂದೆ ಹೋಗಿರುತ್ತದೆ. ಆತನು ನನ್ನನ್ನು ಕುರಿತು—"ಸೇಲೀಮಾ, ನೀನು ಸಿಂಹಾಸನದ ಹಾದಿಯನ್ನು ನೋಡುತ್ತ ಎಷ್ಟುದಿವಸ ಕುಳಿತುಕೊಳ್ಳತಕ್ಕವನು? ತಂದೆಯಾದರೇನಾಯಿತು? ಇಂದೇ ನಿನಗೆ ಸಿಂಹಾಸನವು ಸಿಗುವದು ಯೋಗ್ಯವಾಗಿರುವದು......ಇತ್ಯಾದಿ ರೀತಿಯಿಂದ ನನಗೆ ಉಪದೇಶಮಾಡುವನು; ಆದರೆ ಜೋಧಾ, ನಾನು ಆತನ ಉದ್ದೇಶವನ್ನು ಅರಿತಿರುವೆನು. ನಾನು ಬಂಡುಗಾರನಾದದ್ದರಿಂದ ರಾಜ್ಯವಾಳಲಿಕ್ಕೆ ಅಯೋಗ್ಯನೆಂದು ಬಾದಶಹರಿಗೆ ಹೇಳಿ, ತನ್ನ ಕಾರ್ಯಸಾಧಿಸಿಕೊಳ್ಳಬೇಕೆಂದು ಆತನು ಯತ್ನಿಸುತ್ತಿರುವನು. ಆತನ ಈ ಎಲ್ಲಾ ಕಾರ್ಯಗಳಲ್ಲಿ ಖುಸ್ರುವಿನ ಮಾವನಾದ ಅಜೀಮುಖಾನನು ಸಹಾಯಕನಾಗಿರುವನು. ಜೋಧಾ, ನನಗೆ ಈ ಹಿಡತ-ಪೇಚುಗಳ ಬೇಸರ ಬಂದಿದೆ. ನಿನ್ನ ಅಣ್ಣನು ಮನಸ್ಸಿನ ಕಿಲ್ಮಿಷವನ್ನೆಲ್ಲ ತೊಳೆದುಕೊಂಡು ನನ್ನ ಆಧೀನನಾಗಿ ನನಗೆ ಸಹಾಯಮಾಡತಕ್ಕದ್ದು; ಖುಸ್ರುವಿಗೆ ಪೂರ್ಣ ಸ್ವಾತಂತ್ರ್ಯವನ್ನೂ ಕೊಡತಕ್ಕದ್ದು; ಆತನೊಡನೆ ಯಾವ ಸಂಬಂಧವನ್ನು ಇಡಲಾಗದು. ಹೀಗೆ ಆತನು ಮಾಡದಿದ್ದರೆ ನನಗೆ ತೋರುವ ಸುಷ್ಟ-ದುಷ್ಟ ಉಪಾಯಗಳಲ್ಲಿ ಸಾಧಿಸಿಹ ಉಪಾಯವನ್ನು ಯೋಚಿಸಿ ನನ್ನ ಅಭಿಷ್ಟವನ್ನು ಪೂರ್ಣಮಾಡಿಕೊಳ್ಳುವೆನು.

ತನ್ನ ಪತಿಯ ಈ ಮಾತುಗಳನ್ನು ಜೋಧಬಾಯಿಯು ಮನಃಪೂರ್ವಕವಾಗಿ ಕೇಳಿದಳು. ಆ ಮಾತುಗಳಲ್ಲಿ ಸತ್ಯಾಂಶವು ಬಹಳ ಇರುವದೆಂದು ಆಕೆಯು ತಿಳಿದಳು. ಇತ್ತ ಪತಿಯ ಹಿತವು, ಅತ್ತ ಮಗನ ಹಾಗು ಅಣ್ಣನ ಹಿತವು, ಹೀಗಾಗಿ ಆಕೆಯು ಸಂಕಟಕ್ಕೆ ಗುರಿಯಾದಳು; ಆದರೂ ಪತಿಯ ಹಿತಕ್ಕೇ ಮಹತ್ವಕೊಟ್ಟು ಆ ದ್ವಾರದಿಂದ ತನ್ನ ಮಗನ ಕಲ್ಯಾಣವಾದರೆ

ಆಗಲೆಂದು ತಿಳಿದು ಆಕೆಯು ತನ್ನ ಪತಿಯನ್ನು ಕುರಿತು---ನಾಥ, ಖುಸ್ರು ವನ್ನು ಮಾನಸಿಂಹನ ಬಲೆಯೊಳಗಿಂದ ಬಿಡಿಸಿ ಆತನನ್ನು ನಿಮ್ಮ ಸ್ವಾಧೀನ ಮಾಡಿದರೆ, ಮೊದಲಿನಂತೆ ನೀವು ಆತನನ್ನು ಪ್ರೀತಿಸುವಿರಾ? ಖುಸ್ರುವು ತಮ್ಮ ಪ್ರೇಮ ಸಂಪಾದನಕ್ಕಾಗಿಯೇ ತನ್ನ ಮಾವನಾದ ಮಾನಸಿಂಹನನ್ನು ಕೊಲ್ಲಲಿಕ್ಕೆ ಹೋಗಿದ್ದನು. ಮಾನಸಿಂಹನಿರುವವರೆಗೆ ನಿಮ್ಮ ಪ್ರೇಮವನ್ನು ಸಂಪಾದಿಸುವದು ಅಶಕ್ಯವೆಂದು ಆತನ ಹುಡುಗಬುದ್ಧಿಗೆ ತೋರಿತು. ಆದರೆ ಇಂಥ ಪಾಪಮೂಲಕವಾದ ಅವಿಚಾರದ ಕೊಲೆಗಡಕತನವು ಅಯೋಗ್ಯ ವೆಂದು ನಾನು ಖುಸ್ರುವಿಗೆ ಸಿಟ್ಟು ಮಾಡಿ ಬುದ್ಧಿಗಲಿಸಿದೆನು. ಆತನು, ಇನ್ನು ನಾನು ಮಾವನ ಕಣ್ಣಿಗೆ ಬೀಳಲಿಕ್ಕಿಲ್ಲವೆಂದು ಹೇಳಿ ಆತನು ನಿಮ್ಮ ಕಡೆಗೆ ಬರುತ್ತಿದ್ದನು. ಆದ್ದರಿಂದ ಇನ್ನುಮೇಲಾದರೂ ಖುಸ್ರುವಿನ ಮೇಲಿನ ತಮ್ಮ ಎಲ್ಲ ಸಿಟ್ಟು ಇಲ್ಲದಂತಾಗಬಹುದೋ? ಎಂದು ಕೇಳಲು, ಸೇಲೀಮನು ಆಶ್ಚರ್ಯದಿಂದ—"ಎಂಥ ಅಸಂಭವ ಮಾತನ್ನು ಹೇಳುವೆ ಜೋಧಾ? ಖುಸ್ರುವು ನನ್ನ ಪ್ರೇಮ ಸಂಪಾದನೆಗಾಗಿ ತನ್ನ ಸೋದರ ಮಾವನ ಕೊಲೆ ಮಾಡಲಿಕ್ಕೆ ಹೋಗಿದ್ದನೆ? ಆತನ ಉದ್ದೇಶವು ಸಾಧಿಸದೆ ಇದ್ದದ್ದು ಬಹಳನೆಟ್ಟಗಾಯಿತು. ಮಾನಸಿಂಹನ ಮೇಲೆ ನನ್ನ ಸಿಟ್ಟು ಎಷ್ಟು ಇದ್ದರೂ ಆತನನ್ನು ಕೊಲ್ಲಿಸಿ, ಅಕಬರ ಬಾದಶಹರ ಬಲಗೈ ಇಲ್ಲದಂತೆ ನಾನು ಮಾಡಲಾರೆನು. ಜೋಧಾ, ಪ್ರಿಯ ಖುಸ್ರುವಿನ ಮೇಲೆ ನನ್ನ ಸಿಟ್ಟು ಇಲ್ಲ; ಆತನ ದುಷ್ಟ ಗುಣಗಳ ಮೇಲೆ ನನ್ನ ಸಿಟ್ಟು ಇರುವದು. ಆತನು ಆ ಗುಣಗಳನ್ನು ಬಿಟ್ಟು ನನ್ನ ಆಜ್ಞಾಧಾರಕನಾದರೆ, ಆತನ ಎಲ್ಲ ಅಪರಾಧಗಳನ್ನು ನಾನು ಕ್ಷಮಿಸುವೆನು. ಜೋಧಾ, ಈ ರಾಜಕಾರಣದ ಸಂಕಟದ ಪ್ರಸಂಗಗಳಲ್ಲಿ ನನ್ನ ಚಿತ್ತವೃತ್ತಿಯು ಕ್ಷೋಭಿಸಿ, ನನ್ನಿಂದ ಎಲ್ಲಿ ಅಯೋಗ್ಯ ಕಾರ್ಯಗಳು ಘಟಿಸುವವೋ ಎಂದು ಚಿಂತಿಸುತ್ತಿರುವೆನು. ನಿನ್ನ ಅಣ್ಣಾ ಮಾನಸಿಂಹನ ಯೋಗ್ಯತೆಯನ್ನು ನಾನು ಅರಿತಿರುವದಿಲ್ಲ ವೆಂದು ತಿಳಿಯಬೇಡ. ಆತನು ನನ್ನ ವಿಷಯದ ಕುಭಾವವನ್ನು ತ್ಯಜಿಸಿ ನನಗೆ ಮನಃಪೂರ್ವಕ ಸಹಾಯ ಮಾಡಿದರೆ, ಆತನ ಅಪರಾಧಗಳನ್ನೂ ಕ್ಷಮಿಸುವೆನು.

ತನ್ನ ಪ್ರಾಣೇಶ್ವರನು ಮನಃಪೂರ್ವಕವಾಗಿ ಆಡಿದ ಈ ಮಾತುಗ

ಳನ್ನು ಕೇಳಿ ಜೋಧಬಾಯಿಗೆ ಬಹುಮಟ್ಟಿಗೆ ಸಮಾಧಾನವಾಗಿ ಆಕೆಯ ಎದೆಯ ಮೇಲಿನ ಭಾರವು ಹಗುರಾದಂತಾಯಿತು. ಸಂಶಯ ಸ್ವಭಾವದ ತನ್ನ ಪತಿಯು ಇಷ್ಟು ಸುಲಭ ರೀತಿಯಿಂದ ಖುಸ್ರುವನ್ನು ಕ್ಷಮಿಸುವನೆಂದು ಆಕೆಯು ತಿಳಿದಿದ್ದಿಲ್ಲ. ಆಕೆಯು ಆನಂದದಿಂದ ತನ್ನ ಪ್ರಿಯಕರನ ಹೃದಯದಲ್ಲಿ ಮಸ್ತಕವಿಟ್ಟು ಆತನ ಎರಡೂ ಹಸ್ತಗಳನ್ನು ತನ್ನ ನವನೀತ ಸದೃಶವಾದ ಸುಕುಮಾರ ಹೃದಯದಲ್ಲಿಟ್ಟುಕೊಂಡು ಮೃದುಸ್ವರದಿಂದ—ಪ್ರಿಯಕರಾ, ಹಾಗಾದರೆ ನಾಳೆ ಖುಸ್ರುವಿಗೆ ಒಂದು ಪತ್ರವನ್ನು ಬರೆದು ಕಳಿಸಲಾ? ಫತ್ತೇಪುರದಿಂದ ಒಮ್ಮೆ ಆತನು ಇಲ್ಲಿಗೆ ಬಂದನೆಂದರೆ ಸಮಾಧಾನವಾಗುವದು, ಎಂದು ಕೇಳಲು, ಸಲೀಮನು ಅಷ್ಟೇ ಪ್ರೇಮಲ ಭಾವದಿಂದ ತನ್ನ ಪ್ರಿಯ ಪತ್ನಿಯನ್ನು ಸಂತಯಿಸಿ—ಪ್ರಿಯೇ, ನಾನು ನಾಳೆ ಬೆಳಗಿನಲ್ಲಿಯೇ ಸಿಕ್ರಿಗೆ ರಾವುತರನ್ನು ಕಳಿಸುವೆನು. ನನ್ನ ಪ್ರಿಯ ಖುಸ್ರುವನ್ನು ನೋಡದೆ ಎಷ್ಟು ದಿನಗಳಾದವಲ್ಲ! ಆದ್ದರಿಂದ ಆತನನ್ನು ಯಾವಾಗ ನೋಡುವೆನೋ ಅನ್ನುವಹಾಗೆ ನನಗೆ ಆಗಿದೆ. ನನ್ನ ಈ ಸುಭೇಚ್ಛೆಯು ಎಂದು ಪೂರ್ಣವಾಗುವದೋ ಒಬ್ಬ ಖುದಾನಿಗೇ ಗೊತ್ತು! ಯಾಕಂದರೆ ಎಲ್ಲ ಕಾರ್ಯಗಳೂ ಖುದಾನ ಇಚ್ಛೆಯಿಂದಲೇ ಆಗುತ್ತಿರುತ್ತವೆ. ಎಂದು ಹೇಳಿದನು. ಸಲೀಮನು ಹೀಗೆ ಉದಾರ ಸ್ವಭಾವದವನಾಗಿದ್ದರೂ, ದುಷ್ಟ ಜನರ ಸಹವಾಸದಿಂದ ಸೆರೆಸುಡುಕನೂ, ವಿಷಯಾಸಕ್ತನೂ ಆಗಿ, ಆಗಾಗ್ಗೆ ತಂದೆಯ ವಿರುದ್ಧವಾಗಿ ಆಚರಿಸುತ್ತಿದ್ದನೆಂಬದಕ್ಕೆ ಇತಿಹಾಸವು ಸಾಕ್ಷಿಯಾಗಿರುವದು. ತಂದೆಯ ದೀರ್ಘಕಾಲದ ಆಳಿಕೆಗೆ ಬೇಸತ್ತು ಸಿಂಹಾಸನವು ತನಗೆ ಯಾವಾಗದೊರೆತೀತೆಂದು ಆತನು ಆತುರಪಡುತ್ತಲಿದ್ದನು. ಈ ಸಂಬಂಧದಿಂದ ಆತನ ಗುಪ್ತ ಕಾರಸ್ಥಾನಗಳು ನಡೆದೇ ಇದ್ದವು. ಮೇಲೆ ಹೇಳಿದಂತೆ ಆತನು ತನ್ನ ಹೆಂಡತಿಯ ಮುಂದೆ "ತಾನು ಮಾನಸಿಂಹನ ದುರಾಲೋಚನೆಯಂತೆ ತಂದೆಯ ಮೇಲೆ ತಿರುಗಿ ಬೀಳಲಿಕ್ಕೆ ಒಪ್ಪಲಿಲ್ಲವೆಂ"ದು ತನ್ನ ದೊಡ್ಡಿಸ್ತಿಕೆಯನ್ನು ಆಡಿ ತೋರಿಸಿದರೂ, ಈ ಮೊದಲೆಯೇ ತಂದೆಯ ಮೇಲೆ ಆತನು ಒಂದೆರಡುಸಾರೆ ತಿರುಗಿಬಿದ್ದಿದ್ದನಲ್ಲದೆ, ಸದ್ಯಕ್ಕೆ ಅಲಹಾಬಾದದಿಂದ ಬಿಹಾರ ಪ್ರಾಂತದವರೆಗೆ ಯಾವತ್ತು ಪ್ರದೇಶವನ್ನು ಸ್ವಾಧೀನಪಡಿಸಿಕೊಂಡು ಅಲ್ಲಿ ತನ್ನ ಅಧಿಕಾರವನ್ನು ನಡಿಸಹತ್ತಿ, ಆಗ್ರಾ ಪಟ್ಟಣವನ್ನು ಸ್ವಾಧೀನ

ಪಡಿಸಿಕೊಳ್ಳುವದಕ್ಕಾಗಿ ತನ್ನ ಎಪ್ಪತ್ತು ಸಾವಿರ ಸೈನ್ಯ ಸಹಾಯದಿಂದ ಹೆಣಗ ತೊಡಗಿದ್ದನು. ಈ ಸಂಗತಿಯನ್ನು ಗುಪ್ತ ಪ್ರತಿನಿಧಿಯ ದ್ವಾರದಿಂದ ತಿಳಿದುಕೊಂಡೇ ಅಂಥ ಬೇನೆಯ ಸ್ಥಿತಿಯಲ್ಲಿಯೂ ಅಕಬರ ಬಾದಶಹನು ಸಿಕ್ರಿಯಿಂದ ಹೊರಟು ವಸತಿಯಮೇಲೆ ವಸತಿಯನ್ನು ಮಾಡುತ್ತ, ಹಿಂದಕ್ಕೆ ಅಜೀಮ ಖಾನನು ಮಾನಸಿಂಹನ ಮುಂದೆ ಹೇಳಿದಂತೆ ಆಗ್ರಾ ಪಟ್ಟಣಕ್ಕೆ ಬಂದು ಮುಟ್ಟಿದ್ದನು.



೧೨ನೆಯ ಪ್ರಕರಣ

# ದುರಾಶಯ ದುಷ್ಪರಿಣಾಮ.

ಪ್ರಿಯ ವಾಚಕರೇ, ಮಹತ್ವವನ್ನು ಇಚ್ಛಿಸುವದು ಮನುಷ್ಯಪ್ರಾಣಿಯ ಸ್ವಭಾವವಾಗಿರುವದು. ಆ ಮಹತ್ವ ಪ್ರಾಪ್ತಿಯ ಆಶೆಯಿಂದಲೇ ಭಿಕ್ಷುಕರಿಂದ ರಾಜರವರೆಗೆ ಮನುಷ್ಯನು ಈ ದುಃಖಮಯ ಸಂಸಾರವನ್ನು ಸುಖಮಯವಾಗಿ ಭಾವಿಸುವನು. ಇಂದು ನಾವು ಒಂದಿಲ್ಲೊಂದು ಬಗೆಯ ಅನನುಕೂಲತೆಯ ತಾಪಕ್ಕೆ ಗುರಿಯಾಗಿದ್ದರೂ, ಮುಂದೆ ನಾವು ಇಂಥ ಇಂಥ ಅನುಕೂಲತೆಗಳನ್ನು ಪಡೆದೇವೆಂಬ ಆಶೆಯಿಂದ ಆ ಅನನುಕೂಲತೆಗಳ ನಮ್ಮ ತಾಪವನ್ನು ಸಹಿಸುತ್ತಿರುವೆವು. ಹೀಗೆ ದೇವರು ಆಶೆಯ ಸವಿಯಲ್ಲಿ ಎದ್ದಿ ಸಂಸಾರವನ್ನು ರಚಿಸಿರುವದರಿಂದ ಜಗತ್ತು ಆಶಾಪಾಶಬದ್ಧವಾಗಿ ಸಂಸಾರದಲ್ಲಿ ತೊಳಲಾಡುತ್ತಿರುವದು; ಆದರೆ ದೇವರ ಸಂಕೇತವೇ ಹೀಗಿದ್ದ ಬಳಿಕ ಸಂಸಾರದ ಅಸ್ತಿತ್ವದ ಆಧಾರವಾದ ಈ ಅಶಾಪಾಶವನ್ನು ನಾವು ಹೇಗೆ ಹರಿದೇವು? ದೇವರ ಸಂಕೇತಕ್ಕೆ ವಿರೋಧವಾಗಿ ನಡೆಯುವದು ಶಕ್ಯವೋ? ಅಲ್ಲ, ಸರ್ವಥಾ ಶಕ್ಯವಲ್ಲ; ಆದರೆ ನಾವು ಧಾರ್ಮಿಕ ಆಶಾಪಾಶ ಬದ್ಧರಾಗಿ ಸಂಸಾರ ಮಾಡುವದು ದೇವರ ಶಂಕೇತಕ್ಕೆ ವಿರೋಧವಲ್ಲ,

ಅದು ದೇವರ ಕ್ಷೋಭಕ್ಕೆ ಕಾರಣವಾಗದು. ಅಂತೇ ಭಗವಂತನು ಗೀತೆ ಯಲ್ಲಿ "ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ" ಎಂದು ಹೇಳಿರುವನು. ಇನ್ನು ನಾವು ನಿಜವಾದ ಸುಖವನ್ನು ಬಯಸುತ್ತಿದ್ದರೆ ಆಶಾಪರಿತ್ಯಾಗವನ್ನೇ ಮಾಡಬೇಕು. ಈ ಸಂಸಾರವು ಪ್ರವಾಹರೂಪದಿಂದ ಶಾಶ್ವತವಾಗಿ ನಡೆಯಬೇಕೆಂದು ದೇವರು ಮೂರು ಸಂಕೇತಗಳ ಸೂತ್ರದಿಂದ ಅದನ್ನು ದೃಢೀಕರಿಸಿರುವನು. ನಿರಾಶಾ ಪರಮಂ ಸುಖಂ" ಎಂಬಂತೆ ದೇವರಲ್ಲಿ ಲಕ್ಷವಿಟ್ಟು ಆಶಾ ಪರಿತ್ಯಾಗಮಾಡಿ ಆತನನ್ನು ಹೊಂದಿ ಪರಮ ಸುಖವನ್ನು ಪಡೆಯಬೇಕೆಂಬದು ಆತನ ಒಂದನೆಯದಾದ ಶ್ರೇಷ್ಠ ಸಂಕೇತವು. ಧರ್ಮ, ಅಧರ್ಮಗಳೆಂಬ ದ್ವಂದ್ವದಿಂದ ಯುಕ್ತವಾದ ಆ ಪರಮಾತ್ಮನ ತಂತ್ರರೂಪವಾದ ಮಾಯಾ ವ್ಯವಹಾರವನ್ನು ಲಕ್ಷಿಸಿ, ಪರಮಾತ್ಮನ ಭಯದಿಂದ ಧರ್ಮದಿಂದ ಆಚರಿಸಿ ಸ್ವರ್ಗಾದಿ ಉಚ್ಚ ಭೋಗಗಳನ್ನು ಪಡೆಯಬೇಕೆಂಬದು ಆ ಪರಮಾತ್ಮನ ಸಾಮಾನ್ಯವಾದ ಎರಡನೆಯ ಸಂಕೇತವು. ದೇವರ ಲಕ್ಷವಿಲ್ಲದೆ ಐಹಿಕ ವಿಷಯ ಭೋಗಕ್ಕೆ ಮಹತ್ವ ಕೊಟ್ಟು ಧರ್ಮಾ-ಧರ್ಮಗಳ ವಿವೇಚನವಿಲ್ಲದೆ ಮನಸ್ಸಿಗೆ ಬಂದಂತೆ ನಡೆದು ನರಕಾದ್ಯನರ್ಥಗಳನ್ನು ಭೋಗಿಸಬೇಕೆಂಬದು ದೇವರ ಮೂರನೆಯ ಅಧಮಸಂಕೇತವು. ಈ ಮೂರೂ ಸಂಕೇತಗಳಲ್ಲಿ ಮೊದಲನೆಯ ಸಂಕೇತದಂತೆ ನಡೆಯುವವರನ್ನು ಮುಕ್ತರೆಂತಲೂ, ಎರಡನೆಯ ಸಂಕೇತದಂತೆ ನಡೆಯುವವರನ್ನು ಭೋಗಿಗಳೆಂತಲೂ, ಮೂರನೆಯ ಸಂಕೇತದಂತೆ ನಡೆಯುವವರನ್ನು ಪತಿತರೆಂತಲೂ ಕರೆಯಬಹುದು. ಈ ಮೂರೂ ಬಗೆಯ ಜೀವರು, ಅಂದರೆ ಮುಕ್ತರು, ಭೋಗಿಗಳು, ಪತಿತರು. ದೇವರ ಇಚ್ಛೆಯಿಂದ ಈ ಸೃಷ್ಟಿಯು ನಡೆಯುವವರೆಗೆ ಇರತಕ್ಕವರೇ; ಆದರೆ ಯುಗಭೇದದಿಂದ ಇವರ ಮಾನವು ಮಾತ್ರ ಹೆಚ್ಚು ಕಡಿಮೆಯಾಗಬಹುದು. ಅಂದರೆ, ಕೃತಯುಗದಲ್ಲಿ ಮುಕ್ತರ ಸಂಖೆಯು ಹೆಚ್ಚು ಇದ್ದರೆ, ತ್ರೇತಾ-ದ್ವಾಪರಗಳಲ್ಲಿ ಈ ಮುಕ್ತರ ಸಂಖ್ಯೆಯು ಕಡಿಮೆಯಾಗುತ್ತ ಭೋಗಿಗಳ ಸಂಖ್ಯೆಯು ಹೆಚ್ಚುತ್ತಲೂ, ಕಲಿಯುಗದಲ್ಲಿ ಪ್ರಾಮುಖ್ಯವಾಗಿ ಮುಕ್ತರ ಮಾನವೂ, ಸರ್ವಸಾಧಾರಣವಾಗಿ ಭೋಗಿಗಳ ಮಾನವೂ ಕಡಿಮೆಯಾಗುತ್ತ, ಪತಿತರ ಸಂಖ್ಯೆಯು ಭರದಿಂದ ಹೆಚ್ಚುತ್ತಲೂ ಹೋಗಬಹುದು. ಆದರೆ ಇವರಲ್ಲಿ

ಯಾರ ಸರ್ವಶೂನ್ಯವೂ ಸೃಷ್ಟಿಯಿರುವತನಕ ಯಾವಕಾಲಕ್ಕೂ ಆಗುವದಿಲ್ಲ. ಅದರಂತೆ, ಮನುಷ್ಯನು ಕೇವಲ ಧರ್ಮದಿಂದಾಗಲೀ, ಕೇವಲ ಅಧರ್ಮ ದಿಂದಾಗಲಿ ನಡೆಯಬೇಕೆಂತಲೂ ದೇವರ ಸಂಕೇತವಿರುವದಿಲ್ಲ; ಯಾಕಂ ದರೆ ಕೇವಲ ಸುಖವು, ಕೇವಲ ದುಃಖವು ಸಂಸಾರದ ಧರ್ಮವಾಗಿರದೆ, ಸುಖ–ದುಃಖ ಮಿಶ್ರಣವು ಸಂಸಾರದ ಧರ್ಮವೂ, ಸ್ವಾರಸ್ಯವೂ ಆಗಿರು ವದು. ಶ್ರೇಷ್ಠತರ ಧರ್ಮಾಚರಣೆಯಿಂದ ಇಂದ್ರಪದವಿಯನ್ನು ಹೊಂದಿದ ವನು ಕೂಡ ಅಹಲ್ಯಾಗಮನದಂಥ ಪಾಪವನ್ನೂ, ದುರ್ವಾಸರ ವರಪ್ರದಾನ ವನ್ನು ದುರ್ಲಕ್ಷಿಸುವಂಥ ಔದ್ಧತ್ಯವನ್ನೂ ಅಪ್ಪಿ ತಪ್ಪಿಯಾದರೂ ಮಾಡುವ ದುಂಟು. ಅದರಂತೆ ಅಜಾಮಿಳನಂಥ ಪಾಪಿಯು ಹೇಗಾದರೂ ಭಗವ ನ್ನಾಮವನ್ನು ಉಚ್ಚರಿಸುವ ಧಾರ್ಮಿಕ ವ್ಯವಹಾರವನ್ನು ಯಾವ ಯೋಗ ದಿಂದಲೇ ಆಗಲಿ ಮಾಡುವದುಂಟು. ಬಹಳವೇಕೆ, ಸೃಷ್ಟಿಯ ವ್ಯವಹಾ ರಕ್ಕೆ ಔಪಚಾರಕ ರೀತಿಯಿಂದಲೇ ಆಗಲಿ ಒಳಗಾಗಿದ್ದ ತ್ರಿಮೂರ್ತಿಗಳೂ ಶಾಪಗ್ರಸ್ಥರಾಗುವ ಆಚರಣೆಯನ್ನು ಆಚರಿಸಿದರೆಂದಬಳಿಕ ಸಾಂಸಾರಿಕ ಈ ಮಿಶ್ರಾಚರಣೆಯ ಮಹತ್ವವನ್ನು ಎಷ್ಟೆಂದು ವರ್ಣಿಸಬೇಕು? ಆದ್ದರಿಂದಲೇ ಈ ಸಂಸಾರದಲ್ಲಿ ಅತ್ಯಂತ ಧಾರ್ಮಿಕರು ದುಃಖಪಡುವದನ್ನೂ, ಅತ್ಯಂತ ಪತಿತರು ಸುಖ ಪಡುವದನ್ನೂ ನೋಡುತ್ತಿರುವೆವು! ಅಂತೇ ಆಶಾಮೂಲ ವಾದ ಕರ್ಮಪಾಶವು ಜನ್ಮಜನ್ಮಾಂತರಕ್ಕೂ ಬಿಡುವದಿಲ್ಲೆಂದು ಜ್ಞಾನಿಗಳು ಸಾರುತ್ತಿರುವರು.

ಈ ದೃಷ್ಟಿಯಿಂದ ಈ ಕಾದಂಬರಿಯೊಳಗಿನ ಮುಖ್ಯ ಪಾತ್ರಗಳ ವಿಚಾ ರಮಾಡಿದರೆ, ಈ ಜನ್ಮದಲ್ಲಿ ಸ್ಪಷ್ಟವಾದ ಅಧಾರ್ಮಿಕಾಚರಣೆಮಾಡುವ ಸೇಲೀಮ, ಖುಸ್ರು, ಮಾನಸಿಂಹ, ಅಜೀಮಖಾನ ಮೊದಲಾದವರು ಶ್ರೇಷ್ಠ ಭೋಗಿಗಳಾಗಿರುವದಕ್ಕೆ ಅವರ ಪೂರ್ವ ಜನ್ಮದ ಹಾಗು ಈ ಜನ್ಮದ ಪ್ರಬಲ ಧಾರ್ಮಿಕಾಚರಣೆಯು ಕಾರಣವಾಗಿರುವದೆಂದು ಹೇಳಬೇಕಾಗು ವಂತೆ, ಅವರ ಈ ಜನ್ಮದ ಅಧರ್ಮಾಚರಣೆಯೂ, ಧರ್ಮಾಚರಣೆಯೂ, ಅವವುಗಳ ಮಾನದಿಂದ ಮುಂದಿನ ಜನ್ಮದ ಅವರ ಪತಿತತ್ವಕ್ಕಾಗಲಿ, ಭೋಗಕ್ಕಾಗಲಿ ಕಾರಣವಾಗುವದೆಂದೂ ಹೇಳಬೇಕಾಗುವದು. ಇನ್ನು ಈ ಜನ್ಮದಲ್ಲಿ ಉಚ್ಚ ಭೋಗವನ್ನು ಭೋಗಿಸುತ್ತ, ಈ ಜನ್ಮದಲ್ಲಿಯೂ ವಿಶೇಷ

ವಾಗಿ ಧಾರ್ಮಿಕನಾಗಿಯೇ ನಡೆಯುವವನು ಪುರುಷ ಶ್ರೇಷ್ಠರಲ್ಲಿ ಗಣಿಸಲ್ಪಡುವನು. ಅಂಥ ಪುರುಷ ಶ್ರೇಷ್ಠನು ಈ ಕಾದಂಬರಿಯಲ್ಲಿ ಅಕಬರ ಬಾದಶಹನೆಂದು ತಿಳಿಯತಕ್ಕದ್ದು; ಆದರೆ ಅಕಬರ ಬಾದಶಹನಿಂದ ಅಧಾರ್ಮಿಕಾಚರಣೆಗಳು ಆಗಿರುವದಿಲ್ಲವೆಂದು ಮಾತ್ರ ತಿಳಿಯಬಾರದು. ಪ್ರಾಮುಖ್ಯವಾಗಿ ಆತನ ಮಹತ್ವಾಕಾಂಕ್ಷೆಯು ಮೊದಲ ಚುಣಿಯಲ್ಲಿ ಆತನಿಂದಾದ ಹಿಂಸಾಕರ್ಮವೂ, ಸಾಧಾರಣವಾಗಿ ಆತನ ಇಡಿಯ ಆಯುಷ್ಯದಲ್ಲಿ ಆತನನ್ನು ಮುತ್ತಿ ಮುಸುಕಿದ ಪರಸ್ತ್ರೀಗಮನಲಾಲಸೆಯೂ ಇತಿಹಾಸಜ್ಞರಿಗೆ ಅರಿಯದ ಮಾತಲ್ಲ; ಆದ್ದರಿಂದ ಯಾರ ಆಚರಣೆಗಾಗಿ ಯಾರೂ ಹೆಸರಿಡದೆ, ವಿವೇಕಿಗಳಾದವರು ಆಶಾ ಪರಿತ್ಯಾಗ ಮಾಡುವದು ತಮ್ಮಿಂದಾಗದಿದ್ದರೂ ಧಾರ್ಮಿಕಾಶೆಯನ್ನಾದರೂ ತಾಳಬೇಕು. ಈ ಕಾದಂಬರಿಯೊಳಗಿನ ಸೇಲೀಮನು ಆಶಾಪರಿತ್ಯಾಗ ಮಾಡದಿದ್ದರೂ, ತಂದೆಯಿರುವತನಕ ಆತನನ್ನು ಸೇವಿಸಿ, ಅಂದರೆ ಆತನ ಮನಸ್ಸಿಗೆ ಸಮಾಧಾನವಾಗುವಂತೆ ನಡೆದು, ಆತನ ಪಶ್ಚಾತ್ ತನಗೆ ಹಕ್ಕಿನಿಂದ ಪ್ರಾಪ್ತವಾಗತಕ್ಕ ಸಿಂಹಾಸನವನ್ನು ಪಡೆದಿದ್ದರೆ ದೋಷಿಯಾಗುತ್ತಿದ್ದಿಲ್ಲ. ಇದೇ ದೃಷ್ಟಿಯಿಂದ ವಿಚಾರ ಮಾಡಿದರೆ ಕೇವಲ ಸ್ವಾರ್ಥ ಪರಾಯಣರಾದ ಮಾನಸಿಂಹ, ಅಜೀಮುಖಾನ, ಖುಸ್ರು ಇವರ ಸ್ವಾಮಿದ್ರೋಹ–ಪಿತೃದ್ರೋಹಾದಿಗಳ ಆಚರಣೆಗಳು ದೋಷಯುಕ್ತಗಳೆಂತಲೂ, ಅವರ ಪಾತಿತ್ಯಕ್ಕೆ ಕಾರಣವಾದವುಗಳೆಂತಲೂ ಹೇಳಬೇಕಾಗುವದು. ಇರಲಿ, ಇನ್ನು ಕಾದಂಬರಿಯ ಕಡೆಗೆ ಹೊರಳೋಣ.

ಪ್ರಿಯವಾಚಕರೇ, ಈ ಅಧಾರ್ಮಿಕ ದುರಾಶೆಯಿಂದಾಗುವ ದುಷ್ಪರಿಣಾಮವು ಮನಸ್ಸಿನ ಮೇಲೆ ಎಷ್ಟು ಬೇಗನೆ ಆಗುತ್ತದೆಂಬದಕ್ಕೆ ಸಾಧ್ವೀ ಪ್ಯಾರಿಬಾನುವೇ ಸಾಕ್ಷಿಯಾಗಿರುವಳು. ಮಾನಸಿಂಹನ ತಂತ್ರಕ್ಕೊಳಗಾಗಿದ್ದ ಚಾರಿಣಿಯ ಬೋಧದಿಂದ "ತಾನು ರಾಜರಾಜೇಶ್ವರಿಯಾಗಬಹುದಲ್ಲವೆ" ಎಂಬ ದುರಾಶಾ ಬೀಜವು ಹೃದಯದಲ್ಲಿ ಬಿತ್ತುವವರೆಗೆ ಆಕೆಯು ಎಷ್ಟು ಪತಿಪ್ರಾಣಳು, ಎಷ್ಟು ಉಲ್ಲಾಸವೃತ್ತಿಯವಳು ಇದ್ದಳೆಂಬದನ್ನು ವಾಚಕರಿಗೆ ಮತ್ತೆ ವಿವರಿಸಿ ಹೇಳುವ ಕಾರಣವಿಲ್ಲ; ಆದರೆ, ಆ ದುಷ್ಟ ಬೀಜವು ಮೊಳೆತು ಮರವಾಗುತ್ತ ಹೋದಂತೆ, ಆ ಸುಂದರಿಯ ಉಲ್ಲಾಸ

ವೃತ್ತಿಯು ಕಡಿಮೆಯಾಗುತ್ತ ಹೋಯಿತು; ಶಾಂತಿಯು ಹಾಳಾಗುತ್ತ ಹೋಯಿತು; ಪತಿಸೇವೆಯು ಚಂಚಲವೂ, ದೋಷಯುಕ್ತವೂ ಆಗುತ್ತ ಹೋಯಿತು; ಅನುಪಮೆಯ ಸಂಸಾರ ಸುಖವು ಪ್ರಾಪ್ತವಾಗಿದ್ದರೂ ಅದರಿಂದ ಆಕೆಗೆ ಸುಖಾನುಭವವು ಆಗದಂತಾಯಿತು! ಅದರಲ್ಲಿ ಆಕೆಯ ತಂದೆಯಾದ ಅಜೀಮಖಾನನು—"ಬಾದಶಹರ ಅತ್ಯಂತ ಪ್ರೀತಿಗೆ ಪಾತ್ರನಾಗಿದ್ದ ನಿನ್ನ ಗಂಡ ಖುಸ್ರುವು ಬಾದಶಹನಾಗುವದು ತೀರ ಶಕ್ಯವಾಗಿರುವದರಿಂದ ನೀನು ನಿನ್ನ ಗಂಡನನ್ನೂ ಪರಾಕ್ರಮಿಯಾಗಮಾಡು" ಎಂದು ಉತ್ತೇಜನಗೊಳಿಸಿದಾಗಿನಿಂದಂತು ಪ್ಯಾರಿಬಾನುವಿಗೆ ಏನು ಮಾಡಲಿ, ಏನು ಬಿಡಲಿ ಅನ್ನುವಹಾಗೆ ಆಯಿತು. ಆಕೆಗೆ ಊಟ-ಉಡಿಗೆಗಳು ಸೇರದಾದವು; ಆಕೆಯ ನಿದ್ದೆಯು ಹಾರಿಹೋಯಿತು; ಆಕೆಯು ತನ್ನ ಗಂಡನನ್ನು ಬೋಧಿಸಿ ತಂದೆಯ ವಿರುದ್ಧವಾಗಿ ಆತನು ಸಿಂಹಾಸನಪ್ರಾಪ್ತಿಗಾಗಿ ಯತ್ನಿಸಲು ಸಿದ್ಧವಾಗುವಂತೆ ಏನು ಉಪಾಯ ಮಾಡಲೆಂದು ಆಕೆಯು ಸದಾ ಚಿಂತಿಸತೊಡಗಿದಳು; ಒಟ್ಟಿಗೆ ದುರಾಶಾಪ್ರೇರಿತವಾದ ಅಸುರೀ ಮಹತ್ವಾಕಾಂಕ್ಷೆಯ ರೋಗದಿಂದ ಆಕೆಯು ನಿಸ್ತೇಜಳೂ, ಉದಾಸೀನಳೂ ಆಗಿ ದಿನದಿನಕ್ಕೆ ಕ್ಷೀಣವಾಗಹತ್ತಿದಳು.

ಈ ಮೇರೆಗೆ ತನ್ನ ತಂದೆಯು ಕುಡಿಸಿದ ಅಸುರೀ ಮಹತ್ವಾಕಾಂಕ್ಷೆಯ ವಿಷದಿಂದ ಅಸ್ಥಿರಳಾದ ಪ್ಯಾರಿಬಾನುವು ಒಂದು ದಿನ ರಾತ್ರಿ ತನ್ನ ಗಂಡನನ್ನು ಬೋಧಿಸಲು ಆತುರಪಟ್ಟು, ಆತನನ್ನು ಅತ್ತಿತ್ತ ಹುಡುಕಿದಳು; ಆದರೆ ಎಷ್ಟು ಹುಡುಕಿದರೂ ಆತನಗೊತ್ತು ಹತ್ತಲಿಲ್ಲ. ಕಡೆಗೆ ಆಕೆಯು ತನ್ನ ಸಖಿಯಾದ ಅಮೀರೆಯನ್ನು ಕರೆಸಿ—"ಅಮೀರೇ, ಹೋಗು, ಶಹಾಜಾದೇ ಸಾಹೇಬರು ಎಲ್ಲಿ ಇದ್ದಾರೆ ನೋಡು ಹೋಗು. ಅವರು ಎಲ್ಲಿ ಇದ್ದರೂ, ಏನು ಮಾಡುತ್ತಿದ್ದರೂ ನಾನು ಅಗತ್ಯವಾಗಿ ಈಗಲೇ ಕರೆದಿರುವೆನೆಂದು ಹೇಳಿ ಅವರನ್ನು ಕರೆದುಕೊಂಡ ಬಾ" ಎಂದು ಹೇಳಿ, ತಾನು ಒಂದು ಬಗೆಯಿಂದು ಪತಿಯ ಮೇಲೆ ಅಧಿಕಾರ ನಡಿಸುವ ಅಧರ್ಮ ಮಾಡುತ್ತೇನೆಂದಬರ ಅರವಿಲ್ಲದೆ ಆಕೆಯನ್ನು ಕಳಿಸಿದಳು. ಅಸುರೀ ಮಹತ್ವಾಕಾಂಕ್ಷೆಯಿಂದ ಪೀಡಿತರಾದವರಿಂದ ಇಂಥ ಪ್ರಮಾದಗಳಾಗುತ್ತಿರುವದು ಆಶ್ಚರ್ಯವಲ್ಲ. ಅಮೀರೆಯು ಎಷ್ಟು ಹುಡುಕಿದರೂ ಶಹಾಜಾದಾ

ಖುಸ್ರುವು ಸಿಗದ್ದರಿಂದ ಆಕೆಯೂ ಪ್ಯಾರೀಬಾನುವಿನ ಬಳಿಗೆ ಹಾಗೇ ಕೈಬೀಸುತ್ತ ಬಂದಳು; ಆದರೆ ಪ್ಯಾರೀಬಾನುವಿಗೆ ಸಮಾಧಾನವಾಗಲಿಲ್ಲ. ಈ ಕಾಲದಲ್ಲಿ ಪತಿಯು ಎಲ್ಲಿ ಇರಬಹುದೆಂದು ಆಕೆಯು ಯೋಚಿಸತೊಡಗಿದಳು. ಮತ್ತೆ ನಾಲ್ಕಾರು ಜನರನ್ನು ನಾಲ್ಕೂಕಡೆಗೆ ಹುಡುಕಲಿಕ್ಕೆ ಕಳಿಸಲಾ, ಅನ್ನುವಷ್ಟರಲ್ಲಿ ಆಕೆಗೆ ಖುಸ್ರುವಿನ ಪ್ರೀತಿಯ ಕುಂಜವನದೊಳಗಿನದೊಂದು ಲತಾಮಂಟಪದ ನೆನಪಾಯಿತು. ಕೂಡಲೆ ಆಕೆಯು ಕುಂಜವನಕ್ಕೆ ಸಾಗಿ ಲತಾಮಂಟಪದ ಬಳಿಗೆ ಹೋಗುತ್ತಿರಲು, ಅಲ್ಲಿ ಖುಸ್ರುವು ಒಂದು ಪತ್ರವನ್ನು ಕೈಯಲ್ಲಿ ಹಿಡಕೊಂಡು ದೀರ್ಘವಾಗಿ ಆಲೋಚಿಸುತ್ತ ಕುಳಿತುಕೊಂಡಿದ್ದನು. ಆಗ ಪ್ಯಾರೀಬಾನುವು ಕಾಲಸಪ್ಪಳವಾಗದಂತೆ ಮೆಲ್ಲಗೆ ಹೋಗಿ ಆ ಲತಾಮಂಟಪದಲ್ಲಿ ಒತ್ತಟ್ಟಿಗೆ ಮರೆಗೆ ನಿಂತುಕೊಂಡು ಪತಿಯ ಆಲೋಚನೆಯ ಗೂಢವನ್ನು ತಿಳಿಯಲು ಇಚ್ಛಿಸಿದಳು. ಹೀಗೆ ಪ್ಯಾರಿಬಾನುವು ಪತಿಯನ್ನು ವಂಚಿಸತೊಡಗಿದ್ದೊಂದು ಅಪರಾಧವೇ ಸರಿ. ಖುಸ್ರುವು ಚಿಂತಾಭಾರವನ್ನು ವಹಿಸಲಾರದೆ ದೀರ್ಘ ಶ್ವಾಸಬಿಟ್ಟು ತನ್ನೊಳಗೆ—"ಖುದಾ, ನಾನು ಈ ಪ್ರಸಂಗದಲ್ಲಿ ಏನು ಮಾಡಲಿ, ನನಗೆ ಹಾದಿಯನ್ನು ತೋರಿಸು. ನಾಲ್ಕೂಕಡೆಗೆ ನನಗೆ ಕಗ್ಗತ್ತಲೆಯು ಮುಸುಕಿರುವದು. ಒಂದು ಕಡೆ ಬಾದಶಹರ ಅಪ್ಪಣೆಯು ನನಗೆ ಇಲ್ಲಿಯೇ ಇರೆಂದು ಹೇಳುತ್ತಿರುವದು; ಮತ್ತೊಂದು ಕಡೆಗೆ ಸುಲ್ತಾನಸೇಲೀಮರವರ ಅಪ್ಪಣೆಯು ಅತ್ತಕಡೆಗೆ ಬಾರೆಂದು ಕರೆಯುತ್ತಿರುವದು. ಅತ್ತ ಅವ್ವನು ನನಗೆ—"ತಂದೆಯೇ ಎಲ್ಲರಲ್ಲಿ ಶ್ರೇಷ್ಠನೂ, ಪೂಜ್ಯನೂ ಆಗಿದ್ದು, ತಂದೆಯ ಅಪ್ಪಣೆಯನ್ನು ಮೀರುವವನು ಪಾಪಿಯಾಗಿ ನರಕಕ್ಕೆ ಇಳಿಯುವನೆಂದು ಹೇಳಿರುವಳು. ಇತ್ತ ಅಕಬರ ಬಾದಶಹರು ನನಗೆ—"ಖುಸ್ರೂ, ನಾನು ಕೆಲವೊಂದು ಮಹತ್ವದ ರಾಜಕಾರಣದ ಸಲುವಾಗಿ ಆಗ್ರಾಕ್ಕೆ ಹೋಗುತ್ತಿರುವೆನು; ಆದ್ದರಿಂದ ನಾನು ಅಲ್ಲಿಂದ ತಿರುಗಿ ಬರುವವರೆಗೆ ಸಿಕ್ರಿಯ ಸಂರಕ್ಷಣದ ಭಾರವನ್ನು ನಿನ್ನಮೇಲೆ ಹಾಕಿರುತ್ತೇನೆ. ನನ್ನಿಂದ ಎರಡನೆಯ ಅಪ್ಪಣೆಯು ಆಗುವವರೆಗೆ ಎರಡನೆಯ ಕಡೆಗೆ ನೀನು ಒಂದು ಹೆಜ್ಜೆಯನ್ನೂ ಎತ್ತಿ ಇಡಬೇಡ" ಎಂದು ಹೇಳಿರುವರು. ಅಂದಬಳಿಕ ಈಗ ನಾನು ಏನು ಮಾಡಲಿ? ಎಂದು ಪ್ರಶ್ನಮಾಡಿಕೊಂಡು ಪುನಃ ಪತ್ರವನ್ನು ಓದಿಕೊಂಡು—"ಅಲಹಾಬಾದಕ್ಕೆ ನನ್ನ ತಂದೆಯ ಬಳಿಗೆ

ಹೋಗಲಿಕ್ಕೆ ನನಗೆ ಅಂಜಿಕೆ ಯಾಕೆ ಬರಬೇಕು? ಮೇಲಾಗಿ ಅಲ್ಲಿ ನನ್ನ ಪ್ರೇಮಲ ಸ್ವಭಾವದ ಅವ್ವನು ಇರುವಳು. ನಮ್ಮ ಅವ್ವನು ದೇವಿಯ ಸ್ವರೂಪಳಿದ್ದು, ನನ್ನ ಕಲ್ಯಾಣ ಮಾಡುವವಳಿರುವಳು. ಆಕೆಯು ನನಗೆ ನಾಲ್ಕು ಹಿತದ ಮಾತುಗಳನ್ನು ಹೇಳುವಳು; ಆದ್ದರಿಂದ ನಾನು ನನ್ನ ತಂದೆ ಯಬಳಿಗೆ ಹೋಗುವದೇ ಒಳ್ಳೆಯದು, ಅನ್ನುತ್ತಿರಲು, ಕೂಡಲೆ ಮರೆಗೆ ನಿಂತಿದ್ದ ಪ್ಯಾರೀಬಾನುವು—"ಬೇಡ, ಅಲಹಾಬಾದಕ್ಕೆ ಹೋಗುವದು ಬೇಡ; ಯಾಕಂದರೆ ಅಲ್ಲಿಗೆ ಹೋಗುವದರಿಂದ ನೀವು ಮಹಾ ಸಂಕಟಕ್ಕೆ ಗುರಿಯಾಗುವಿರಿ" ಎಂದು ಹೇಳಿದಳು.

ಹೀಗೆ ಅಕಲ್ಪಿತವಾಗಿ ಯಾರೋ ನುಡಿದದ್ದನ್ನು ಕೇಳಿ ಖುಸ್ರುವು ಚಕಿತನಾಗಿ ಅತ್ತಿತ ನೋಡುತ್ತಿರಲು, ಪ್ಯಾರಿಬಾನುವು ಪತಿಯಬಳಿಗೆ ಬಂದು ಪ್ರೇಮದಿಂದ—

ಪ್ಯಾರಿಬಾನು—ನಾಥ, ತಮ್ಮ ವಿಚಾರಗಳಿಗೆ ನಾನು ಪ್ರತಿಬಂಧ ವನ್ನುಂಟು ಮಾಡಿದ್ದಕ್ಕಾಗಿ ನನ್ನನ್ನು ಕ್ಷಮಿಸಬೇಕು. ಈಗಿನ ನಮ್ಮ ಪ್ರತಿಕೂಲ ಪರಿಸ್ಥಿತಿಯ ವಿಷಯವಾಗಿ ನಾನು ಪೂರ್ಣ ವಿಚಾರಮಾಡಿ ದ್ದೇನೆ, ತಾವು ಈಗ ಅಲಹಾಬಾದಕ್ಕೆ ಹೋಗುವದು ಬೇಡ ಬಾದಶಹರ ಅಪ್ಪಣೆಯನ್ನು ಮೀರುವದು ನೆಟ್ಟಗಲ್ಲ; ಆದ್ದರಿಂದ ನೀವು ಇಲ್ಲಿಯೇ ಇರಬೇಕು.

ಖುಸ್ರು—ಹಾಗಾದರೆ ತಂದೆಯ ಅಪ್ಪಣೆಯನ್ನು ಮೀರುವದು ಯೋಗ್ಯ ವಾಗಬಹುದೆ?

ಪ್ಯಾರಿಬಾನು—ಅದನ್ನಾದರೂ ನಾನು ಯೋಗ್ಯವೆಂದು ಹೇಳುವದಿಲ್ಲ; ಆದರೆ ಈ ಪ್ರಸಂಗದಲ್ಲಿ ಅಲಹಾಬಾದದಿಂದ ಬಂದ ಅಪ್ಪಣೆಯನ್ನು ತಾವು ಬಾದಶಹರವರಿನ ಪತ್ರ ಮುಖದಿಂದ ತಿಳಿಸಿ, ಅವರು ಹೇಳಿದಂತೆಯಾದರೂ. ಮಾಡುವದು ನನಗೆ ನೆಟ್ಟಗೆ ಕಾಣುತ್ತದೆ. ಆಗ್ರಾ ಪಟ್ಟಣವೇನು ಇಲ್ಲಿಂದ ಬಹಳ ದೂರ ಇರುವದಿಲ್ಲ.

ಖುಸ್ರು—( ಸ್ವಲ್ಪ ಹೊತ್ತು ಆಲೋಚಿಸಿ )ಪ್ಯಾರೀ, ನಿನ್ನ ಆಲೋ ಚನೆಯು ಬಹು ಯೋಗ್ಯವಾದದ್ದು. ನಿನ್ನ ಸಮಂಜಸತನವನ್ನು ನೋಡಿ

ದರೆ ನೀನು ರಾಜರಾಜೇಶ್ವರಿಯಾಗಲಿಕ್ಕೆ ಯೋಗ್ಯಳಿರುವೆಯೆಂದು ಹೇಳ ಬೇಕಾಗುತ್ತದೆ.

ಪ್ಯಾರಿ—ನಾಥ, ತಾವು ಆಕಬರ ಬಾದಶಹರ ಪಶ್ಚಾತ್ ಬೇಗನೆ ದಿಲ್ಲಿಯ ಸಿಂಹಾಸನವೇರುವ ಸಂಭವವಿರುವದರಿಂದ, ನಾನು ರಾಜರಾಜೇಶ್ವರಿಯಾಗುವ ಸಂಬಂಧದ ತಮ್ಮ ಮಾತು ಬೇಗನೆ ಸತ್ಯವಾಗುವದರಲ್ಲಿ ಸಂಶಯವಿಲ್ಲ.

ಖುಸ್ರು—(ಆಶ್ಚರ್ಯ ಮಗ್ನನಾಗಿ)ಏನಂದಿ ಪ್ಯಾರೀ, ಸುಲ್ತಾನಸೇಲೀಮರವರು ಬಾದಶಹರಾಗುವ ಮೊದಲೇ ನಾನು ಬಾದಶಹನಾಗುವೆನೆ? ನಿನಗೆ ಹುಚ್ಚು ಹಿಡಿಯಿತೋ ಏನು? ಅಥವಾ ವಿನೋದಕ್ಕಾಗಿ ಹೀಗೆ ನೀನು ಹೇಳುವೆಯೋ? ಪ್ಯಾರೀ, ಇಂಥ ದ್ರೋಹದ ಕಲ್ಪನೆಯನ್ನು ಮನಸ್ಸಿನಲ್ಲಿ ತರಬಾರದು ಕಂಡೆಯಾ? ನನ್ನ ತಾಯಿಯ ಉಪದೇಶದಿಂದ ನಾನು ಅತ್ಯಂತ ಪಿತೃಭಕ್ತನಾಗಿರುವೆನು. ಪಿತೃದ್ರೋಹದ ಪಾಪಕ್ಕೆ ನಾನು ಬಹಳವಾಗಿ ಅಂಜುತ್ತೇನೆ. ನೀನು ಇಂಥ ಘಾತಕವಾದ ಮಹತ್ವಾಕಾಂಕ್ಷೆಯ ಬಲೆಗೆ ಬೀಳುವದು ಯೋಗ್ಯವಲ್ಲ.

ಪ್ಯಾರಿಬಾನು—ನಾಥ, ಇದು ನನ್ನಂಥ ಒಬ್ಬ ಕ್ಷುದ್ರ ಹೆಂಗಸಿನ ಮಹತ್ವಾಕಾಂಕ್ಷೆಯೆಂದು ತಾವು ಸರ್ವಥಾ ತಿಳಿಯಬಾರದು. ನನ್ನ ತಂದೆಯ ಮುಖಾಂತರವಾಗಿ ನನಗೆ ಇಂದು ಎಷ್ಟೋ ಮಹತ್ವದ ರಾಜಕಾರಣದ ಸಂಗತಿಗಳು ತಿಳಿದಿರುವವು. ರಾಜಕಾರಣ ಪಟುಗಳಾದ ನಿಮ್ಮ ಸೋದರಮಾವ ಮಾನಸಿಂಹ ಮಹಾರಾಜರವರೇ ನನ್ನ ತಂದೆಯ ಮುಂದೆ ಈ ಮಾತನ್ನು ಸ್ಪಷ್ಟವಾಗಿ ಆಡಿತೋರಿಸಿದರಂತೆ!

ಖುಸ್ರು—ಪ್ಯಾರೀ, ಈ ಮಾತಿಗೆ ಪ್ರಮಾಣಗಳೇನು ಹೇಳು ನೋಡವಾ!

ಪ್ಯಾರಿ—ನಾಥ, ಸುಲ್ತಾನ ಸೇಲೀಮರವರು ಅಲಹಾಬಾದದಿಂದ ಬಿಹಾರದವರೆಗೆ ಯಾವತ್ತೂ ಪ್ರದೇಶವನ್ನು ಸ್ವಾಧೀನ ಪಡಿಸಿಕೊಂಡು ಅಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿರುವರಲ್ಲದೆ, ದೊಡ್ಡ ಸೈನ್ಯದೊಡನೆ ಆಗ್ರಾ ಪಟ್ಟಣವನ್ನು ಮುತ್ತಿ ವಶಮಾಡಿಕೊಂಡು ಅದನ್ನು ಸುಲಿಯಬೇಕೆಂದು ಹೊರಟಿರುವರಂತೆ!

ಖುಸ್ರು—( ಅತ್ಯಂತ ಆಶ್ಚರ್ಯದಿಂದ ) ಏನಂದಿ ಪ್ಯಾರೀ? ನೀನು ಎಂಥ ಅಸಂಭವ ಮಾತು ಹೇಳುವೆ? ನಮ್ಮ ಅಜ್ಜಂದಿರ ತರುವಾಯದಲ್ಲಿ ಹಕ್ಕಿನಿಂದ ದಿಲ್ಲಿಯ ಬಾದಶಹರಾಗುವ ನಿಶ್ಚಯವುಳ್ಳ ನನ್ನ ತಂದೆ ಸುಲ್ತಾನ ಸೇಲೀಮರು ಬಂಡುಗಾರರಾಗುವ ಸಂಭವವಾದರೂ ಇರುವದೆ? ಆದರೆ ನಿನ್ನ ತಂದೆಯು ಹೇಳುತ್ತಿರುವ ಮಾತಾದರೂ ನಾನು ಸುಳ್ಳೆಂದು ಹೇಗೆ ತಿಳಿಯಲಿ?

ಪ್ಯಾರಿ—ನಾಥ, ಈ ಮಾತನ್ನು ಸರ್ವಥಾ ಸುಳ್ಳೆನ್ನಲಿಕ್ಕೆ ಬರುವ ಹಾಗಿಲ್ಲ. ಹೀಗಿದ್ದದ್ದರಿಂದಲೇ ಬಾದಶಹರು ಇಂಥ ಬೇನೆಯಲ್ಲಿ ಆಗ್ರಾ ಪಟ್ಟಣಕ್ಕೆ ಹೋಗಿರುವರು. ನಿಮ್ಮ ಮೇಲೆ ಬಾದಶಹರ ಪ್ರೀತಿಯು ವಿಶೇಷ ವಾಗಿ ಇದ್ದು, ನಿಮ್ಮನ್ನು ಅವರು ಒಂದು ಕ್ಷಣವಾದರೂ ಅಗಲದೆಯಿರುವದ ರಿಂದ, ಬಂಡುಗಾರರಾದ ಮಾವಂದಿರಿಗೆ ಪಟ್ಟಕೊಡದೆ, ನಿಮಗೆ ಪಟ್ಟ ಕೊಡುವರೆಂದು ಶ್ರೇಷ್ಠ ಮುತ್ಸದ್ದಿಗಳು ಪಡುತ್ತಿರುವ ಅಭಿಪ್ರಾಯವನ್ನೇ ನಾನು ತಮ್ಮ ಮುಂದೆ ಆಡಿತೋರಿಸಿದೆನು; ಆದರೆ ಈ ಪ್ರಸಂಗದಲ್ಲಿ ತಾವು ಸುಮ್ಮನೆ ಕೈಮುಚ್ಚಿಕೊಂಡು ದೈವವಾದಿಗಳಾಗಿ ಕುಳಿತುಕೊಳ್ಳದೆ, ಪುನಃ ಪೂರ್ವಕವಾಗಿ ಪರಾಕ್ರಮವನ್ನು ತೋರಿಸಬೇಕು. ನಾಥ, ನನ್ನಮಾತನ್ನು ತಾವು ದುರ್ಲಕ್ಷಿಸಬಾರದು. ನನಗೆ ತಮ್ಮ ಹೊರತು ಎರಡನೆಯ ಆಧಾರ ವಿಲ್ಲದ್ದರಿಂದ, ಅವಿಚಾರದಿಂದ ನಾನು ಏನಾದರೂ ಹೇಳಿ ತಮ್ಮನ್ನು ಸಂಕ ಟಕ್ಕೆ ಗುರಿಮಾಡಲಾರೆನು. ನೀವು ಬಾದಶಹರಿಗೆ ಇಷ್ಟು ಪ್ರಿಯರಾಗಿರುವ ದನ್ನು ನೋಡಿ ಮಾವನವರು, ತಮ್ಮ ಸಿಂಹಾಸನದ ಪ್ರಾಪ್ತಿಗೆ ನೀವೊಬ್ಬರೇ ಬಾಧಕರಾಗಿರುವಿರೆಂದು ತಿಳಿದು, ಆ ಬಾಧೆಯನ್ನು ದೂರಮಾಡುವದಕ್ಕಾ ಗಿಯೇ ನಿಮ್ಮನ್ನು ಈಗ ಅಲಹಾಬಾದಕ್ಕೆ ಕರೆಸಿರುವರೆಂದು ಊಹಿಸಬೇಕಾ ಗುತ್ತದೆ. ಮೇಲಾಗಿ ಹಿಂದುಚಾರಿಣಿಯರ ಭವಿಷ್ಯವು ಎಂದೂ ಸುಳ್ಳಾಗು ತ್ತಿರುವದಿಲ್ಲ. ನನಗೆ ಒಬ್ಬ ಚಾರಿಣಿಯು ಸತತವಾಗಿ ತಾವು ದೀರ್ಘ ಪ್ರಯತ್ನ ಮಾಡಿದರೆ ಮಾತ್ರ ತಮಗೆ ಸಿಂಹಾಸನ ಪ್ರಾಪ್ತಿಯಾಗುವದೆಂದು ಭವಿಷ್ಯ ಹೇಳಿರುವಳು!

ಈಮೇರೆಗೆ ನುಡಿದು ಪ್ಯಾರಿಬಾನು ಚಾರಿಣಿಯ ಭವಿಷ್ಯವಾದನದ ವೃತ್ತಾಂತವನ್ನೆಲ್ಲ ಉಪ್ಪುಕಾರ ಹಚ್ಚಿ ಖುಸ್ರುವಿಗೆ ಹೇಳಿದಳು! ಅಸುರೀ

ಮಹತ್ವಾಕಾಂಕ್ಷೆಯ ಪ್ರಭಾವವೇ ಅಂತಹದು! ತನ್ನ ಗಂಡನು ಪಿತೃದ್ರೋಹಿ ಯಾಗಿಯಾದರೂ ದಿಲ್ಲಿಯ ಸಿಂಹಾಸನವೇರಬೇಕೆಂದು ಪ್ಯಾರಿಬಾನುವು ಇಚ್ಛಿಸತೊಡಗಿದ್ದಳು; ಆದರೆ ಖುಸ್ರುವು ಆಕೆಯ ಮಾತಿಗೆ ಉತ್ತರಕೊಡದೆ ದೀರ್ಘ ವಿಚಾರಕ್ಕೊಳಗಾಗಿ ಸುಮ್ಮನೆ ಕುಳಿತುಕೊಂಡನು. ಬಹಳ ಹೊತ್ತಾದರೂ ಪತಿಯು ಮಾತಾಡದಿರುವದನ್ನು ನೋಡಿ ಪ್ಯಾರಿಬಾನುವು—"ನಾಥ, ಅಂಥ ದೀರ್ಘವಿಚಾರಮಾಡುವದೇನದು? ತಮ್ಮ ಮನಸ್ಸಿಗೆ ಬಾರದಿದ್ದರೆ ಈ ವಿಚಾರವನ್ನು ಬಿಟ್ಟುಬಿಡಿರಿ. ತಾವು ಪಿತೃದ್ರೋಹಿಗಳಾಗಬೇಕೆಂದು ನಾನು ಹೇಳುವದಿಲ್ಲ, ನಿಮ್ಮ ಸಂರಕ್ಷಣ ಮಾಡಿಕೊಳ್ಳಿರಿಂದು ಹೇಳುವೆನು. ದೈವವೆಂದು ಕುಳಿತು ಕಾರಾಗೃಹವಾಸಿಗಳಾಗಿ ಗುಪ್ತ ಶತ್ರುವಿಗೆ ಕುತ್ತಿಗೆ ಕೊಡುವದಕ್ಕಿಂತ, ಪರಾಕ್ರಮದಿಂದ ಉದ್ದಿಷ್ಟ ಹೇತುವನ್ನು ಸಾಧಿಸುವದು ಯೋಗ್ಯವೆಂದು ನನಗೆ ತೋರುತ್ತದೆ. ನೋಡಿದತ್ತ ಗುಪ್ತ ಕಾರಸ್ಥಾನಗಳು ನಡೆದಿರುವವು. ಒಬ್ಬರು ಒಬ್ಬರನ್ನು ನಂಬುವ ಹಾಗಿಲ್ಲ. ಇಂಥ ಪ್ರಸಂಗದಲ್ಲಿ ಹೀಗೆ ನೀವು "ದೈವವು ದೈವವು" ಎಂದು ಸುಮ್ಮನೆ ಕೈಮುಚ್ಚಿಕೊಂಡು ಉದಾಸೀನರಾಗಿ ಕುಳಿತುಕೊಂಡರೆ, ಪರಿಣಾಮವು ಹೇಗಾಗಬೇಕು? ಇತ್ತಿತ್ತ ನೀವು ಬಹಳ ತೇಜೋಹೀನರಾಗಿರುವಿರಿ. ರಾತ್ರಿ ನಿಮಗೆ ಕಣ್ಣುತುಂಬ ನಿದ್ದೆಯಿಲ್ಲ. ಮೊದಲಿನಹಾಗೆ ನೀವು ಊಟ ಮಾಡುವದಿಲ್ಲ. ನಿಮ್ಮ ಈ ಕ್ಷೀಣ ದೇಹವನ್ನು ನೋಡಿದರೆ ನನ್ನ ಎದೆಬಿಚ್ಚಿ ಹೋಳಾಗುತ್ತದೆ. ನಾಥ, ನಿಮ್ಮ ಸ್ಥಿತಿಯು ಹೀಗೆ ಏಕಾಯಿತು?

ಹೆಂಡತಿಯ ಈ ಮಾತುಗಳನ್ನು ಕೇಳಿ ಖುಸ್ರುವು ನಿಟ್ಟುಸಿರು ಬಿಟ್ಟು ಆಕೆಯನ್ನು ಕುರಿತು—ಪ್ರಿಯೆ, ದಿಲ್ಲೀಪತಿಯ ವಂಶದಲ್ಲಿ ಜನ್ಮತಾಳುವದು ಇಷ್ಟು ದೊಡ್ಡ ಭಯಂಕರ ಪಾಪವಿರುತ್ತದೆಂಬದನ್ನು ನಾನು ಅರಿತಿದ್ದಿಲ್ಲ. ಸಿಂಹಾಸನ ಬಾಧ್ಯತೆಯುಳ್ಳವನು ಇಷ್ಟು ಭೀಷಣ ಜ್ವಾಲೆಯಲ್ಲಿ ತಳಮಳಿಸಬೇಕಾಗುವದೆಂಬದು ಈ ಮೊದಲೆ ನನಗೆ ಗೊತ್ತಾಗಿದ್ದಿಲ್ಲ. ಕ್ಷಣಕ್ಷಣಕ್ಕೆ ನನ್ನ ದೇಹವು ದಗದಗಿಸಿ ಉರಿಯುತ್ತಿರುವದು! ಆದರೆ ಇದರ ಕಾರಣವೇನೆಂಬದನ್ನು ಖುದಾನೇ ಬಲ್ಲನು! ಹೀಗೆ ಈ ರಾಜಕಾರಣದ ಗೊಂದಲದ ವಿಚಾರಮಾಡುತ್ತ ಮಾಡುತ್ತ ಕಡೆಗೆ ನನಗೆ ಹುಚ್ಚು ಎಲ್ಲಿ ಹಿಡಿಯುತ್ತದೋ ಏನೋ? ಪ್ರಿಯೇ, ನೀನು ನನ್ನವಳಿರುತ್ತೀ; ನಾನು ನಿನ್ನವನಿರುತ್ತೇನೆ,

ನನಗೆ ಸಂತಾಪವಾಗುತ್ತಿರುವಾಗೆಲ್ಲ ನಿನ್ನ ಸುಖ ಸ್ಪರ್ಶದಿಂದ ನನಗೆ ಬಹು ಮಟ್ಟಿಗೆ ಸಮಾಧಾನವಾಗುತ್ತಿತ್ತು; ಆದರೆ ಖುದಾನು ಇಂದು ನಿನ್ನ ಬುದ್ಧಿಯಲ್ಲಿಯೂ ವಿಕಾರವನ್ನುಂಟು ಮಾಡಿದಹಾಗೆ ಕಾಣುತ್ತದೆ. ನಿನ್ನ ಹೃದಯದಲ್ಲಿಯೂ ಯಾರೋ ದುಷ್ಟರು ಆ ಅಸುರೀ ಮಹತ್ವಾಕಾಂಕ್ಷೆಯ ವಿಷವನ್ನು ಸುರುವಿದ ಹಾಗೆ ಕಾಣುತ್ತದೆ; ಯಾರು ಸುರವುವದೇನು? ಆ ದುಷ್ಟ ಹಿಂದೂ ತಾಪಸಿಯೇ ನಿನ್ನ ಹೊಟ್ಟೆಯಲ್ಲಿ ಆ ವಿಷವನ್ನು ಸುರುವಿರುವಳು. ನಿನ್ನ ತಂದೆಯ ಉತ್ತೇಜನದಿಂದ ನಿನ್ನಲ್ಲಿಯ ಆ ವಿಷದ ತೀವ್ರತೆಯು ಮತ್ತಿಷ್ಟು ಹೆಚ್ಚಾಗಿರುವದು. ನಿನ್ನ ಸುಖದ ಜೀವನದಲ್ಲಿ ಅವರಿಬ್ಬರೂ ವಿಷವನ್ನು ಕಲಿಸಿರುವರು. ಪ್ರಿಯೇ, ನೀನು ಗುಪ್ತರೀತಿಯಿಂದ ಆ ವಿಷಪಾನಮಾಡಿ ಅದನ್ನು ನನಗೂ ಕುಡಿಸಿ ತಳಮಳವನ್ನುಂಟು ಮಾಡತೊಡಗಿರುತ್ತೀ. ಹಾಯ್! ಪ್ಯಾರೀ, ಇಷ್ಟೇಕೆ ನೀನು ನಿಷ್ಠುರಳಾದೆ? ನಿನ್ನ ಮೊದಲನ ಸೌಜನ್ಯವು ಎಲ್ಲಿ ಹೋಯಿತು? ವಿನಯವು ಎಲ್ಲಿ ಮರೆಯಾಯಿತು? ಈಗ ನೀನು ನನ್ನ ಇಚ್ಛೆಯಿಲ್ಲದಿದ್ದರೂ ಒತ್ತಾಯದಿಂದ ಅಸುರೀ ಮಹತ್ವಾಕಾಂಕ್ಷೆಯ ವಿಷವನ್ನು ಕುಡಿಸತೊಡಗಿರುವೆಯಲ್ಲ! ನೀನು ಮೊದಲಿನ ನನ್ನ ಪ್ರಿಯ ಪ್ಯಾರಿಬಾನುವೇ ಇರುವೆಯೊ? ನಿನ್ನ ಉಪದೇಶವನ್ನು ಕೇಳಿದ ಕ್ಷಣದಲ್ಲಿ ನನ್ನ ಮನಸ್ಸಿನೊಳಗೆ—"ಪ್ರಯತ್ನದಿಂದ ಏನಾಗಲಿಕ್ಕಿಲ್ಲ? ಕರ್ತೃಶಕ್ತಿಯ ಬಲದಿಂದ ಶತ್ರು-ಮಿತ್ರರೆಲ್ಲರನ್ನು ತನಗೆ ಅಂಕಿತರನ್ನಾಗಿ ಮಾಡಿಕೊಳ್ಳಲಿಕ್ಕೆ ಬರಲಿಕ್ಕಿಲ್ಲವೇ? ಇಂದು ಕಂಟಕಮಯವಾಗಿ ತೋರುತ್ತಿರುವ ಹಾದಿಯು ಪ್ರಯತ್ನದಿಂದ ನಾಳೆ ನಿಷ್ಕಂಟಕವು ಯಾಕೆ ಆಗಲಿಕ್ಕಿಲ್ಲ?" ಎಂಬ ವಿಚಾರಗಳು ಉತ್ಪನ್ನವಾಗಿ "ಇನ್ನು ಏನು ಮಾಡಲಿ, ಹೇಗೆ ಮಾಡಲಿ" ಎಂಬ ವಿಚಾರದಿಂದ ಚಿತ್ತವು ತಳಮಳಿಸತೊಡಗಿತು! ಪ್ರೀಯೆ, ನನಗೆ ಈಗ ಸಿಂಹಾಸನವು ದೊರೆಯಬೇಕಾದರೆ ಮಟ್ಟಮೊದಲು, ನಾನು ನನ್ನ ತಂದಿಯ ವಿರುದ್ಧವಾಗಿ ನಡೆದು, ಅದರಿಂದ ತಾಯಿಯ ಮನಸ್ಸಿಗೂ ದುಃಖವನ್ನುಂಟುಮಾಡಬೇಕಾಗುವದು. ಮೇಲಾಗಿ ಆಜ್ಜ ಅಕಬರ ಬಾದಶಹರವರ ಮನಸ್ಸಿನಲ್ಲಿ ಯಾರಿಗೆ ಪಟ್ಟವನ್ನು ಕೊಡಬೇಕೆಂಬದು ಯಾರಿಗೂ ಸ್ಪಷ್ಟವಾಗಿ ಗೊತ್ತಾಗಿರುವದಿಲ್ಲ. ಪ್ರಿಯೇ, ನನ್ನ ತಂದೆ ಸುಲ್ತಾನ ಸೇಲೀಮರವರು ಬಾದಶಹರಿಗೆ ಒಬ್ಬರೇ ಒಬ್ಬ ಮಗನಾಗಿ

ಉಳಿದಿರುವದಿಲ್ಲವೆ? ಇಂಥವರ ಮೇಲೆ ಪುತ್ರ ವತ್ಸಲರಾದ ಮುಪ್ಪಿನ ಬಾದಶಹರು, ಮುನಿದು ನಿಷ್ಠುರರಾಗಿ ಅವರಿಗೆ ಪಟ್ಟಕೊಡದೆ ನನಗೆ ಪಟ್ಟ ಕೊಟ್ಟಾರೆಂದು ನನಗಂತು ತೋರುವದಿಲ್ಲ; ಅಂದಬಳಿಕ ನಾನು ದೀರ್ಘ ಪ್ರಯತ್ನಮಾಡಿ ನಿನ್ನ ತಂದೆಯು ಹಾಗು ನನ್ನ ಮಾವನ ಸಹಾಯದಿಂದ ದಿಲ್ಲಿಯ ಪಟ್ಟವನ್ನು ಸಂಪಾದಿಸಿದರೆ, ಅಜ್ಜನದ್ರೋಹವನ್ನೂ ಕಟ್ಟಿಕೊಂಡಂ ತಾಗುವದಿಲ್ಲವೆ? ಇಂಥ ದ್ರೋಹಿಯಾದ ನನಗೆ ಬಾದಶಾಹಿಯ ಉಪಭೋ ಗವು ದಕ್ಕಬಹುದೆ? ದಕ್ಕಿದರೂ ಅದು ಸುಖಕರವಾಗಬಹುದೇ? ಪ್ರಿಯೇ, ಇಂಥ ಭಯಂಕರ ವಿಚಾರದ ಬಲೆಯಲ್ಲಿ ನನ್ನನ್ನು ಸಿಲುಕಿಸಿ ತ್ರಾಸಗೊಳಿಸು ವಷ್ಟು ನಿಷ್ಠುರಳು ನೀನು ಹೇಗೆ ಆದೆ?

ಈ ಮೇರೆಗೆ ನುಡಿಯುತ್ತಿರುವ ಕೋಮಲ ಹೃದಯದ ಖುಸ್ರುವಿನ ಹೃದಯವು ಕರಗಿ ಆತನ ಕಣ್ಣೀರುಗಳು ಧಾರೆಯಿಟ್ಟು ಸುರಿಯಹತ್ತಿ, ಅವು ಪ್ಯಾರಿಬಾನುವಿನ ಗಲ್ಲಗಳ ಮೇಲೆ ಬೀಳಹತ್ತಿದವು. ಪತಿಯ ಈ ದುಃಖ ವನ್ನು ನೋಡಿ ಸಾಧ್ವೀ ಪ್ಯಾರಿಬಾನುವಿನ ಹೃದಯವೂ ಕರಗಿ, ಆಕೆಯ ಕಣ್ಣೀರುಗಳೂ ಸೋರಹತ್ತಲು, ಆ ನೀರಿನ ಪ್ರವಾಹದಲ್ಲಿ ಆಕೆಯ ಅಸುರೀ ಮಹತ್ವಾಕಾಂಕ್ಷೆಯೂ, ಭವಿಷ್ಯತ್ಕಾಲದ ಸುಖದ ಕಲ್ಪನೆಯೂ ತೇಲಿ ಹೋದವು. ಆಕೆಯು ತನ್ನ ಪ್ರಿಯಕರನ ಕಣ್ಣು ಒರಿಸುತ್ತ ಆತನನ್ನು ಆಲಿಂಗಿಸಿ—"ನಾಥ ! ನಮಗೆ ಸಿಂಹಾಸನವೂ ಬೇಡ, ಐಶ್ವರ್ಯವೂ ಬೇಡ; ಆದರಂತೆ ರಾಜಸಂಸಾರದೊಳಗಿನ ದೊಡ್ಡ ದೊಡ್ಡವರ ವಿಲಾಸದ ಭೋಗಗಳಂತು ನಮ್ಮ ನೆರಳಿಗೇ ಬೇಡ? ತಮ್ಮ ಮುಂದೆ ನನಗೆ ಬಾದ ಶಾಹೀ ಸಿಂಹಾಸನವೂ, ಹಿಂದುಸ್ಥಾನದ ಅಧಿಪತ್ಯವೂ ತುಚ್ಛವಾಗಿರುವವು. ನಿಮಗೆ ದುಃಖವಾಗುವಂಥ ಯಾವ ಕೆಲಸವೂ ಇನ್ನು ನನ್ನ ಕೈಯಿಂದ ಆಗ ಲಿಕ್ಕಿಲ್ಲ. ನಡೆಯಿರಿ, ಈ ಫತ್ತೇಪುರವನ್ನೂ, ಅರಮನೆಯನ್ನೂ ಬಿಟ್ಟು ಎಲ್ಲಿಗಾದರೂ ಅರಣ್ಯಕ್ಕೆ ಹೋಗಿ ಹುಲ್ಲಗುಡಿಸಿಲಿನಲ್ಲಿದ್ದು ಶಾಂತಿಸುಖವನ್ನು ಅನುಭೋಗಿಸುವಾ. ಆಗ್ರಾಪಟ್ಟಣಕ್ಕೆ ಇರುವ ನಮ್ಮ ಸಂಬಂಧವನ್ನೆಲ್ಲ ಬಿಟ್ಟುಬಿಡೋಣ. ಕನಕ-ಕಾಮಿನಿಯರಿಗೆ ಇಷ್ಟು ಮಹತ್ವವಿರುವ, ಹಾಗು ಸ್ನೇಹ-ಪ್ರೇಮ-ಭಕ್ತಿಗಳಿಗೆ ಯೋಗ್ಯ ಪ್ರತಿಫಲ ದೊರೆಯದಿರುವ, ಆದರಂತೆ ವಿಶ್ವಾಸಕ್ಕೆ ಪಾತ್ರರಾದ ಮಿತ್ರರೇ ಇಲ್ಲದಿರುವ, ಮತ್ತು ತನ್ನವರಾರು ಅನ್ಯ

ರಾರು ಎಂಬದನ್ನು ತಿಳಿಯುವವೇ ಕಠಿಣವಾಗಿರುವ, ಹಾಗೆಯೇ ಹಿಂಸೆ, ದ್ವೇಷ, ಸಂಶಯ, ಅವಿಶ್ವಾಸಗಳು ಕಾರಣವಿಲ್ಲದೆ ಬಾಧಿಸುತ್ತಿರುವ ಈ ಸ್ಥಳದಲ್ಲಿ, ಅಥವಾ ರಾಜಸಂಸಾರದಲ್ಲಿ ನಾಥ, ಇನ್ನು ನಾವು ಯಾಕೆ ಇರ ಬೇಕು? ನಾವು ಇಂಥ ಈ ವಿಷಮಯ ಜಗತ್ತನ್ನು ಬಿಟ್ಟು ಎಲ್ಲಿಗಾದರೂ ದೂರ ದೂರ ಹೋಗಿ ಇದ್ದುಬಿಡೋಣ! ಹೃದಯವನ್ನು ಸಾಮರ್ಥ್ಯ ಸಂಪನ್ನವಾಗ ಮಾಡಿ, ಶಾಂತಿಯನ್ನುಂಟುಮಾಡುವ ನಿರ್ಜನ ಪ್ರದೇಶವನ್ನೇ ನಾವು ಇನ್ನು ಸೇರೋಣ. ಹುಲ್ಲ ಗುಡಿಸಿಲಿನಲ್ಲಿರುವದು ನಮಗೆ ಬಹಳ ಆನಂದದಾಯಕವಾದೀತು. ಅಲ್ಲಿ ದಾಸ-ದಾಸಿಯರಾರೂ ಬೇಡ. ಫಕ್ತ ನಾನು ನೀವು; ನಿಜವಾಗಿಯೇ ನಾವು ಇಬ್ಬರೇ ಇದ್ದ, ಸುಖಮಯವಾದ ಜಗತ್ತನ್ನು ಮಾಡಿಬಿಡೋಣ! ಪ್ರಿಯಕರಾ, ನಾವು ಈಗ ತಾಪಕ್ಕೆ ಗುರಿ ಯಾಗಿರುವದರಿಂದ ನಮಗೆ ಜಗತ್ತೇ ತಾಪದಾಯಕವಾಗಿ ತೋರುತ್ತದೆ. ಅದೇ ನಾವು ಸುಖಸಂಪನ್ನರಾದರೆ ಜಗತ್ತೇ ನಮಗೆ ಸುಖಮಯವಾಗಿ ತೋರುವದು. ನಿಜವಾಗಿಯೇ ದುಃಖರೂಪವಾದ ಅರಸೊತ್ತಿಗೆ, ಸಿರವಂ ತಿಕೆ, ಅಧಿಕಾರ ಸಂಪನ್ನತೆ, ಕೀರ್ತಿಶಾಲಿತ್ವ ಮುಂತಾದವುಗಳನ್ನು ಕಲ್ಪನೆ ಯಿಂದ ಸುಖರೂಪಗಳೆಂದು ಭಾವಿಸಿ, ಏನೇನೋ ಯೋಚಿಸುತ್ತ, ಏನೇ ನೋಮಾಡುತ್ತ ಧರ್ಮಾ ಧರ್ಮಗಳ ವಿಚಾರವಿಲ್ಲದೆ ಪೇಚಾಡುತ್ತಿರುವದ ರಿಂದ ನಮ್ಮ ಬಾಳು ದುಃಖಮಯವಾಗಿರುವದು; ಆದರೆ ಪ್ರಿಯಾ, ಅರ ಣ್ಯದಲ್ಲಿ ಈ ಪೇಚಾಟಕ್ಕೆ ಆಸ್ಪದವೇ ಇಲ್ಲ ನೋಡಿರಿ. ಅಲ್ಲಿ ಪ್ರೇಮ-ಆನಂ ದಗಳ ಹೊರತು ಎರಡನೆಯದರ ಅಸ್ತಿತ್ವಕ್ಕೆ ಅನುಕೂಲತೆಯೇ ಇರುವದಿ ಲ್ಲವು. ಅಲ್ಲಿ ಮತ್ಸರ-ದ್ವೇಷಗಳಿಗೆ ಅಷ್ಟು ಆಸ್ಪದವಿಲ್ಲವು; ಹೃದಯವನ್ನು ಕೊರೆಯುವ ಸ್ವಾರ್ಥದ ಸಂಗ್ರಾಮಕ್ಕೆ ಅಲ್ಲಿ ಪ್ರಬಲ ಕಾರಣಗಳಿಲ್ಲವು. ಇನ್ನು ಅಲ್ಲಿ ಇದ್ದರೆ, ಖುದಾನು ನಿರ್ಮಿಸಿರುವ ಅಕೃತ್ರಿಮ ಸೃಷ್ಟಿಸೌಂದರ್ಯ ವೊಂದು ಇರುವದು. ಆದ್ದರಿಂದ ಪ್ರಿಯಕರಾ, ನಡೆಯಿರಿ, ನಾವು ಅಲ್ಲಿಗೇ ಹೋಗೋಣ? ನಿಮಗೆ ತಾಪವಾಗುವ ಕೆಲಸಕ್ಕೆ ಕೈಹಾಕಿ ನಾನು ಕಟ್ಟಿ ಕೊಳ್ಳುವದಾದರೂ ಏನು?

ಪ್ಯಾರಿಬಾನುವು ಒಬ್ಬ ತತ್ವಜ್ಞಳಂತೆ ಮನಃಪೂರ್ವಕ ಹೀಗೆ ಮಧುರ ಭಾಷಣ ಮಾಡಿದ್ದನ್ನು ಕೇಳಿ, ಖುಸ್ರುವಿನ ಹೃದಯವು ಬಹು ಮಟ್ಟಿಗೆ

ಶಾಂತವಾಯಿತು. ಆತನು ನಕ್ಕು ಮನಸ್ಸಿನಲ್ಲಿ—"ನಿಜವಾಗಿಯೇ ಈ ಮಾಯಾವಿನೀ ಪ್ಯಾರಿಯು ಕ್ಷಣದಲ್ಲಿ ಹೊಸ ಸ್ವರ್ಗವನ್ನು ಉಂಟುಮಾಡಬಹುದು. ಈಕೆಯ ಮಾತು ಅತ್ಯಂತ ಹಿತಕರವಾಗಿರುವದು. ನನಗೆ ಸಿಂಹಾಸನವೂ ಬೇಡ; ಆ ಪಿತೃದ್ರೋಹದ ಕೆಲಸದಲ್ಲಿ ನಾನು ಪರಾಕ್ರಮ ತೋರಿಸಿ ನರಕಕ್ಕೆ ಹೋಗುವದೂ ಬೇಡ; ನನ್ನ ಪೂಜ್ಯ ತಾಯಿಯು ಮಾಡಿದ ಉಪದೇಶಕ್ಕೆ ವಿರುದ್ಧವಾಗಿ ನಡೆದು ಮಾತೃದ್ರೋಹಿಯಾಗುವದೂ ಬೇಡ; ನಾನು ಪ್ಯಾರಿಬಾನುವು ಹೇಳಿದಂತೆ ಆಕೆಯೊಡನೆ ಅರಣ್ಯವಾಸಮಾಡಿಯಾದರೂ ಸರಿಯೆ; ಅಥವಾ ಈಗ ಇದ್ದ ಹಾಗೆಯೇ ತಳಮಳಿಸುತ್ತ ಇದ್ದು, ಕಾಲಗತಿಯಿಂದ ನಿರ್ಜನವಾದ ಕಬರಸ್ಥಾನದಲ್ಲಿ ಹೋಗಿ ನಾನು ಶಾಂತರೀತಿಯಿಂದ ಶಯನಮಾಡಿದರೂ ಸರಿಯೇ; ಆದರೆ ಈದೇ ಪ್ಯಾರಿಬಾನುವೇ ಮೊದಲು ಮಾಡಿದ ಉಪದೇಶದಂತೆ ಕಲಂಕಕಾರಕ ಕೃತಿಯನ್ನು ಮಾಡಿ ಕಡೆಗೆ ಅಪಮೃತ್ಯುವಿಗೆ ಗುರಿಯಾಗುವದು ಮಾತ್ರ ಯೋಗ್ಯವಲ್ಲವು, ಎಂದು ಆಲೋಚಿಸತೊಡಗಿದನು. ಪತಿಯು ಈ ವಿಚಾರತನ್ಮಯತೆಯನ್ನು ನೋಡಿ ಪ್ಯಾರಿಯು ತನ್ನ ವೀಣಾವಿನಿಂದಿತ ಸ್ವರದಿಂದ—"ನಾಥ, ರಾತ್ರಿಯು ಬಹಳವಾಯಿತು, ಮಂದಿರಕ್ಕೆ ಬರುವದಿಲ್ಲವೇ?" ಎಂದು ಕೇಳಲು, ಖುಸ್ರುವು ಸ್ವಪ್ನಮಯ ಸೃಷ್ಟಿಯಿಂದ ಎಚ್ಚತ್ತವನಂತೆ ತನ್ನ ಪ್ರಿಯಳನ್ನು ನೋಡಿ, ಆಕೆಯ ಮಂಜುಲ ಸ್ವರದಿಂದ ಹೃದಯದ ವೇದನಗಳನ್ನು ಮರೆತು ಆಕೆಯನ್ನು ಆಲಿಂಗಿಸಿ—"ನಡೆ ಪ್ಯಾರೀ, ಮಂದಿರಕ್ಕೆ ಹೋಗುವಾ ನಡೆ; ಆದರೆ ಮಂದಿರಕ್ಕೆ ಹೋದಬಳಿಕ ಮೊದಲಿನ ಶಾಂತಿಯು ಲಾಭವು ನನಗೆ ಆಗಬಹುದೆ?" ಎಂದು ಕೇಳಲು, ಪ್ಯಾರಿಯು ಏನೂ ಉತ್ತರ ಕೊಡದೆ ಖಿನ್ನಳಾಗಿ ಪತಿಯೊಡನೆ ಮಂದಿರದ ಕಡೆಗೆ ಸಾಗಿದಳು. ಅಹಹ! ದುರಾಶೆಯ ದುಷ್ಪರಿಣಾಮವು ಎಂತಹದಿದು! ಅವರು ಇನ್ನು ಮಂದಿರದ ದ್ವಾರವನ್ನು ಪ್ರವೇಶಿಸತಕ್ಕವರು, ಅಷ್ಟರಲ್ಲಿ ಒಬ್ಬ ತಾರ್ತರ ರಮಣಿಯು ಸಣ್ಣದೊಂದು ಚೀಟಿಯನ್ನು ಖುಸ್ರುವಿನ ಕೈಯಲ್ಲಿ ಕೊಟ್ಟಳು.



## ೧೩ನೆಯ ಪ್ರಕರಣ

# ಉಜ್ವಲ ಮಾತಾ—ಪಿತೃ ಭಕ್ತಿ

ಈ ಮೇರೆಗೆ ನೀಚ ಸ್ವಾರ್ಥಾಭಿಲಾಷೆಯಿಂದ ಪಿತೃದ್ರೋಹಿಯಾಗಲು ಹೇಸುತ್ತಿದ್ದ ಖುಸ್ರುವು ಆ ಸಣ್ಣ ಚೀಟಿಯನ್ನು ಉಚ್ಚಿ ಓದಲು, ಅದರಲ್ಲಿ ಮಾನಸಿಂಹನು ಆತನನ್ನು ಕುರಿತು—"ಪ್ರಿಯ ಖುಸ್ರೊ, ನೀನು ಗುಪ್ತ ರೀತಿಯಿಂದ ಏಕಾಂತದಲ್ಲಿ ನನ್ನನ್ನು ಅಗತ್ಯವಾಗಿ ಕಾಣಬೇಕೆಂ"ದು ಅತ್ಯಾಗ್ರಹದಿಂದ ಬರೆದಿದ್ದನು; ಆದರೆ ಕಾರಣವನ್ನು ಮಾತ್ರ ಬರೆದಿದ್ದಿಲ್ಲ. ಆಗ ಖುಸ್ರುವು ಮನಸ್ಸಿನಲ್ಲಿ—"ರಾಜಾ ಮಾನಸಿಂಹನನ್ನು ಕಾಣುವದರಲ್ಲಿ ನನ್ನ ಹೃದಯಕ್ಕೆ ಮತ್ತೆ ಎಂತಹ ವೇದನೆಯಾಗುತ್ತದೋ ಯಾರಿಗೆ ಗೊತ್ತು!! ಖುದಾ! ಖುದಾ! ನನ್ನ ಈ ಸ್ವಾರ್ಥಪರ ಹಿತಕರ್ತ್ಯರಗಳಾದ ಅಪ್ತರ ತೀವ್ರ ಪ್ರಭಾವದಿಂದ ನನ್ನನ್ನು ಮುಕ್ತನಾಗಮಾಡು. ಹಾಗಾದರೆ ಮಾತ್ರ ನಾನು ಅತ್ಯಂತವಾದ ಶಾಂತಿಯ ಉಪಭೋಗಕ್ಕೆ ಪಾತ್ರನಾದೇನು. ಮಾನಸಿಂಹನು ಈ ವರೆಗೆ ನನ್ನ ಮುಂದೆ ಅಡಿತೋರಿಸದಿದ್ದರೂ, ನಾನು ಪಿತೃದ್ರೋಹಿಯಾಗಿ ತಂದೆಯ ಸಿಂಹಾಸನವನ್ನು ಆಕ್ರಮಿಸಬೇಕೆಂದು ಆತನು ಮನಃಪೂರ್ವಕವಾಗಿ ಇಚ್ಛಿಸುತ್ತಿರುವದು ನನಗೆ ಗೊತ್ತಾಗಿರುವದು; ಆದರೆ ತಾಯಿಯ ಉಪದೇಶದಿಂದ ನನ್ನ ಮನಸ್ಸು ತಿರುಗಿ ಹೋಗಿರುವದರಿಂದ, ನಾನು ಇಂಥ ಪಾಪಕೃತ್ಯಕ್ಕೆ ಕೈಹಾಕುವಹಾಗಿಲ್ಲ; ಹಾಗೆ ಕೈಹಾಕದಿದ್ದರೆ ಮಾನಸಿಂಹನಿಗೆ ಸಮಾಧಾನವಾಗುವ ಹಾಗಿಲ್ಲ; ಅಂದಬಳಿಕ ಈ ಪ್ರಸಂಗದಲ್ಲಿ ನಾನು ಹೇಗೆ ನಡೆಯಬೇಕು? ಏನೇ ಆಗಲಿ, ಏಕಾಂತದಲ್ಲಿ ಮಾನಸಿಂಹನನ್ನು ಕಂಡು ಆತನ ವಿಚಾರವನ್ನಾದರೂ ಕೇಳಿಕೊಳ್ಳೋಣ, ಎಂದು ಆಲೋಚಿಸಿ ಮಾವನನ್ನು ಕಾಣುವದಕ್ಕಾಗಿ ಹೊರಟನು. ನಿಜವಾಗಿ ಖುಸ್ರುವು ಕೈಲಾಗದವನಿದ್ದಿಲ್ಲ; ಆತನ ತೋಳುಗಳಲ್ಲಿ ಸಾಮರ್ಥ್ಯವಿತ್ತು; ಆತನ ವಶದಲ್ಲಿ ದೊಡ್ಡ ಸೈನ್ಯವಿತ್ತು; ಇದಲ್ಲದೆ ಸೈನ್ಯವನ್ನು ಸಾಗಿಸುವ ಚಾತುರ್ಯವನ್ನೂ ಆತನು ಮರೆತಿದ್ದಿಲ್ಲ; ಆದರೆ ಆತನ ಹೃದಯದಲ್ಲಿ

ತಾತ್ಕಾಲಿಕ ಉತ್ತೇಜನಕ್ಕೆ ಬಲಿಯಾಗಿ ಯಾವದೊಂದು ಆಸುರೀ ಮಹತ್ವಾಕಾಂಕ್ಷೆಯು ಬೆನ್ನು ಹತ್ತುವ ಸಾಹಸ ಗುಣವೊಂದು ಇದ್ದಿಲ್ಲ. ಮತ್ತು ತಾಯಿಯ ಉಪದೇಶದಿಂದ ಆತನು ತಂದೆಯ ವಿರುದ್ಧವಾಗಿ ಶಸ್ತ್ರವನ್ನೂ ಎತ್ತುವಹಾಗಿದ್ದಿಲ್ಲ. ಇಲ್ಲದಿದ್ದರೆ ಜಂಗೀಜ ಖಾನನ ವಂಶಜರಾದ ಮೊಗಲರು ರಾಜ್ಯಪ್ರಾಪ್ತಿಗಾಗಿ ಬೇಕಾದ ಪಾಪಕೃತ್ಯ ಮಾಡಲಿಕ್ಕೆ ಹಿಂಜರಿಯುವವರಲ್ಲವೆಂಬದಕ್ಕೆ ಅಕಬರನ ಸಂತತಿಯವರ ಕೃತಿಯೇ ಸಾಕ್ಷಿಯಾಗಿರುವದು. ರಜಪೂತ ರಾಜವಂಶಜಳಾದ ಆರ್ಯಸ್ತ್ರೀ—ಜೋಧಬಾಯಿಯ ಸದುಪದೇಶದಿಂದ ಲಾಭವಾಗದಿದ್ದರೆ, ಖುಸ್ರುವು ಸಿಂಹಾಸನ ಪ್ರಾಪ್ತಿಗಾಗಿ ಎಂಥ ನೀಚ ಕೆಲಸ ಮಾಡಲಿಕ್ಕೂ ಹಿಂದೆ ಮುಂದೆ ನೋಡುವ ಹಾಗಿದ್ದಿಲ್ಲ; ಅಂತೇ ಆತನು ಹಿಂದಕ್ಕೆ ದುರ್ಜಯಸಿಂಹನಿಂದ ತನ್ನ ತಂದೆಯ ಖೂನು ಮಾಡಲು ವಚನ ತಕ್ಕೊಂಡಿದ್ದನು; ಆದರೆ ಮುಂದೆ ತಾಯಿಯ ಉಪದೇಶದಿಂದ ಅದು ಮನಸ್ಸಿಗೆ ಬಾರದಂತಾಗಲು, ಸೋದರಮಾವನ ಖೂನು ಮಾಡಲು ಅದೇ ದುರ್ಜಯಸಿಂಹನಿಗೆ ಆತನು ಹೇಳಿದನು. ಇಂಥ ಚಂಚಲಸ್ವಭಾವದ ಅನನುಭವಿಕ ತರುಣರು ತಮ್ಮ ಸ್ವಚ್ಛಂದ ವೃತ್ತಿಯಿಂದ ಯಾವಕಾಲಕ್ಕೆ ಎಂಥ ಕೆಲಸ ಮಾಡಿಯಾರೆಂಬದನ್ನು ಹೇಳಲಾಗುವದಿಲ್ಲ.

ಒಂದು ದಿನ ಖುಸ್ರುವು ಮಾವನನ್ನು ಕಾಣುವದಕ್ಕಾಗಿ ಸಿಕರಿಯೊಳಗಿನ ಏಕಾಂತ ಗೃಹಕ್ಕೆ ಹೋಗಲು, ಮಾನಸಿಂಹನು ನಗನಗುತ್ತ ಮುಂದಕ್ಕೆ ಬಂದು ಒಳ್ಳೇ ಪ್ರೇಮದಿಂದ ಆತನನ್ನು ಆಲಿಂಗಿಸಿದನು. ಕುಶಲ ಪ್ರಶ್ನೆಗಳಾದ ಮೇಲೆ ಆತನು ಖುಸ್ರುವನ್ನು ಕುರಿತು—

ಮಾನಸಿಂಹ—ನಿಮ್ಮ ಅಜ್ಜಂದಿರು ಇಷ್ಟು ಅವಸರದಿಂದ ಫತ್ತೇಪುರ ಸಿಕ್ರಿಯನ್ನು ಬಿಟ್ಟು ಆಗ್ರಾಕ್ಕೆ ಹೋಗಲಿಕ್ಕೆ ಏನು ಕಾರಣ ಖುಸ್ರೂ!

ಖುಸ್ರು—ಯಾಕೆ ಹೋದರೆಂಬದು ನನಗೆ ಗೊತ್ತಿಲ್ಲ; ಅವಸರದಿಂದ ಹೋಗುತ್ತಿರುವಾಗ ನನಗೆ ಕೇಳಲಿಕ್ಕೆ ಅವಕಾಶವೂ ದೊರೆಯಲಿಲ್ಲ. ಅವರು ಹೋಗುವಾಗ ನನಗೆ—"ಖುಸ್ರೂ, ಈ ಫತ್ತೇಪುರದ ಪ್ರಾಸಾದದಲ್ಲಿ ಆಗ್ರಾದ ರಾಜಭಾಂಡಾರದ ಬಂಗಾರದ ಕೀಲಿಯ ಕೈಯು ಇರುತ್ತಿದ್ದು, ಅದನ್ನು ರಕ್ಷಿಸುವ ಜವಾಬುದಾರಿಯನ್ನು ನಾನು ನಿನಗೆ ಒಪ್ಪಿಸಿರುತ್ತೇನೆ; ಆದ್ದರಿಂದ ಪ್ರಾಣಕ್ಕಿಂತಲೂ ಹೆಚ್ಚೆಂದು ತಿಳಿದು ಅದನ್ನು ರಕ್ಷಿಸು. ನನ್ನಿಂದ ಎರಡನೆಯ

ಅಪ್ಪಣೆಯಾಗುವವರೆಗೆ ನೀನು ಯಾವ ಕಾರಣದಿಂದಲೂ ಅರಮನೆಯನ್ನು ಬಿಟ್ಟು ಹೋಗಬೇಡ" ಎಂದು ಹೇಳಿದರು.

ಮಾನಸಿಂಹ—(ಒಳ್ಳೇ ಪ್ರೇಮದಿಂದ ಖುಸ್ರುವಿನ ಬೆನ್ನ ಮೇಲೆ ಕೈಯಾಡಿಸುತ್ತ) ತಮ್ಮಾ ಬಾದಶಹರು ಒಮ್ಮಿಂದೊಮ್ಮೆಲೆ ಹೋದಕಾರಣವನ್ನು ನೀನು ಅರಿಯದಿದ್ದರೂ ನಾನು ಅರಿತಿರುವೆನು. ಸುಲ್ತಾನ ಸೇಲೀಮನು ಸೈನ್ಯವನ್ನು ಕೂಡಿಸಿ ಆಗ್ರಾಪಟ್ಟಣವನ್ನು ತಕ್ಕೊಳ್ಳುವದಕ್ಕಾಗಿ ಭರದಿಂದ ಸಾಗಿ ಬರುತ್ತಿರುವನೆಂಬದು, ಆತನ ಮಗನಾದ ನಿನಗೆ ಕದಾಚಿತ್ ಗೊತ್ತಾಗಿರಲಿಕ್ಕಿಲ್ಲ; ಆದರೆ ಆ ಮಾತು ಅರ್ಧ ಹಿಂದುಸ್ಥಾನಕ್ಕೇ ಗೊತ್ತಾಗಿರುವದು. ಅಲಹಾಬಾದದ ಭಾಂಡಾರವನ್ನು ಆತನು ಸ್ವಾಧೀನಪಡಿಸಿಕೊಂಡನು. ಯಾವತ್ತು ಬಹಾರ ಪ್ರಾಂತದಲ್ಲಿಯೂ, ಅಯೋಧ್ಯಾ ಪ್ರಾಂತದಲ್ಲಿಯೂ ತನ್ನ ಹೆಸರಿನಿಂದ ರಾಜ್ಯಕಾರಭಾರವನ್ನು ಆರಂಭಿಸಿರುವನು. ಇನ್ನು ಮೇಲೆ ಆತನು ಆಗ್ರಾ ಪಟ್ಟಣವನ್ನು ಮುತ್ತಿ ರಾಜಭಾಂಡಾರವನ್ನು ಸ್ವಾಧೀನ ಪಡಿಸಿಕೊಂಡು ಕುಳಿತರೆ, ಮಹಾ ಪ್ರಳಯವು ಉಂಟಾಗಿ, ಆ ಪ್ರಳಯದ ತೀವ್ರ ಪ್ರವಾಹದಲ್ಲಿ ನೀನು ಎತ್ತ ತೇಲಿ ಹೋಗುವೆಯೋ ಎಂಬದು ಗೊತ್ತೇ ಆಗಲಿಕ್ಕಿಲ್ಲ. ನಿನ್ನ ತಂದೆಯ ತರುವಾಯ ನೀನು ಪಟ್ಟಕ್ಕೆ ಹಕ್ಕುದಾರನೆಂಬುದು ನಿಜವಿದ್ದರೂ, ನಿನ್ನನ್ನು ಕಂಡರೆ ಸೇರದೆಯಿದ್ದ ನಿನ್ನ ತಂದೆಯು ನಿನಗೇ ಪಟ್ಟ ಕೊಡುವನೆಂಬದು ಹೇಗೆ ಹೇಳಬೇಕು? ನಿನ್ನ ಹಾಗೆ "ಖುರಂ" ರಾಜಪುತ್ರನೂ ಪಟ್ಟಕ್ಕೆ ಬಾಧ್ಯಸ್ಥನೇ ಇರುವನು. ಆತನ ಮೇಲಿನ ಪ್ರೇಮದಿಂದ ಪಟ್ಟಾಭಿಷಕ್ತನಾದ ಸೇಲೀಮನು ನಿನ್ನನ್ನು ಸೆರೆಯಲ್ಲಿಡಿಸಿದರೆ, ಅಥವಾ ವಿಷಪಾನ ಮಾಡಿಸಿ ಕೊಲ್ಲಿಸಿದರೆ, ಅಥವಾ ಗುಪ್ತ ರೀತಿಯಿಂದ ನಿನ್ನ ಕೊಲೆ ಮಾಡಿಸಿದರೆ ಏನು ಮಾಡುವೆ? ಅದರಂತೆ ಆ ಮಹಾ ಪ್ರಲಯದಲ್ಲಿ ನನ್ನ ಹಾಗು ನಿನ್ನ ಮಾವ ಅಜಿಮಖಾನರ ಸ್ಥಿತಿಯು ಎಷ್ಟು ಶೋಚನೀಯವಾಗಬಹುದೆಂಬದನ್ನು ನೆನಿಸಿದರೆ, ನೈಮೇಲಿನ ಕೂದಲುಗಳು ನೆಟ್ಟಗಾಗುವವು.

ಖುಸ್ರು—(ಮಂದಸ್ವರದಿಂದ)ಹೀಗಾಗುವ ಸಂಭವವಾದರೂ ಇರುವದೆಯೇ? ಪ್ರಬಲ ಪರಾಕ್ರಮಿಯಾದ ಅಕಬರ ಬಾದಶಹನು ಇನ್ನೂ ಜೀವದಿಂದಿರುವನು ಮಹಾರಾಜ! ಈ ಮಾತು ಶಕ್ಯವು ಹೇಗಾದೀತು?

ಮಾನಸಿಂಹ—(ಶಾಂತಸ್ವರದಿಂದ)ನಿನ್ನ ಮಾತು ನಿಜವು ಖುಸ್ರೂ! ಆದರೆ ಸದ್ಯಕ್ಕೆ ಬಾದಶಹನು ರೋಗದಿಂದಲೂ, ಮನಸ್ತಾಪದಿಂದಲೂ ತೀರಾ ಅಶಕ್ತನಾಗಿ ಹೋಗಿರುವನು. ನಿಜವಾಗಿಯೆಂದರೆ ಅಕಬರ ಬಾದ ಶಹನು ಈಗ ಬಹು ದಿವಸಗಳ ಹಿಂದೆಯೇ ಹೊರಟು ಹೋಗಿದ್ದು, ಈಗ ಇರುವವನು ಅಕಬರ ಬಾದಶಹನ ಕೇವಲ ನೆರಳಾಗಿರುವನು. ಹಿಂದಕ್ಕೆ ಯಾವ ಸಾಮರ್ಥ್ಯದಿಂದ ಬಾದಶಹರು ಚಿತ್ತೂರ ಕೋಟೆಯನ್ನು ಶ್ಮಶಾನ ಭೂಮಿಯಾಗಮಾಡಿದರೋ, ಯಾವ ಸಾಮರ್ಥ್ಯದಿಂದ ಮಾಲವ-ವಂಗ ದೇಶಗಳೊಳಗಿನ ಪಠಾಣರನ್ನು ಹೊಡೆಮೋಡಿಸಿದರೋ ಆ ಸಾಮರ್ಥ್ಯವು ಈಗ ಬಾದಶಹರಲ್ಲಿ ಎಲ್ಲಿರುವದು! ಅವರ ಆ ಉಜ್ವಲ ರಣಚಾತುರ್ಯವು ಈಗ ಎಲ್ಲಿರುವದು? ಖುಸ್ರೂ, ಈಗಿನ ಕಠಿಣ ಪ್ರಸಂಗದಲ್ಲಿ ಅಕಬರಬಾದ ಶಹರು ಪಟ್ಟದ ಸಲುವಾಗಿ ತನ್ನ ಮಗನೊಡನೆ ವಾದ ವಿವಾದ ಮಾಡುತ್ತ ಕುಳಿತುಕೊಳ್ಳಲಾರರೆಂಬದನ್ನು ನೀನು ಲಕ್ಷದಲ್ಲಿಡು; ತನ್ನ ವಿರುದ್ಧ ಬಂಡಾಯ ಮಾಡಿದ ಮಗನಿಗೆ ಪಟ್ಟಕೊಡುವದಕ್ಕಿಂತ, ಮತ್ತೊಬ್ಬ ಯೋಗ್ಯ ಹಕ್ಕುದಾರನಾದ ರಾಜಪುತ್ರನಿಗೆ ಪಟ್ಟಕೊಡುವ ಸಂಭವವುಂಟು. ಖುಸ್ರೂ, ನೀನು ದಿಲ್ಲಿಯ ಸಿಂಹಾಸನದ ಹಕ್ಕುದಾರನಿದ್ದು, ನಿನ್ನ ಮೇಲೆ ಬಾದಶಹರ ಪ್ರೀತಿಯು ಎಷ್ಟು ಇರುತ್ತದೆಂಬದನ್ನು ಮನಸ್ಸಿನಲ್ಲಿ ತಂದು ಕೊಂಡು ಈ ಪ್ರಸಂಗದಲ್ಲಿ ಪ್ರಯತ್ನಮಾಡು.

ಖುಸ್ರು—(ದೃಢಸ್ವರದಿಂದ)ರಾಜೇಸಾಹೇಬ, ತಮ್ಮ ಯಾವತ್ತು ಭಾಷಣದ ಆಶಯವು ನನ್ನ ಮನಸ್ಸಿನಲ್ಲಿ ಬಂದಿತು; ಆದರೆ ಮಹಾರಾಜ, ನನ್ನ ಹಿತಕ್ಕಾಗಿ ನೀವು ಇಷ್ಟು ಏಕೆ ಶ್ರಮಪಡುತ್ತಿರುವಿರಿ? ನಾನು ಕೇವಲ ಈ ಸಿಂಹಾಸನಕ್ಕಾಗಿ ಎಂದೂ ಪಿತೃದ್ರೋಹಿಯಾಗುವವನಲ್ಲ; ಯಾಕಂದರೆ ಆ ಕಲಂಕವು ನನಗೆ ಸದಾ ತಾಪದಾಯಕವಾದೀತು! ನನಗೆ ತಾವು ಕಡೆಯ ಆಲಿಂಗನವನ್ನು ಕೊಟ್ಟು ನನಗೆ ಅಪ್ಪಣೆ ಕೊಟ್ಟು ಬಿಡಿರಿ; ನಾನು ತಂದೆಯ ಚರಣಗಳಿಗೆ ಸರ್ವಸ್ವವನ್ನು ಅರ್ಪಿಸಿ ಅವರ ಕ್ಷಮೆ ಬೇಡಿಕೊಂಡು ಸಮಾಧಾನದಿಂದಿರುವೆನು. ಹೀಗೆ ಮಾಡುವದರಿಂದ ನಾನು ಅವ್ವನ ಮುಂದೆ ಮಾಡಿರುವ ಪ್ರತಿಜ್ಞೆಯನ್ನು ಪಾಲಿಸಿದಂತಾಗುವದು. ಮಹಾ ರಾಜ, ನೀವೂ ನಿಮ್ಮ ಅಭಿಮಾನವನ್ನು ಬಿಟ್ಟು ನನ್ನ ತಂದೆಯ ಬಳಿಗೆ

ಹೋದರೆ, ಅವರು ನಿಮ್ಮ ಭಾರತ ಮಂತ್ರಿಯು ಅಧಿಕಾರವನ್ನು ಸ್ಥಿರಪಾಗಿ ಇಡುವರಲ್ಲದೆ, ಹೆಚ್ಚಿನ ಅಧಿಕಾರವನ್ನೂ ಕೊಡಬಹುದು. ಯಾರು ಹಿಂದು ಸ್ಥಾನದ ಭಾವೀ ಬಾದಶಹರಿರುವರೋ, ಯಾರ ನೇತ್ರ ಸಂಕೇತದಿಂದ ಅಸಂಖ್ಯ ಸೈನ್ಯಗಳು ಚಲನ ವಲನವನ್ನು ಹೊಂದುತ್ತಿರುವವೋ, ರಣಕೌಶ ಲ್ಯವು ಯಾರ ಕೈಕೂತ ಲೀಲೆಯಾಗಿರುವದೋ, ಆಗ್ರಾ ಪಟ್ಟಣವನ್ನು ಸ್ವಾಧೀನ ಪಡಿಸಿಕೊಳ್ಳುವದರಿಂದ ಮೊಗಲರ ವಂಶ ಪರಂಪರಾಗತವಾದ ಸರ್ವ ಸಂಪತ್ತು ಯಾರ ಕೈಸೇರುವದೋ, ಹಿರಿಯ ಮಗನಾದದ್ದರಿಂದ ಯಾರ ಪಶ್ಚಾತ್ ನಾನು ಸಿಂಹಾಸನಕ್ಕೆ ಚಾಧ್ಯಸ್ಥನಾಗಿರುವೆನೋ ಅಂಥ ನನ್ನ ತಂದೆ ಸುಲ್ತಾನ ಸೇಲೀಮರೊಡನೆ ಸಿಂಹಾಸನದ ಸಲುವಾಗಿ ನಾನು ಜಗಳಾಡುತ್ತ ಕುಳಿತುಕೊಳ್ಳಲಾ? ಮಹಾರಾಜ, ಬೇಡ, ಇಂಥ ಸೈತಾನೀ ವಿಚಾರಗಳನ್ನು ನನ್ನ ಹೃದಯದಲ್ಲಿ ಬಿತ್ತಬೇಡಿರಿ. ನನಗೆ ಹೋಗಲು ಅಪ್ಪಣೆ ಕೊಡಿರಿ; ನನಗೆ ಸ್ವಾತಂತ್ರ್ಯವನ್ನು ಕೊಡಿರಿ; ನನ್ನ ದುರ್ಬಲ ಮನ ಸ್ಸನ್ನು ಈ ಪಾಶದೊಳಗಿಂದ ಮುಕ್ತಮಾಡಿರಿ; ಈ ಭಯಂಕರ ಪಾಶವು ನನ್ನ ಸಂಹಾರ ಮಾಡೀತು!! ಆದ್ದರಿಂದ ನಾನು ನನ್ನ ತಂದೆಯ ಬಳಿಗೆ ಹೋಗಿ ಅವರ ಚರಣಕ್ಕೆರಗಿ ಕ್ಷಮೆ ಬೇಡಿ ಶಾಂತನಾಗುವೆನು. ಮಹಾ ರಾಜ, ಈ ವಿಚಾರಗಳು ಯಾರಿಂದಲೇ ಆಗಲಿ, ಈ ಮೊದಲೆಯೇ ನನ್ನ ಮನಸ್ಸಿನಲ್ಲಿ ಸೇರಿರುವದರಿಂದ ನನ್ನ ಮನಸ್ಸಿಗೆ ಶಾಂತಿಯಿಲ್ಲ, ಸ್ವಸ್ಥ ತೆಯಿಲ್ಲ, ಯಾವ ವಿಷಯದಲ್ಲಿಯೂ ನನಗೆ ಉತ್ಸಾಹವಿಲ್ಲ; ಆದರೆ ಮಹಾ ರಾಜ, ಅಕಬರ ಬಾದಶಹನ ಮೊಮ್ಮಗನಾದ ನನ್ನ ಗತಿಯು ಹೀಗೆ ಯಾಕಾ ಗಬೇಕು?

ಈ ಮೇರೆಗೆ ಖುಸ್ರುವು ಮಾನಸಿಂಹನ ವಿಚಾರಗಳನ್ನು ನಿರಾಕರಿಸು ತ್ತಿರಲು, ಆತನ ಮಾವನಾದ ಅಮೀರ-ಉಲ್-ಉಮರಾವ-ಅಜೀಮಖಾ ನನು ಅಲ್ಲಿಗೆ ಬಂದು ಖುಸ್ರುವನ್ನು ಕುರಿತು—"ಎಲೈ ಮೂಢತರುಣನೇ, ನೀನು ಹೀಗೆ ನಿನ್ನ ತಂದೆಗೆ ಆತ್ಮಾರ್ಪಣ ಮಾಡುವದರಿಂದೇನು ದುಷ್ಪರಿಣಾ ಮವಾಗುವದೆಂಬದನ್ನು ಕುರಿತು ವಿಚಾರ ಮಾಡಿರುವೆಯಾ? ಗುಪ್ತ ಘಾತ ಕರ ಕೈಯಿಂದ ನಿನಗೆ ಭಯಂಕರ ಮರಣ ಒದಗುವದೇ ಇದಕ್ಕೆ ಫಲವೆಂದು ತಿಳಿದುಕೋ; ಅಥವಾ ವಿಷಪಾನದಿಂದ ನೀನು ಜೀವ ಕೊಡಬೇಕಾಗುವ

ದೆಂಬದನ್ನು ಮರೆಯಬೇಡ; ಆದ್ದರಿಂದ ಖುಸ್ರೂ, ಈಗ ಸ್ವಲ್ಪ ಶ್ರಮಬಟ್ಟು ಈ ಅಪಮೃತ್ಯುವನ್ನು ನೀನು ತಪ್ಪಿಸಿಕೊಂಡರೆ, ಅದರಲ್ಲಿ ಆಗುವ ನಿನ್ನ ಹಾನಿಯೇನು? ನೀನು ರಾಜೇಸಾಹೇಬರನ್ನಾದರೂ ಇಷ್ಟು ನಿರಾಕರಿಸಿ ಯಾಕೆ ಮಾತಾಡುವೆ?

ಖುಸ್ರು—ಖಾನಸಾಹೇಬ, ಕ್ಷಣಕ್ಷಣಕ್ಕೆ ನನ್ನನ್ನು ಹೀಗೆ ಯಾಕೆ ಛಲಿಸುವಿರಿ? ನಿಮಗೆ ಖುದಾನ ಆಣೆಯಿರುವದು, ನಿಮ್ಮ ಮನಸ್ಸಿನಲ್ಲಿ ಏನಿರುವದೆಂಬದನ್ನು ಸ್ಪಷ್ಟವಾಗಿ ಹೇಳಿಬಿಡಿರಿ.

ಅಜೀಮಖಾನ—ಕೇಳು ಹಾಗಾದರೆ, ಎಲ್ಲವನ್ನು ನಾನು ಈಗ ಬಿಚ್ಚಿ ಹೇಳುವೆನು. ನಾವಿಬ್ಬರೂ ನಿನ್ನ ಕಲ್ಯಾಣಕ್ಕಾಗಿ ಒಮ್ಮನಸ್ಸಿನಿಂದ ಹೀಗೆ ನಿರ್ಧರಿಸಿರುವೆವು; ಅತ್ಯಂತ ರಣಕುಶಲರೂ, ಸದಾ ವಿಜಯಿಗಳೂ ಆದ ಮೊಗಲರ ಇಪ್ಪತ್ತು ಸಾವಿರದ ಗುಪ್ತ ಸೈನ್ಯವು ನನ್ನ ಬಳಿಯಲ್ಲಿರುವದು; ಅದರಂತೆ ಶೂರರಾದ ರಜಪೂತರ ಇಪ್ಪತ್ತುಸಾವಿರ ರಾವುತರ ಖಾಸಗೀ ಸೈನ್ಯವು ರಾಜೇಸಾಹೇಬರ ಕೈಯಲ್ಲಿರುವದು. ಇವಲ್ಲದೆ ರಾಜಭಂಡಾರದ ಕೀಲಿಯು ಕೈಯಂತು ಈಗ ನಿನ್ನ ಕೈಯಲ್ಲಿ ಇದ್ದೇ ಇರುತ್ತದೆ; ಆದ್ದರಿಂದ ನಿನ್ನ ತಂದೆಯು ಆಗ್ರಾ ಪಟ್ಟಣವನ್ನು ಸ್ವಾಧೀನ ಪಡಿಸಿಕೊಳ್ಳುವದಕ್ಕಿಂತ ಮೊದಲು ನೀನು ಆ ರಾಜಧಾನಿಯನ್ನು ಏನಾದರೂ ಉಪಾಯ ಮಾಡಿ ಸ್ವಾಧೀನ ಪಡಿಸಿಕೊಂಡರೆ, ಈ ಸುವರ್ಣ ಭಾರತವು ನಿನ್ನದಾಗುವದೆಂದು ನಿಶ್ಚಯವಾಗಿ ನಂಬು. ಖುದಾನು ನಿನಗೆ ಸಾಹಸ ಕೊಟ್ಟಿರುವನು, ಸಾಮರ್ಥ್ಯ ಕೊಟ್ಟಿರುವನು, ನಮ್ಮಂಥ ಸಹಾಯಕ ವೀರರನ್ನೂ ಒದಗಿಸಿ ಕೊಟ್ಟಿರುವನು; ಆದ್ದರಿಂದ ನೀನು ಸ್ವಸ್ಥವಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲ. ನಿನ್ನ ಮೇಲೆ ನಿನ್ನ ಅಜ್ಜನ ಅತ್ಯಂತ ಪ್ರೇಮವಿರುವದನ್ನೂ, ನಿನ್ನ ತಂದೆಯನ್ನು ನಿನ್ನ ಅಜ್ಜನು ತಿರಸ್ಕರಿಸುತ್ತಿರುವದನ್ನೂ ನೀನುಬಲ್ಲೆ; ಅಂದಬಳಿಕ ನಿನ್ನ ಹಿತವನ್ನು ನೀನು ಅರಿತು ನಡೆಯದೆ ಭ್ರಾಂತಿಯಲ್ಲಿ ಕಾಲಹರಣ ಮಾಡುತ್ತಿರುವೆಯಲ್ಲ!! ಇದು ಯೋಗ್ಯವೆ? ನನಗಂತು ನಿನ್ನ ಭವಿಷ್ಯಕಾಲವು ಅತ್ಯಂತ ಉಜ್ವಲವಾಗಿ ತೋರುವದು.

ತನ್ನ ಮಾವನ ಈ ಮಾತುಗಳನ್ನು ಕೇಳಿ ಪಿತೃಭಕ್ತನಾದ ಖುಸ್ರುವಿನ ಮೈಮೇಲಿನ ಕೂದಲುಗಳು ನೆಟ್ಟಗಾದವು! ಆತನು ಕೆಲಹೊತ್ತು ಸುಮ್ಮನಿದ್ದು ಖಿನ್ನ ಸ್ವರದಿಂದ—

ಖುಸ್ರು—ಜನಾಬ! ಖಾನಸಾಹೇಬ! ಸೇಲೀಮನ ಮಗನೆಂತಲೇ ನಾನು ಬಾದಶಹರಿಗೆ ಪ್ರಿಯನಾಗಿರುವೆನು; ಎರಡನೆಯವನಾವನಾದರೂ ಆಗಿದ್ದರೆ ಅವರು ನನ್ನ ಮೇಲೆ ಇಷ್ಟು ಪ್ರೀತಿಯನ್ನು ಮಾಡುತ್ತಿದ್ದರೆಯೇ? ಆದ್ದರಿಂದ ಬಾದಶಹರ ಅಪ್ಪಣೆಯಿಲ್ಲದೆ ಅವರ ಮಗನ ವಿರುದ್ಧವಾಗಿ ನಾನು ಬಂಡಾಯ ಮಾಡಿದರೆ, ಅವರು ನನಗೆ ಏನು ಅಂದಾರು?

ಖಾನ—ಒಳ್ಳೆಯದು, ಸಾಮ್ರಾಟರ ಇಂಥ ವಿಪನ್ನಸ್ಥಿತಿಯಲ್ಲಿ ನೀನು ಏನೂ ಪ್ರಯತ್ನ ಮಾಡದೆ ಸ್ವಸ್ಥವಾಗಿ ಕುಳಿತುಕೊಂಡರೆ ಅವರಿಗೆ ಹೇಗಾದೀತು ಖುಸ್ರು? ಬಾದಶಹರ ಬಾಹುಗಳಲ್ಲಿ ಮೊದಲಿನ ಸಾಮರ್ಥ್ಯವು ಈಗ ಉಳಿದಿರುವದಿಲ್ಲ. ಅದರಂತೆ, ಅವರಸಂಗಡ ಯಾವಾಗಲೂ ಇರುತ್ತಿದ್ದ ಅವರ ಅತ್ಯಂತ ಜೀವದ ಗೆಳೆಯರಾದ ಅಬುಲ ಫಜಲರೂ ಬಹುದೂರ ದಕ್ಷಿಣದಲ್ಲಿರುವರು; ಅದರಿಂದ ಬಾದಶಹರಿಗೆ ಯೋಗ್ಯ ಆಲೋಚನೆ ಹೇಳುವವರೂ ಇಲ್ಲದಾಗಿದೆ. ಅದರಂತೆ, ಬಾದಶಹರಿಗೆ ಸೇನಾಪತಿಗಳೇ ಮೊದಲಾದ ವಿಶ್ವಾಸದ ಜನರು ದ್ರವ್ಯಕ್ಕಾಗಿ ಸೇಲೀಮರ ತಮ್ಮನ್ನು ಮಾರಿಕೊಂಡು, ಆತನಿಗೆ ಅಂತರಂಗದಲ್ಲಿ ಅನುಕೂಲವಾಗಿರುವರು. ಈ ಪ್ರಸಂಗದಲ್ಲಿ ಸೇಲೀಮನಿಗೆ ಎದುರಾಗಿ ಹೋಗಿ ಆತನನ್ನು ಹಿಂದಕ್ಕೆ ಓಡಿಸಬೇಕಾದರೆ, ಸ್ವತಃ ಅಕಬರ ಬಾದಶಹರೇ ಈಗ ದಂಡೆತ್ತಿ ಹೋಗಬೇಕಾಗಿರುವದು. ಖುಸ್ರೂ, ಬಾದಶಹರ ಮನಸ್ಸಿನಲ್ಲಿ ಸೇಲೀಮನು ಆಗ್ರಾ ಪಟ್ಟಣವನ್ನು ಸ್ವಾಧೀನ ಪಡಿಸಿಕೊಂಡು ಸಿಂಹಾಸನವೇರಲೊಲ್ಲನೇಕೆಂಬದು ಇದ್ದರೆ, ಅವರು ಇಂಥ ಬೇನೆಯಲ್ಲಿ ಆಗ್ರಾ ಪಟ್ಟಣಕ್ಕೆ ಏಕೆ ಹೋಗುತ್ತಿದ್ದರು? ಅಂದಬಳಿಕ ತಮ್ಮ ಬಂಡುಖೋರನಾದ ಮಗನಿಗೆ ಸಿಂಹಾಸನವಾಗಬೇಕೆಂಬದು ಸರ್ವಥಾ ಅವರ ಮನಸ್ಸಿನಲ್ಲಿರುವದಿಲ್ಲ. ತಾವೇ ಸ್ವತಃ ಹೋಗಿ ಮಗನ ಪಾರುಪತ್ಯಮಾಡಬೇಕೆಂದರೆ ಅವರ ಮೈಯಲ್ಲಿ ಸಾಮರ್ಥ್ಯವಿಲ್ಲ; ಬೇರೆಯವರನ್ನಾರನ್ನಾದರೂ ಕಳಿಸಬೇಕೆಂದರೆ ವಿಶ್ವಾಸದ ಜನರಿಲ್ಲ. ನನಗೂ, ಮಹಾರಾಜರಿಗೂ ಈ ಕೆಲಸ ಹೇಳಬೇಕೆಂದರೆ, ನಾವು ನಿನ್ನ ಪಕ್ಷದವರೆಂಬದು ಜನರಲ್ಲಿ ಪ್ರಸಿದ್ಧವಾಗಿರುವದರಿಂದ, ಮಗನ ವಿರುದ್ಧ ತಾವಾಗಿ ಪ್ರಯತ್ನ ಮಾಡಿದರೆಂಬ ಅಪಕೀರ್ತಿಗೆ ಗುರಿಯಾಗುವ ಇಚ್ಛೆಯೂ ಬಾದಶ

ಹರಿಗೆ ಇರುವದಿಲ್ಲ; ಆದ್ದರಿಂದ ಈಗಿನ ಕಠಿಣ ಪ್ರಸಂಗದಲ್ಲಿ ನೀನು ಆಗ್ರಾ ಪಟ್ಟಣವನ್ನು ಸ್ವಾಧೀನ ಪಡಿಸಿಕೊಂಡರೆ ಬಾದಶಹರಿಗೆ ಸಂತೋಷವೇ ಆಗುವದು. ಅವರು ತೋರಿಕೆಗಾಗಿ ನಿನ್ನ ಮೇಲೆ ಸಿಟ್ಟಾದಂತೆ ತೋರಿಸಿದರೂ, ಅಂತರಂಗದಲ್ಲಿ ನಿನ್ನ ಕೃತಿಯಿಂದ ಅವರಿಗೆ ಸಮಾಧಾನವೇ ಆಗುವದು. ನಿನ್ನಿಂದ ಅಕಲ್ಪಿತವಾಗಿ ಅವರಿಗೆ ಆಗುವ ಅನುಕೂಲಸಹಾಯಕ್ಕಾಗಿ ಅವರು ನಿನ್ನನ್ನು ಗೌರವಿಸದೆ ಇರಲಿಕ್ಕಿಲ್ಲ! ಖುಸ್ರೂ, ಬಾದಶಹರು ಅತ್ಯಂತ ಶ್ರಮದಿಂದ ಸಂಪಾದಿಸಿರುವ ಈ ಮೊಗಲ ಸಾಮ್ರಾಜ್ಯವು ಪಿತೃದ್ರೋಹಿಯೂ, ವಿಷಯಾಸಕ್ತನೂ, ಸೆರೆಗುಡಕನೂ ಆದ ಸೇಲೀಮನ ಕೈಯಲ್ಲಿ ಹೋಗುವದರಿಂದ ಅದು ಸುರಕ್ಷಿತವಾಗಿ ಇರಬಹುದೆ? ಅದರ ಚಿಂತೆಯು ಬಾದಶಹರಿಗೆ ಇರಲಿಕ್ಕಿಲ್ಲವೆ? ಆದ್ದರಿಂದ ಏಳು, ಪರಾಕ್ರಮದಿಂದ ಆಗ್ರಾ ಪಟ್ಟಣವನ್ನು ಸ್ವಾಧೀನಪಡಿಸಿಕೋ. ಖುಸ್ರೂ, ಬಹಳ ಪುಣ್ಯ ಮಾಡಿದಾಗ ಮನುಷ್ಯಜನ್ಮವು ಬರುವದು; ಅದರಲ್ಲಿಯೂ ಅತ್ಯುತ್ಕೃಟ ಪುಣ್ಯ ಮಾಡಿದವರಿಗೆ ಮಾತ್ರ ರಾಜಕುಲದಲ್ಲಿ ಹುಟ್ಟುವ ಯೋಗವು ಒದಗುವದು; ಆ ರಾಜ ಕುಲದಲ್ಲಿಯೂ ಮೊಗಲ ಬಾದಶಹರ ವಂಶವೂ ಅತ್ಯಂತ ಶ್ರೇಷ್ಠತರದ್ದಾಗಿರುವದರಿಂದ ಅದರಲ್ಲಿ ಜನ್ಮತಾಳಬೇಕಾದರೆ ಎಂಥ ಪುಣ್ಯಮಾಡಬೇಕಾಗುವದೆಂಬದನ್ನು ನೀನೇ ವಿಚಾರಮಾಡಿ ನೋಡು. ನಿನ್ನ ಪ್ರಾಚೀನ ಕರ್ಮಫಲವು ಅತ್ಯಂತ ಶಕ್ತಿಸಂಪನ್ನವಾಗಿರುವದರಿಂದ ಸುದೈವಿಯಾದ ವೀರನು ನೀನು ಮೊಗಲ ಬಾದಶಹರ ವಂಶದಲ್ಲಿ ಪಟ್ಟಕ್ಕೆ ಬಾಧ್ಯಸ್ಥನಾಗಿ ಹುಟ್ಟಿರುತ್ತೀ; ಆದರೆ ಏನೂ ಯತ್ನಮಾಡದೆ ನಿನ್ನ ಮಸ್ತಕವನ್ನು ರತ್ನಖಚಿತವಾದ ಮುಕುಟವು ಅಲಂಕರಿಸಿ, ನಿನ್ನ ಮಾನವ ಜನ್ಮವು ಹೇಗೆ ಸಾರ್ಥಕವಾದೀತು? ಪ್ರಯತ್ನದಿಂದಲೇ ಮಹಾ ವೈಭವವು ಪ್ರಾಪ್ತವಾಗುತ್ತದೆಂಬದಕ್ಕೆ ನಿನ್ನ ಅಜ್ಜ ಅಕಬರನೇ ಪ್ರಬಲ ಸಾಕ್ಷಿಯಾಗಿರುವನು. ನಿರ್ಜಲ ಮರುಭೂಮಿಯಲ್ಲಿ ಜನ್ಮತಾಳಿದ ಆ ನಿನ್ನ ಅಜ್ಜನು ಚಿಕ್ಕಂದಿನಿಂದ ಪರಿಪರಿಯ ಕಷ್ಟಗಳನ್ನು ಅನುಭವಿಸಿ ಪೂರ್ವಪುಣ್ಯದ ಬಲದಿಂದ ಸ್ವಾವಲಂಬಿಯಾಗಿ, ವೈಭವದ ಶಿಖರವನ್ನೇರಿ "ದಿಲ್ಲೀಶ್ವರೋವಾ ಜಗದೀಶ್ವರೋವಾ" ಎಂದು ಹೊಗಳಿಸಿಕೊಂಡು, ಯಾವತ್ತು ಹಿಂದುಸ್ಥಾನಕ್ಕೆ ಪೂಜ್ಯನಾಗಿ ಕುಳಿತಿರುವದನ್ನು ನೀನು ವಿಚಾರ

ಮಾಡತಕ್ಕದ್ದು. ಖುಸ್ರೂ, ಜಂಗೀಜಖಾನನ ವಂಶಜರ ಪಟ್ಟ ದೊರಕಿಸುವ ಶಾಶ್ವತ ಪದ್ಧತಿಯನ್ನು ನೀನು ಬಿಡಬೇಡ. ಸ್ನೇಹ, ಮಾಯಾ, ದಯಾ, ಪಿತೃಭಕ್ತಿ ಮೊದಲಾದವುಗಳನ್ನೆಲ್ಲ ಮರೆತು ಬಿಟ್ಟು, ಒರೆಯೊಳಗಿಂದ ಕತ್ತಿಯನ್ನು ಹಿರಿದು ಕಾರ್ಯಕ್ಕೆ ಉದ್ಯುಕ್ತರಾಗುವ ಆ ಪದ್ಧತಿಯನ್ನು ಈಗ ನೀನು ಅನುಸರಿಸು; ಮತ್ತು ಮೊಗಲ ವೀರನಾದ ನಿನ್ನ ಪರಾಕ್ರಮವನ್ನು ಜಗತ್ತಿನಲ್ಲಿ ಪ್ರಕಟಿಸಿ, ಆ ಜಗತ್ತನ್ನು ಆಶ್ಚರ್ಯಮಗ್ನವಾಗ ಮಾಡು.

ಮಂತ್ರಮುಗ್ಧನಂತೆ ಸುಮ್ಮನಿದ್ದು, ಶಹಾಜಾದಾ ಖುಸ್ರುವು ಖಾನನ ಈ ಮಾತುಗಳನ್ನು ಕೇಳುತ್ತಿದ್ದನು. ಆತನಲ್ಲಿ ತಂದೆಯ ಕಡೆಯಿಂದ ಮೊಗಲರ ರಕ್ತದಗುಣವೂ, ತಾಯಿಯ ಕಡೆಯಿಂದ ರಜಪೂತರ ರಕ್ತದಗುಣವೂ ಮಿಶ್ರವಾಗಿಯೇ ಇರುತ್ತಿದ್ದವು. ಅಜೀಮಖಾನನ ಆವೇಶದ ರಾಜಸವೃತ್ತಿಯ ಮಾತುಗಳನ್ನು ಕೇಳಿ ಖುಸ್ರುವಿನಲ್ಲಿ ಮೊಗಲರ ಸ್ವಾರ್ಥಪರಾಯಣತೆಯ ಪಿತೃದ್ರೋಹಗುಣವು ಜಾಗ್ರತವಾಗುತ್ತಿರುವಷ್ಟರಲ್ಲಿ, ಆತನಿಗೆ ತನ್ನ ತಾಯಿಯ ಉಪದೇಶದ, ಹಾಗು ತಂದೆಯು ತನ್ನನ್ನು ಚಿಕ್ಕಂದಿನಲ್ಲಿ— "ಖುಸ್ರೂ" ಎಂದು ಪ್ರೇಮದಿಂದ ಕರೆಯುತ್ತಿದ್ದದ್ದರ, ಆದರಂತೆ ಖುರಮನನ್ನು ಹಿಂದಕ್ಕೆ ಸರಿಸಿ ತನ್ನನ್ನು ಅಪ್ಪಿಕೊಳ್ಳುವದರ ನೆನಪಾಗಿ, ಆತನಲ್ಲಿ ರಜಪೂತರ ಪಿತೃಭಕ್ತಿಯು ಜಾಗ್ರತವಾಯಿತು. ಆದರಿಂದ ಆತನು ತಂದೆಯ ವಿರುದ್ಧವಾಗಿ ಶಸ್ತ್ರಹಿಡಿಯಲಿಕ್ಕೆ ಹಿಂದೆ ಮುಂದೆ ನೋಡಹತ್ತಿದನು. ತನ್ನ ತಂದೆಯು ಸದ್ಯಕ್ಕೆ ಬಂಡು ಮಾಡಿದ್ದರೂ, ಆತನು ಪಶ್ಚಾತ್ತಾಪದಿಂದ ಅಕಬರ ಬಾದಶಹರ ಚರಣಕ್ಕೆ ಎರಗಿದರೆ, ಆ ಉದಾರಾಂತಃಕರಣದ ಬಾದಶಹನ ತನ್ನ ಆ ಒಬ್ಬನೇ ಒಬ್ಬ ಮಗನ ಅಪರಾಧವನ್ನು ಕ್ಷಮಿಸಿ, ಆತನನ್ನು ಅಪ್ಪಿಕೊಳ್ಳದೆ ಇರನೆಂಬದು ಖುಸ್ರುವಿಗೆ ಗೊತ್ತಿತ್ತು; ಆದ್ದರಿಂದ ತನಗೆ ಅನಾಯಾಸದಿಂದ ತಂದೆಯ ತರುವಾಯ ಸಿಗತಕ್ಕ ಪಟ್ಟಕ್ಕಾಗಿ ಈಗ ದ್ರೋಹವನ್ನು ಚಿಂತಿಸಿ ಅಕಸ್ಮಾತ್ ಗಂಡಾಂತರಕ್ಕೆ ಒಳಗಾಗಲಿಕ್ಕೆ ಆತನ ಮನಸ್ಸು ಹಿಂಜರಿಯಹತ್ತಿತು. ತನ್ನ ತಂದೆಯು ಸದ್ಯಕ್ಕೆ ಪಿತೃದ್ರೋಹ ಮಾಡಿ ಅಪಕೀರ್ತಿಗೆ ಗುರಿಯಾಗಿ ನಿಂದಿತನಾಗಿರಲು, ತಾನೂ ಅಂಥ ನಿಂದೆಗೆ ಗುರಿಯಾಗಿ ಅಕಬರನ ವಂಶಜರ ಪಿತೃದ್ರೋಹದ ಪಾತಕವನ್ನು ಹೆಚ್ಚಿಸಲು

ಆತನು ಹೇಳಿದನು. ಹೀಗೆ ಆತನು ವಿಚಾರ ಮಾಡುತ್ತ ಏನೂ ಮಾತಾಡ ದಿರಲು, ಮಾನಸಿಂಹನು ಆತನನ್ನು ಕುರಿತು—ಪ್ರಿಯ ಖುಸ್ರೂ, ಬಹಳ ಹೊತ್ತು ವಿಚಾರಮಾಡಲಿಕ್ಕೆ ಅವಕಾಶವಿಲ್ಲವು. ಶುಭಕಾರ್ಯಕ್ಕೆ ಹೀಗೆ ವಿಲಂಬ ಮಾಡುವದರಿಂದ ಆಕಸ್ಮಾತ್ ಸರ್ವಸ್ವದ ಘಾತವಾಗುವ ಸಂಭವ ವಿರುತ್ತದೆ. ನಿನ್ನ ಹಿತಕ್ಕಾಗಿನಾವಿಬ್ಬರೂ ಬೇಕಾದ ಕಲಂಕಕ್ಕೆ ಗುರಿಯಾಗ ಲಿಕ್ಕೂ ಹಿಂದೆ-ಮುಂದೆ ನೋಡುವಹಾಗಿಲ್ಲ. ಪ್ರಸಂಗ ಒದಗಿದರೆ ನಿನ್ನ ಸಲುವಾಗಿ ಪ್ರಾಣವನ್ನಾದರೂ ಅರ್ಪಿಸುವೆವು. ಅಂದಬಳಿಕ ನಿನಗೆ ಇನ್ನು ಸಂಶಯುವೇತರದು? ಖುಸ್ರೂ, ನಾನು ಹೇಳುವದನ್ನು ಲಕ್ಷಪೂ ರ್ವಕವಾಗಿ ಕೇಳಿದೆಯಷ್ಟೇ? ಈಗ ನಿನ್ನ ಬಳಿಯಲ್ಲಿಯದೊಂದು ವಸ್ತುವು ನನಗೆ ಬೇಕಾಗಿದೆ; ಅದನ್ನು ಕೊಡಲಿಕ್ಕೆ ನಿನಗೆ ಏನಾದರೂ ತೊಂದರೆ ಯಿರುವದೋ?

ಖುಸ್ರು— ( ಆಶ್ಚರ್ಯದ ಮುದ್ರೆಯಿಂದ ) ತಮಗೆ ಕೊಡುವಂತಹ ವಸ್ತುವು ನನ್ನಲ್ಲಿ ಯಾವದಿರುವದು ಮಹಾರಾಜ? ಹೇಳಬೇಕು, ನಾನು ಏನು ಕೊಡಬೇಕೆಂಬದನ್ನು ಆಜ್ಞಾಪಿಸಬೇಕು.

ಮಾನಸಿಂಹ—ನಿನ್ನ ಬಳಿಯಲ್ಲಿ ಬಾದಶಹರು ಇಟ್ಟಿರುವ ಆಗ್ರಾದ ರಾಜ ಭಾಂಡಾರದ ಕೀಲಿಯ ಕೈಯು ಇರುತ್ತದಷ್ಟೇ? ಅದನ್ನು ಈಕ್ಷಣ ದಲ್ಲಿ ನನಗೆ ಒಪ್ಪಿಸು.

ಈ ಮಾತು ಕೇಳಿದ ಕೂಡಲೆ ಖುಸ್ರುವಿನ ದೃಷ್ಟಿಯು ರುಷ್ಟವಾ ಯಿತು. ಆತನು ತಿರಸ್ಕಾರಪೂರ್ಣ ನೇತ್ರಗಳಿಂದ ಮಾನಸಿಂಹನ ಕಡೆಗೆ ನೋಡುತ್ತ ದೃಢ ಸ್ವರದಿಂದ—ನಾನು ಎರಡನೆಯ ಬೇಕಾದದ್ದನ್ನು ಮಾಡೇನು; ಆದರೆ ಹಿಂದುಸ್ಥಾನದ ಬಾದಶಾಹೀ ಶಹಾನಶಹಾ ಅಕಬರ ಬಾದಶಹರೊಡನೆ ಕಪಟವನ್ನು ಆಚರಿಸಲಾರೆನು; ಅವರ ವಿಶ್ವಾಸ ಘಾತ ವಂತು ನನ್ನ ಕೈಯಿಂದ ಎಂದೂ ಆಗಲಾರದು. ರಾಜೇಸಾಹೇಬ, ತಮ್ಮ ಮುಂದೆ ಮಾತಾಡುವ ಯೋಗ್ಯತೆಯು ನನ್ನದಲ್ಲ; ಆದರೆ ನನ್ನ ಪ್ರೇಮಲ ಸ್ವಭಾವದ ಅಜ್ಜನ ಅಪ್ಪಣೆಯ ಮುಂದೆ ರಾಜಸಿಂಹಾಸನವು ನನಗೆ ತುಚ್ಛ ವಾಗಿರುವದೆಂದು ಸ್ಪಷ್ಟವಾಗಿ ಹೇಳುವೆನು! ಮಹಾರಾಜ, ಅಕಬರ ಬಾದ ಶಹರ ಬಲಗೈಯೆಂದು ಪ್ರಸಿದ್ಧರಾಗಿರುವ ತಮ್ಮ ಮುಖದಿಂದ ಈ ಸ್ವಾಮಿ

ದ್ರೋಹದ ಮಾತು ಹೊರಟದ್ದಕ್ಕಾಗಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ನಮ್ಮ ಮಾವಂದಿರಾದ ಅಮೀರ-ಉಲ್-ಉಮರಾವ-ಅಜೀಮುಖಾನರವರ ಮುಂದೆಯೂ ನಾನು ಮಾತಾಡತಕ್ಕದ್ದಲ್ಲ; ಆದರೆ ಅವರು ತಮ್ಮನ್ನು ಹೀನ ಸ್ಥಿತಿಯಿಂದ ಉಚ್ಚ ಪದವಿಗೇರಿಸಿದ ಬಾದಶಹರ ವಿಷಯವಾಗಿ ಹೀಗೆ ದ್ರೋಹ ಚಿಂತಿಸುವದನ್ನು ನೋಡಿ ಸುಮ್ಮನಿರಲಾರದೆ ನಾನು ಮಾತಾಡುವೆನು. ನಿಮ್ಮಿಬ್ಬರ ಶೌರ್ಯ-ಧೈರ್ಯ-ಪ್ರತಾಪಗಳು ಲೋಕ ವಿಶ್ರುತವಾಗಿವವು; ನಿಮ್ಮ ರಾಜಕಾರಣ ಪಟುತ್ವವನ್ನು ಲೋಕವು ಹೊಗಳುತ್ತಿರುವದು; ಆದರೆ ನಿಮ್ಮಂಥ ಸ್ವಾಮಿನಿಷ್ಠ ವೀರಶಿಖಾಮಣಿಗಳು ಹೀಗೆ ಬಾದಶಹರ ಒಪ್ಪಿಗೆ ಪಡೆಯದೆ ನನಗೆ ಏನೇನೋ ಹೇಳುತ್ತಿರುವದನ್ನು ನೋಡಿ, ಹುಡುಗನಾದರೂ ನಾನು ನಿಮನ್ನು ತಿರಸ್ಕರಿಸದೆ ಇರಲಾರೆನು. ಮಹಾರಾಜ, ನಾನು ಹಿಂದಕ್ಕೆ ಸಿಂಹಾಸನದ ಭ್ರಾಂತಿಯಿಂದ ತಂದೆಯನ್ನು ಕೊಲ್ಲಿಸಲು ಯತ್ನಿಸಿದ್ದು ನಿಜವು, ಅದರಂತೆ ದುಷ್ಟತನದಿಂದ ನಿಮ್ಮನ್ನು ಕೊಲ್ಲಲ ಯತ್ನಿಸಿದ್ದೂ ನೀವು ಅರಿಯದ ಮಾತಲ್ಲ; ಆದರೆ ಈಗ ಆ ಎಲ್ಲ ದ್ರೋಹಗಳಿಗಾಗಿ ನಾನು ಹೇಸುವೆನು. ನನ್ನ ತಾಯಿಯ ಸದುಪದೇಶದಿಂದ ನನ್ನ ಕಣ್ಣುಗಳು ಚನ್ನಾಗಿ ತೆರೆದಿರುವವು; ಆದ್ದರಿಂದ ಆಕೆಯ ಉಪದೇಶಕ್ಕೆ ವಿರುದ್ಧವಾಗಿ ನಾನು ಸರ್ವಥಾ ಆಚರಿಸಲಾರೆನು.

ಎಂದು ನುಡಿದು, ಅಲ್ಲಿ ನಿಲ್ಲದೆ ಆತನು ಥಟ್ಟನೆ ಹೊರಟುಹೋದನು.



## ೧೪ನೆಯ ಪ್ರಕರಣ

# ಶಾಂತಿಹೀನರಿಗೆ ಸುಖವೆಲ್ಲಿ ?



ಪ್ರಿಯ ವಾಚಕರೇ, ಅಕಬರ ಬಾದಶಹನ ಘನವಂತಿಕೆಯನ್ನು ಕುರಿತು, ನಾವು ನಿಮಗೆ ಸ್ವತಃ ಹೇಳಬೇಕೆನ್ನುವಹಾಗಿಲ್ಲ. ಆ ಮಾತು ಇತಿಹಾಸ ಪ್ರಸಿದ್ಧವಾಗಿರುತ್ತದೆ. "ಅಕಬರ ಬೀರಬಲರ ಕಥೆ"ಗಳ ಯೋಗ ದಿಂದ ಆ ಸುಪ್ರಸಿದ್ಧ ಬಾದಶಹನು, ಗೊತ್ತಾಗದಂಥ ಕಗ್ಗ ಹಳ್ಳಿಯ ಜನ ರಿಗೂ ಗೊತ್ತಾಗಿ ಹೋಗಿರುವನು. ಸ್ವತಃ ಆತನು ತನ್ನ ಘನವಂತಿಗೆಯ ಮಿತಿಮೀರಿದ ಅಭಿಮಾನದಿಂದ—"ನಾನು ಪೈಗಂಬರನು" "ನಾನು ಧರ್ಮ ಸ್ಥಾಪಕನು" ಎಂಬ ಭಾವನೆಗೆ ಒಳಗಾಗಿದ್ದನೆಂದೂ ಹೇಳುವದುಂಟು; ಆದರೆ ಇಂಥ ಅದ್ವಿತೀಯ ಪುರುಷನ ಸಂಸಾರದಲ್ಲಿ ನಿಜವಾದ ಸುಖವು ಎಷ್ಟರ ಮಟ್ಟಿಗೆ ಇರುತ್ತದೆಂಬದನ್ನು ಲೋಕದೃಷ್ಟಿಯಿಂದಲ್ಲ, ತಾತ್ವಿಕ ದೃಷ್ಟಿ ಯಿಂದ, ಅಥವಾ ಅಕಬರ ಬಾದಶಹನ ಅನುಭವದ ದೃಷ್ಟಿಯಿಂದ ವಿಚಾರಿ ಸಿದರೆ, ಆತನ ಸಂಸಾರ–ಸುಖವೂ ಭ್ರಾಮಕವಾದದ್ದೋ ಎಂದು ಹೇಳ ಬೇಕಾಗುವದು. ಸಂಸಾರ ರೂಪವಾದ ಹೋಕಾಯಂತ್ರದಲ್ಲಿ ಸುಖ–ದುಃಖ ರೂಪ ತುದಿಗಳುಳ್ಳ ಮನಸ್ಸೆಂಬ ಲೋಹ ಚುಂಬಕದ ಮುಳ್ಳು, ಕರ್ಮಾ ಕರ್ಷಿತವಾಗಿ ಯಾವಾಗಲೂ ಹೊಯ್ದಾಡುತ್ತಿರುವದರಿಂದ, ಆ ಮನಸ್ಸೆಂಬ ಮುಳ್ಳಿಗೆ ಸ್ಥಿರತೆಯಿಂದ ಉತ್ಪನ್ನವಾಗುವ ಶಾಂತಿಸುಖವು ದೊರೆಯುವದೇ ಇಲ್ಲ. ಸಾಂಸಾರಿಕರು ತಮಗೆ ಸುಖವು ಒದಗಿದ ಕೂಡಲೆ ಇನ್ನು ತಮಗೆ ದುಃಖದ ಯೋಗವು ಇರುವದೆಂದು ತಿಳಿದು ಪ್ರಾಪ್ತ ಸುಖಕ್ಕಾಗಿ ಉಬ್ಬದೆ ಧರ್ಮದಲ್ಲಿ ದೃಷ್ಟಿಯನ್ನಿಟ್ಟು ತಮ್ಮ ನೆರಳಿಗೆ ತಾವು ಅಂಜುತ್ತ ಎಚ್ಚರದಿಂದ ಇರಬೇಕಾಗುವದು. ಸುಖಾನುಭವವಿಲ್ಲದೆ ದುಃಖಾನುಭವವೂ, ದುಃಖಾ ನುಭವವಿಲ್ಲದೆ ಸುಖಾನುಭವವೂ ಆಗದಿರುವದರಿಂದ ಅವೆರಡೂ ವಿಕಾರಗಳು ಕ್ಷಣಿಕಗಳಾಗಿ ಸಂಸಾರದಲ್ಲಿ ಮನುಷ್ಯರನ್ನು ಆಗಾಗ್ಗೆ ತಡೆಹಾಯುತ್ತ ಗಾಸಿ ಮಾಡುತ್ತಿರುವವು. ಪುತ್ರೋತ್ಸವವಾದ ಸುಖದ ಸಂಗಡಲೆ ಪುತ್ರಸಂಗೋ-

ಪನ-ಕುಪುತ್ರಯೋಗ-ಪುತ್ರವಿಯೋಗಾದಿಗಳ ದುಃಖಗಳು ಅವರವರ ಕರ್ಮ ದಂತೆ ಸಾಂಸಾರಿಕರಿಗೆ ಬಡಿಸಿ ಇಟ್ಟಿರುವ ಎಲೆಗಳಾಗಿರುವವು; ಆದರೆ ನಾಚಿಕೆಗೇಡಿಗಳಾದ ಸಾಂಸಾರಿಕರು ನಾವು ಸುಖದ ಆಶೆಯಿಂದಲೂ, ದುಃಖದ ವಿಸ್ಮೃತಿಯಿಂದಲೂ ಕೇವಲ ಸುಖ ಸಂಪಾದಿಸಬೇಕೆಂಬ ಭ್ರಾಂತಿಗೆ ಬಿದ್ದು ನ್ಯಾಯಾನ್ಯಾಯ, ಧರ್ಮಾಧರ್ಮಗಳ ವಿಚಾರವಿಲ್ಲದೆ ಬಗೆಬಗೆ ಯಾಗಿ ಆಯಾಸಪಟ್ಟು ಮತ್ತಿಷ್ಟು ಗಾಸಿಯಾಗುತ್ತಿರುವೆವು. ಭಗವದ್ಗೀತೆ ಯಲ್ಲಿ ಭಗವಂತನು ಸುಖ-ದುಃಖಗಳನ್ನು "ಆಗಮಾಪಾಯಿಗಳು" ಅಂದರೆ ಮಿಂಚಿನಂತೆ ತೋರಿ ಅಡಗುವಂತಹವು ಆಗಿರುವದರಿಂದ ಅನಿತ್ಯಗಳೆಂದು ಹೇಳಿ, ಧರ್ಮಾಶ್ರಯದಿಂದ ಅವನ್ನು ಸಹಿಸುತ್ತ ಶಾಂತಿಯನ್ನು ಪಡೆಯ ಬೇಕೆಂದು ಹೇಳಿರುವನು. "ಆಗಮಾಪಾಯಿನೋಽನಿತ್ಯಾಂಸ್ತಾಂಸ್ತಿತಿಕ್ಷಸ್ವ ಭಾರತ" ಎಂಬವೇ ಆ ಭಗವಂತನ ಉಕ್ತಿಯಾಗಿರುವದು. ಈ ಉಕ್ತಿ ಯಂತೆ ಘನವಂತನಾದ ಅಕಬರನು ಎಷ್ಟು ದುಃಖಗಳನ್ನು ಸಹಿಸಬೇಕಾಯಿ ತೆಂಬದನ್ನು ಕುರಿತು ವಿಚಾರಿಸುವದಕ್ಕಾಗಿ ಆತನ ಬಾಲ್ಯದಿಂದ ಅಲ್ಪ ಸ್ವಲ್ಪ ಇತಿಹಾಸವನ್ನು ನೋಡುವಾ.

ಅಕಬರನ ಬಾಲ್ಯವೂ, ವೃದ್ಧಾಪ್ಯವೂ ಕೇವಲ ದುಃಖದ ತಾಪದಲ್ಲಿ ಬೆಂದು ಬೆಂಡಾದವೆಂದು ಇತಿಹಾಸವು ಹೇಳುತ್ತಿರುವದು. ಆದರಲ್ಲಿ, ಆತನ ಮುಪ್ಪಿನ ಕಾಲವಂತು ದುಃಖಪರಂಪರೆಯಿಂದ ಅತ್ಯಂತ ತಾಪದಾಯ ಕವಾಗಿ, ಆತನು ಒಬ್ಬ ಪಾಮರನಂತೆ ಶಾಂತಿಹೀನನಾಗಿ ದೇಹತ್ಯಾಗ ಮಾಡಿದ್ದನ್ನು ಸಾಂಸಾರಿಕರು ವಿಚಾರಿಸದೆ, ಇರತಕ್ಕದ್ದಲ್ಲ. ತಂದೆ ಹುಮಾ ಯೂನನು ದಿಲ್ಲಿಯನ್ನು ಬಿಟ್ಟು ಓಡಿ ಹೋಗುವಾಗ ಹಾದಿಯಲ್ಲಿ ನಿರ್ಜಲ ವಾದ ಮರುಭೂಮಿಯಲ್ಲಿ ಹುಟ್ಟಿದ ಅಕಬರನು, ಒಮ್ಮೆಮ್ಮೆ ಪ್ರಾಣಾಂತಿಕ ಗಂಡಾಂತರಗಳಿಗೂ ಗುರಿಯಾಗಿ ಪರಿಪರಿಯ ಕಷ್ಟಗಳನ್ನು ಹೇಗೆ ಅನುಭವಿ ಸಿದನೆಂಬದನ್ನೂ, ಆತನು ಪ್ರೌಢನಾಗುತ್ತ ಹೋದಂತೆ ಸಾಮ್ರಾಜ್ಯಸ್ಥಾಪ ನೆಯ ಮಹತ್ವಾಕಾಂಕ್ಷೆಯಿಂದ ಅಂಧನಾಗಿ, ಪ್ರಾತಃಸ್ಮರಣೀಯನಾದ ರಾಣಾ ಪ್ರತಾಪಸಿಂಹನಂಥ ಕುಲದೀಪಕ ಭಾರತ ಪುತ್ರರ ಸ್ವಾತಂತ್ರ್ಯಹರ ಣದ ಮಹತ್ಪಾಪ ಸಂಪಾದನೆಯಲ್ಲಿ ತೊಡಗಿ, ತನ್ನ ಮುಪ್ಪಿನ ಕಾಲದ ಕಟು ತರ ದುಃಖಪರಂಪರಾರೂಪವಾದ ಅಡಿಗೆಯನ್ನು ಹೇಗೆ ಸಿದ್ಧಮಾಡಿ ಇಟ್ಟ

ನೆಂಬದನ್ನೂ ಇತಿಹಾಸಜ್ಞರಿಗೆ ಇಲ್ಲಿ ಹೇಳುವ ಕಾರಣವಿಲ್ಲ. ಮನುಷ್ಯನು ಮನಸ್ಸಿನಲ್ಲಿ ಸ್ವಾರ್ಥವನ್ನು ಮುಚ್ಚಿಕೊಂಡು ಹೊರಗೆ ಪರೋಪಕಾರದ ಸೋಗು ತೋರಿಸುತ್ತ, ಮೊದಲು ತನ್ನನ್ನು ತಾನು ತಿದ್ದಿಕೊಳ್ಳದೆ ಮಂದಿಯನ್ನು ತಿದ್ದಲಿಕ್ಕೆ ಹೋದ ಹೋದಂತೆ ಮಂದಿಯ ದುಃಖವನ್ನು ಮತ್ತಿಷ್ಟು ಹೆಚ್ಚಿಸಿ, ತಾನೂ ದುಃಖರೂಪವಾದ ತಗ್ಗಿನಲ್ಲಿ ಬಿದ್ದು ನರುಳುವನೆಂಬದನ್ನು ಮರೆಯಲಾಗದು. ಈ ಜಗತ್ತಿನ ವ್ಯವಹಾರಗಳು ಈಶ್ವರೀ ತಂತ್ರದಿಂದ ನಡೆಯುತ್ತಿರುವದರಿಂದ, ಜಗತ್ತನ್ನು ನಮ್ಮಂಥ ಸ್ವಾರ್ಥಪರಾಯಣರು ತಿದ್ದಿದರೆ ಅದು ತಿದ್ದುವದಿಲ್ಲ, ಕೆಡಿಸಿದರೆ ಅದು ಕೆಡುವದಿಲ್ಲ. ಶುದ್ಧ ಪರಿಸ್ಥಿತಿಯಿಂದ ಉತ್ಪನ್ನವಾಗಿದ್ದ ಈ ಜಗತ್ತು ಕೃತ-ತ್ರೇತಾ-ದ್ವಾಪರ-ಕಲಿ ಎಂಬ ಸಾಂಕೇತಿಕ ಕ್ರಮದಿಂದ ಸಾವಕಾಶ ಅಧಃಪತನ ಹೊಂದುತ್ತ ಹೊಂದುತ್ತ ಹೋಗಿ, ಪುನಃ ಪರಿಶುದ್ಧ ಸ್ಥಿತಿಯನ್ನು ಹೊಂದುತ್ತಿರುವದೂ, ಆ ಪರಿಶುದ್ಧ ಸ್ಥಿತಿಯಿಂದ ಪುನಃ ಕೆಡುತ್ತ ಕೆಡುತ್ತ ಹೋಗುವದೂ ಕಲ್ಪಾಂತರದವರೆಗೆ ಆ ಜಗತ್ತಿನ ಅಪರಿಹಾರ್ಯ ಸಿದ್ಧಾಂತವೇ ಆಗಿರುವದು. ಒಮ್ಮೆ ಇಚ್ಛಾಮಾತ್ರದಿಂದ ಸೃಷ್ಟಿಯನ್ನು ರಚಿಸಿರುವ ಪರಮಾತ್ಮನು, ಈ ಸಿದ್ಧಾಂತಕ್ಕೆ ಬಾಧೆ ಬಾರದಂತೆ ಆಗಾಗ್ಗೆ ಸ್ವಾರ್ಥ ರಹಿತರಾದ ಮಹಾತ್ಮರ ರೂಪದಿಂದ ಅವತರಿಸಿ, ಸೃಷ್ಟಿಯ ಅಸ್ತಿತ್ವವನ್ನು ಮಾತ್ರ ಕಾಯುತ್ತಿರುವನಲ್ಲದೆ, ತನ್ನ ಸಂಕೇತಕ್ಕೆ ತಪ್ಪಿ ಯುಗಾಂತರವನ್ನು ಮಾತ್ರ ಎಂದೂ ಮಾಡುವದಿಲ್ಲ. ಇಂಥ ಆಗಬಾರದ ಕೆಲಸವನ್ನು ಮಾಡಹೋಗಿ, ಅಂದರೆ ತಾವು ಕಲಿಯುಗದ ಆಚರಣೆಯವರಾಗಿದ್ದು ಕಲಿಯುಗವನ್ನು ಕೃತಯುಗವಾಗ ಮಾಡುವೆವೆಂದು ಸೋಗು ತೋರಿಸಿ ಇದ್ದ ಸ್ಥಿತಿಯನ್ನು ಸಿಕ್ಕಹಾಗೆ ಕೆಡಿಸಿ ಪರಮಾತ್ಮನ ಅವತಾರಕ್ಕೆ ಮತ್ತೆ ಆಸ್ಪದವನ್ನುಂಟು ಮಾಡುವವರು ಆಸುರೀ ಮಹತ್ವಾಕಾಂಕ್ಷೆಯ ಅಹಂಕಾರಿಗಳೇ ಸರಿ. ಈ ದೃಷ್ಟಿಯಿಂದ ವಿಚಾರಿಸಿದರೆ, ಅಕಬರನಂಥ ಸಾರ್ವಭೌಮರಲ್ಲಿ ಎಷ್ಟು ಜನರು ಜಗತ್ತಿನ ಸುವ್ಯವಸ್ಥೆಗೂ, ಎಷ್ಟು ಜನರು ಜಗತ್ತಿನ ಅವ್ಯವಸ್ಥೆಗೂ ಕಾರಣರಾಗುವರೆಂಬದನ್ನು ಸ್ಪಷ್ಟವಾಗಿ ಹೇಳುವದು ತೊಡಕಿನ ಕೆಲಸವಾಗಿದ್ದು, ಈ ರೀತಿಯು ಸೃಷ್ಟಿಯು ಇರುವತನಕ ಅವ್ಯಾಹತವಾಗಿ ನಡೆಯತಕ್ಕದ್ದಾಗಿರುವದರಿಂದ ಅದನ್ನು ತಪ್ಪಿಸುವದು ಯಾರಿಗೂ ಶಕ್ಯವಲ್ಲವು.

ಹೀಗೆ ಸೃಷ್ಟಿರೂಪವಾದ ಈಶ್ವರನ ಸಂಸಾರವು, ಈಶ್ವರೀ ಸಂಕೇತದ ಹೊರತು ಒಬ್ಬರು ಕೆಡಿಸಿದರೆ ಕೆಡುವಂತಹದೂ, ಒಬ್ಬರು ನೆಟ್ಟಗೆ ಮಾಡಿದರೆ ನೆಟ್ಟಗಾಗುವಂತಹದೂ ಆಗಿರದಿದ್ದರೂ, ಅಹಂಕಾರಿಗಳಾದ ನಾವು ಯಾವದೊಂದು ಕಾರ್ಯವನ್ನು "ನಾವು ಮಾಡಿದೆವೆಂ"ದು ಅಭಿಮಾನಪಡುವದರ ಕಾರಣವು ಏನಿರಬಹುದು? ಈ ಅಭಿಮಾನವು ನಮ್ಮಲ್ಲಿ ಹೆಚ್ಚು ಹೆಚ್ಚು ಕಸುವಿನದಾಗಿ ಇದ್ದಂತೆ ನಾವು ನಮ್ಮ ಸಂಸಾರವನ್ನು ಹೆಚ್ಚು ಹೆಚ್ಚು ಬಿಗಿಯಾಗಿ ಆಸ್ಥೆಯಿಂದ ಅಪ್ಪಿಕೊಳ್ಳುವೆವು. ಸಂಸಾರ ಮೂಲವಾದ ಈ ಅಭಿಮಾನವು ಸೃಷ್ಟಿಯಿರುವತನಕ ಸಂಸಾರಿ ಜೀವರನ್ನು ಆವರಿಸಿ ಇರತಕ್ಕದ್ದೇ ಸರಿ. ಸೃಷ್ಟಿಕರ್ತೃವಾದ ದೇವರು ಅಭಿಮಾನಿ ಜೀವರಂತೆ ತಾನೇ ಸೃಷ್ಟಿಕರ್ತೃವೆಂದು ಅಭಿಮಾನದಿಂದ ಹೇಳಿ, ಎಲ್ಲರ ಕಣ್ಣೆದುರಿಗೆ ನಿಂತು ಬಿಟ್ಟು ತನ್ನ ಪ್ರಭಾವದಿಂದ ಎಲ್ಲ ಜೀವರ ಪಾಮರತ್ವವನ್ನು ಅನುಭವಕ್ಕೆ ತಂದು ಕೊಟ್ಟಿದ್ದರೆ ಎಲ್ಲ ಜೀವರ ಅಭಿಮಾನದ ಪರಿತ್ಯಾಗವಾಗಿ ಅವರು ತಮ್ಮ ಯೋಗಕ್ಷೇಮದ ಭಾರವನ್ನು ದೇವರ ಮೇಲೆ ಹಾಕಿ ತಾವು ಕೈಮುಚ್ಚಿಕೊಂಡು ಕುಳಿತುಬಿಡುತ್ತಿದ್ದರು; ಆದರೆ ಇದರಿಂದ ಜೀವರ ಬಂಧಮೋಕ್ಷಗಳ ಸಂಪಾದನೆಯ ಸ್ವಾತಂತ್ರ್ಯವು ನಷ್ಟವಾಗಿ ಸಂಸಾರದ ಸವಿಯೇ ಕೆಟ್ಟು ಹೋಗಲು, ದೇವರು ಸಪ್ಪನ್ನ ಸಂಸಾರಮಾಡಿದನೆಂಬ ಆರೋಪಕ್ಕೆ ಗುರಿಯಾಗಬೇಕಾಗುತ್ತಿತ್ತು? ಆದ್ದರಿಂದ ದೇವರು ತನ್ನ ನಿಜವಾದ ನೆಲೆಯನ್ನು ಯಾರಿಗೂ ಹತ್ತಗೊಡದೆ, ತನ್ನ ಮೂಲಸ್ವರೂಪದ ಜ್ಞಾನವನ್ನು ಯಾರಿಗೂ ಆಗಗೊಡದೆ "ಯೇ ಯಥಾಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ" ಎಂಬ ಸಿದ್ಧಾಂತವನ್ನು, ಅಂದರೆ "ಯಾರು ಹೇಗೋ ಹಾಗೆ ನಾನು" ಎಂಬ ಸಿದ್ಧಾಂತವನ್ನು ಅವಲಂಬಿಸಿ ಈ ಸೃಷ್ಟಿಯ ವ್ಯವಸ್ಥೆಯನ್ನು ಸುಂದರವಾಗಿಯೂ, ಸವಿಯಾಗಿಯೂ ಸಾಗಿಸಿರುವನು; ಆದ್ದರಿಂದಲೇ ಈ ಜಗತ್ತಿನಲ್ಲಿ ಮುಮುಕ್ಷುಗಳಿಗಿಂತ ಸಂಸಾರಾಸಕ್ತರೇ ವಿಪುಲವಾಗಿರುವರು. ಈ ಗೌರವದ ಸೃಷ್ಟಿರೂಪ ಸಂಸಾರವು ಯಜಮಾನನಾದ ಈಶ್ವರನ ದರ್ಶನಾಭಾವದ ಮೂಲಕ, ವಾರಸದಾರರಿಲ್ಲದ ವಿಪುಲ ಇಷ್ಟೇಟಿನಂತೆ ಅಹಂಕಾರಿ ಜೀವಕೋಟಿಯ ಕೈಯಲ್ಲಿ ಅದು ಸಿಕ್ಕಹಾಗೆ ಭ್ರಾಂತಿಯುಂಟಾಗುತ್ತಿರಲು, ಆ ಜೀವಕೋಟಿಯೊಳಗಿನ ಪ್ರತಿ ಒಂದು ಜೀವವು ತನ್ನ ತಿಳುವಳಿಕೆ, ಅಭಿಮಾನ, ಸಾಮರ್ಥ್ಯಗಳ ಮಾನದಂತೆ "ಇದು ನನ್ನದು" "ಇದನ್ನು ನಾನು

ಮಾಡಿದೆನು" ಎಂದು ಅಹಂಕಾರಕ್ಕೆ ಒಳಗಾಗಿ ದೇವರ ಹಕ್ಕನ್ನೇ ಹಾರಿಸುವ ನೀಚತನಕ್ಕೆ ಬೀಳುತ್ತಿರುವದು ಆಶ್ಚರ್ಯವಲ್ಲ. ಹೀಗೆ ಈಶ್ವರ ಜ್ಞಾನಶೂನ್ಯತೆಯು ಭ್ರಾಂತಿಯು ಈ ಸೃಷ್ಟಿರೂಪ ಸಂಸಾರದಲ್ಲಿ ಜೀವರಿಗೆ ಇರುತ್ತಿದ್ದರೂ, ಅದೇ ಸೃಷ್ಟಿರೂಪ ಸಂಸಾರದಲ್ಲಿ ಈಶ್ವರನು ಸೃಷ್ಟಿಪೋಷಕವಾದ ಧರ್ಮವೆಂಬ ಪಂಥವನ್ನೂ, ಸೃಷ್ಟಿಮಾರಕವಾದ ಅಧರ್ಮವೆಂಬ ಪಂಥವನ್ನೂ ಜೀವರು ನಡೆದುಹೋಗುವದಕ್ಕಾಗಿ ನಿರ್ಮಿಸಿ ಇಟ್ಟಿರುವನು; ಆದರಂತೆ ಬಾಲ್ಯದಿಂದ ಸತ್ಸಂಗ ಮಾಡಿ ಧರ್ಮಮಾರ್ಗದಿಂದ ಕ್ರಮಿಸಿ ಹೋಗಿ ಉತ್ತರೋತ್ತರ ಸ್ವರ್ಗಾದಿ ಉನ್ನತ ಪುರುಷಾರ್ಥಗಳನ್ನು ಪಡೆಯಲಿಕ್ಕೂ, ಬಾಲ್ಯದಿಂದ ದುಸ್ಸಂಗಮಾಡಿ ಅಧರ್ಮ ಮಾರ್ಗದಿಂದ ಕ್ರಮಿಸಿ ನರಕಾದಿ ಅನರ್ಥ ಪರಂಪರೆಗಳನ್ನು ಹೊಂದಲಿಕ್ಕೂ, ಸದ್ಗುರು ಕೃಪೆಯಿಂದ ಸರ್ವಸಂಗ ಪರಿತ್ಯಾಗಮಾಡಿ ತನಗೆ ಶರಣುಬಂದು ಮೋಕ್ಷವನ್ನು, ಅಥವಾ ಸಂಸಾರದಲ್ಲಿದ್ದೂ ಶಾಂತಿಯನ್ನು ಪಡೆಯಲಿಕ್ಕೂ ಅದೇ ಈಶ್ವರನೇ ಜೀವರಿಗೆ ಸಂಪೂರ್ಣ ಆಸ್ಪದವಿಟ್ಟಿರುವನು, ಅಥವಾ ಒಂದು ಬಗೆಯ ಸ್ವಾತಂತ್ರ್ಯವನ್ನು ಕೊಟ್ಟಿರುವನು. ದೇಶ-ಕಾಲ ಪರಿಸ್ಥಿತಿಗನುಸರಿಸಿ ಬೇರೆ ಬೇರೆ ಮಹಾತ್ಮರಾದ ಧರ್ಮಸ್ಥಾಪಕರು ಬೇರೆ ಬೇರೆ ಧರ್ಮಪಂಥಗಳನ್ನು ಸ್ಥಾಪಿಸಿ ಇಟ್ಟಿದ್ದರೂ, ಅವವುಗಳನ್ನು ಅನುಸರಿಸಿ ಹೋಗುವವರು ಒಂದೇ ಸ್ಥಳಕ್ಕೆ ಮುಟ್ಟುವರೆಂಬ ನಂಬಿಗೆಯು ನಿಜವಾದ ಧರ್ಮಿಷ್ಠರಲ್ಲಿ ಇರುತ್ತಿರುವದು. ಈ ದೃಷ್ಟಿಯಿಂದ ವಿಚಾರಿಸಿದರೆ, ಅಕಬರನ ಮೊದಲ ಚೂಣಿಯ ರಾಜತೃಷ್ಣೆಯಲ್ಲಿ ಚಿತ್ತೂರ ಉಧ್ವಸ್ತದಂಥ ಘೋರಕರ್ಮ ಮಾಡುವಾಗ ಸತ್ಸಂಗ ಹೀನನಂತೆ ಆತನು ತೋರಿಸಿದ ಕ್ರೂರತನವನ್ನೂ, ಅಧರ್ಮದ ದುರಭಿಮಾನವನ್ನೂ ಮನಸ್ಸಿನಲ್ಲಿ ತರಲು, ಆತನ ಆ ಕ್ರೂರಕರ್ಮಗಳು ಆತನ ಅಂತ್ಯಕಾಲದಲ್ಲಿ ಫಲಿಸಿದವೆಂತಲೇ ಹೇಳಬೇಕಾಗುವದು; ಯಾಕಂದರೆ ಆ ಸುಪ್ರಸಿದ್ಧ ಬಾದಶಹನ ಹೊಟ್ಟೆಯ ಪ್ರೀತಿಯ ಮಗನಾದ ಸೇಲೀಮನೇ ಆತನ ಚಿಂತಾಗ್ನಿಯನ್ನು ಹೊತ್ತಿಸುವ ಮುಖ್ಯ ಕಾರಣವಾಗಿದ್ದನು.

ಈ ಸಂಸಾರದಲ್ಲಿ ಶ್ರೇಷ್ಠಸುಖವೆಂದರೆ ಸುಪುತ್ರ ಪ್ರಾಪ್ತಿಯೇ ಸರಿ. ಸುಪುತ್ರನು ತನ್ನ ಸುಚರಿತಗಳಿಂದ ತಾನು ಧನ್ಯನಾಗುವನಲ್ಲದೆ, ತನ್ನ ವಂಶವನ್ನೂ ಧನ್ಯವಾಗಮಾಡುವನು; ಆದರೆ ಇಂಥ ಧನ್ಯತೆಯು ಅಕಬರ ಬಾದ

ಶಹನಿಗೆ ಪ್ರಾಪ್ತವಾಗದ್ದರಿಂದ ಆತನು ಎಷ್ಟು ಪುಣ್ಯಶಾಲಿಯಾದರೂ, ಎಷ್ಟು ಧನವಂತನಾದರೂ ಒಂದು ಬಗೆಯಿಂದ ಅಧನ್ಯನೇ ಸರಿ. ಸೇಲೀಮನು ದುರಾಚಾರಿಯಾಗಲಿಕ್ಕೆ ಬಾಲ್ಯದಿಂದ ಆತನಿಗಾದ ದುಸ್ಸಂಗವೇ ಕಾರಣವು. ನಮ್ಮ ನೀತಿಶಾಸ್ತ್ರವು ಮನುಷ್ಯನ ಅಮಾರ್ಗ ಗಮನಕ್ಕೆ ತಾರುಣ್ಯ, ಐಶ್ವರ್ಯ, ಪ್ರಭುತ್ವ, ಅವಿವೇಕತೆ ಇವು ಬೇರೆ ಬೇರೆ ಒಂದೊಂದೇಯಾದರೂ ಕಾರಣವಾಗುವವೆಂದು ಹೇಳುವದು. ಸೇಲೀಮನಲ್ಲಿಯಂತು ಈ ನಾಲ್ಕೂ ಒಟ್ಟುಗೂಡಿರುವಾಗ ಆತನಿಗೆ ದುಸ್ಸಂಗತಿಯ ಯೋಗವು ಒದಗಲು, ಆತನು ಅಮಾರ್ಗಗಾಮಿಯಾದದ್ದರಲ್ಲಿ ಆಶ್ಚರ್ಯವೇನು? ಈ ಪರಿಯ ಆತ್ಮಘಾತವು ಆಗಬಾರದೆಂತಲೇ ನಮ್ಮ ಪ್ರಾಚೀನ ರಾಜರು ಬಿಟ್ಟಿದ್ದು ಬಿಟ್ಟು ತಮ್ಮ ಮಕ್ಕಳಿಗೆ ಚಿಕ್ಕಂದಿನಿಂದ ಬಹುಕಾಲ ಗುರುಕುಲವಾಸದ ಯೋಗವನ್ನು ಒದಗಿಸಿ ಕೊಟ್ಟು, ಮೇಲಿನ ನಾಲ್ಕು ಬಾಧೆಗಳ ಕಸುವೂ, ವಿಷವೂ ಕಡಿಮೆಯಾಗುವಂತೆ ಮಾಡಿ, ಸತ್ಸಮಾಗಮದ ಮಹತ್ವವನ್ನು ಅರಿತುಕೊಳ್ಳುವಂತಹ ವಿವೇಕವನ್ನು ಅವರಲ್ಲಿ ಉಂಟುಮಾಡುತ್ತಿದ್ದರು; ಆದರೆ ಅಂಥ ಪವಿತ್ರ ಕರ್ತವ್ಯವನ್ನು ಮಾಡಿದ ಶ್ರೇಯಸ್ಸಿಗೆ ಅಕಬರಬಾದಶಹನು ಪಾತ್ರನಾಗದೆ, ನಮ್ಮಲ್ಲಿಯ ಮೋಹಹತನಾದ ಪೌರಾಣಿಕ ಧೃತರಾಷ್ಟ್ರನಂತೆ ಅಚ್ಚೆಯಿಂದ ಮಕ್ಕಳ ಸ್ವಚ್ಛಂದವೃತ್ತಿಗೆ ಉತ್ತೇಜನವನ್ನು ಕೊಟ್ಟಿದ್ದರಿಂದ, ಕಾಲಕ್ಕನುಸರಿಸಿ ಏನಾಗುವದು ಆಗುತ್ತಿದ್ದರೂ ಮಕ್ಕಳನ್ನು ಕುಮಾರ್ಗ ಕೂಪದಲ್ಲಿ ಕೆಡವಿದ ಆರೋಪಕ್ಕೆ ಆ ಬಾದಶಹನು ಗುರಿಯಾಗಬೇಕಾಯಿತು. ಹೀಗೆ ಸತ್ಸಮಾಗಮ ಹೀನನಾದ ಸೇಲೀಮನು ತನ್ನ ಅಯೋಗ್ಯವಾದ ಆಚರಣೆಯಿಂದ ತನ್ನ ತಂದೆಯ ದುಃಖಕ್ಕೆ ಹೇಗೆ ಕಾರಣನಾದನೆಂಬದನ್ನು ಕೆಳಗಿನ ಸಂಗತಿಗಳಿಂದ ವಾಚಕರು ಅರಿತುಕೊಂಡು, ತಮ್ಮ ಮಕ್ಕಳಿಗೆ ಈಗಿನ ಪರಿಪಾಠದಂತೆ ಚಹಾ-ಚುಟ್ಟಾಗಳಂಥ ಹಲವು ದುಷ್ಟ ವಿಷಯಗಳ ಹಾಗು ಧರ್ಮಹೀನ ಜನರ, ಸಂಗವಾಗಗೊಡದೆ ವಿವೇಕದಿಂದ ಸತ್ಸಮಾಗಮದ ಯೋಗವನ್ನು ಒದಗಿಸಿಕೊಡಲಿಕ್ಕೆ ಯತ್ನಿಸತಕ್ಕದ್ದು; ಮತ್ತು ಅದಕ್ಕಿಂತ ಮೊದಲು ಈ ಸಂಬಂಧವಾಗಿ ತಮ್ಮನ್ನು ತಿದ್ದಿಕೊಳ್ಳುವ ಯತ್ನವನ್ನು ಮಾಡತಕ್ಕದ್ದು; ಇಲ್ಲದಿದ್ದರೆ ಆತ್ಮೋದ್ಧಾರದ, ಅಥವಾ ದೇಶೋದ್ಧಾರದ ಹುರುಳಿಲ್ಲದ ನೂರಾರು ಯತ್ನಗಳು ನಿಷ್ಫಲವಾಗುವದೇ ಸರಿ.

ಅಕಬರ ಬಾದಶಹನ ರಾಜಕಾರಣದೊಳಗಿನ ಪ್ರಸಿದ್ಧ ಪುರುಷರಾದ ರಾಜಾ ಮಾನಸಿಂಹ, ಅಬುಲಫಜಲ, ಅಜೀಮುಖಾನ, ಶೇರಅಫಗಾಣ ಎಂಬ ನಾಲ್ವರನ್ನು ಸೇಲೀಮನು ತನ್ನ ಶತ್ರುಗಳೆಂದು ತಿಳಿಯುತ್ತಿದ್ದನು. ಅವರಲ್ಲಿಯೂ ಮಾನಸಿಂಹನೂ, ಅಬುಲಫಜಲನೂ ಮುಖ್ಯ ಶತ್ರುಗಳು. ಮಾನಸಿಂಹನಂತು ಸೇಲೀಮನ ಸಮೀಪದ ಆಪ್ತನೆಂಬದನ್ನು ವಾಚಕರು ಬಲ್ಲರು. ಅಬುಲ ಫಜಲನೆಂಬ ವಿದ್ವಾಂಸನು ಅಕಬರನ ಜೀವದ ಗೆಳೆಯ ನಾಗಿದ್ದು, ಆತನ ನಂಬಿಗೆಯ ಶ್ರೇಷ್ಠ ಮಂತ್ರಾಲೋಚಕನಾಗಿದ್ದನು. ಇವ ರಿಬ್ಬರೂ ಸೇಲೀಮನ ನಡತೆಗೆ ಸೇರದೆ, ಆತನ ಅಯೋಗ್ಯ ಆಚರಣೆಗಳನ್ನು ಪ್ರಸಂಗನೋಡಿ ಬಾದಶಹನ ಮುಂದೆ ಆಡಿತೋರಿಸಿ, ಖುಸ್ರುವಿನ ಗುಣಗ ಳನ್ನು ವರ್ಣಿಸುತ್ತಿದ್ದರು; ಆದ್ದರಿಂದ ಅಕಬರ ಬಾದಶಹನು ಇವರಿಬ್ಬರೂ, ಹಾಗು ಖುಸ್ರುವಿನ ಮಾವನಾದ ಅಜಿಮುಖಾನನೂ ಸೇಲೀಮನ ವಿಷಯ ವಾಗಿ ದುರಭಿಪ್ರಾಯವುಳ್ಳವರಾಗಿರುವರೆಂಬದನ್ನು ಅರಿತು, ಅವರ ಮಾತು ಗಳಿಗೆ ಮಹತ್ವ ಕೊಡತಕ್ಕಷ್ಟೇ ಕೊಡುತ್ತಿದ್ದನು. ಆತನಿಗೆ ಮಗನ ದುರಾ ಚರಣೆಯು ಸಂಪೂರ್ಣವಾಗಿ ಗೊತ್ತಿತ್ತು; ಆದರೂ ಈ ಮೂವರು ಖುಸ್ರು ವನ್ನು ಪಟ್ಟಕ್ಕೆ ಕುಳ್ಳಿರಿಸುವದಕ್ಕಾಗಿ ಯತ್ನಿಸುವವರಾದದ್ದರಿಂದ, ತಮ್ಮ ಕಾರ್ಯಸಾಧನಕ್ಕಾಗಿ ಏನಾದರೂ ಬೆಳಿಸಿ ಹೇಳುತ್ತಿದ್ದರೂ ಹೇಳುತ್ತಿರಬಹು ದೆಂದು ಆತನು ತಿಳಿಯುತ್ತಿದ್ದನು. ಮಗನ ಮೇಲಿನ ಮೋಹದಿಂದ ಬಾದ ಶಹನು ಆತನಿಗೆ ಕಠೋರ ಶಾಸನಮಾಡಲಿಕ್ಕೂ, ಆತನನ್ನು ದೂರಕ್ಕೆ ಕಳಿಸ ಲಿಕ್ಕೂ ಸಿದ್ಧನಾಗಿದ್ದಿಲ್ಲ. ಒಮ್ಮೆ ಮಾನಸಿಂಹನು—“ಸೇಲೀಮನನ್ನು ಶೂರರಾದ ಬಂಗಾಲದ ಪಠಾಣರ ಶಾಸನ ಮಾಡುವದಕ್ಕಾಗಿ ಬಂಗಾಲದ ಆಧಿಪತ್ಯವನ್ನು ಕೊಟ್ಟು ಕಳಿಸಿದರೆ, ಆತನ ದುರಾಚರಣೆಗಳಿಗೆ ಪ್ರತಿಬಂಧ ವಾಗುವದೆಂ”ದು ಬಾದಶಹನಿಗೆ ಆಲೋಚನೆ ಹೇಳಿದನು; ಆದರೆ ಬಾದ ಶಹನು ಅದರ ಅರ್ಥವನ್ನು ವಿಪರೀತವಾಗಿ ಮಾಡಿ, ಮಗನನ್ನು ಬಂಗಾ ಲಕ್ಕೆ ಕಳಿಸದೆ, ತಿರುಗಿ ಮಾನಸಿಂಹನನ್ನು ಬಹಳವಾಗಿ ಗೌರವಿಸಿ, ಆತ ನನ್ನೇ ಬಂಗಾಲದ ಸುಬೇದಾರನನ್ನಾಗಿ ಮಾಡಿ ಕಳಿಸಿದನು. ಸೇಲೀಮ ನನ್ನು ಮೇವಾಡದ ರಾಣಾ ಪ್ರತಾಪಸಿಂಹನ ಮಗನಾದ ಅಮರಸಿಂಹನನ್ನು ಸ್ವಾಧೀನ ಪಡಿಸಿಕೊಳ್ಳುವದಕ್ಕಾಗಿ ಕಳಿಸುವದರಿಂದ ಆತನು ರಜಪೂತ ವೀರ

ರನ್ನು ಸೋಲಿಸಿದ ಕೀರ್ತಿಗೆ ಪಾತ್ರನಾಗುವನೆಂದು ತಿಳಿದು ಬಾದಶಹನು ಆತನನ್ನು ಆ ರಜಪೂತ ವೀರನ ಮೇಲೆ ಕಳಿಸಿದನು; ಆದರೆ ಶೂರರಾದ ರಜಪೂತರೊಡನೆ ಕಾದುವದು ಸುಲಭವಾಗಿದ್ದಿಲ್ಲ. ಅದಕ್ಕಾಗಿ ಅಪರಿಮಿತ ಸೈನ್ಯವೂ, ಅಪಾರ ದ್ರವ್ಯವೂ ಅವಶ್ಯವಾಗಿದ್ದವು. ಅದರಂತೆ ಸೇಲೀಮನು ದ್ರವ್ಯ-ಸೈನ್ಯಗಳ ಸಹಾಯವನ್ನು ಹಟದಿಂದಬೇಡಲು, ಅಕಬರನು ಸಂತೋಷದಿಂದ ಅವನ್ನು ಮಗನಿಗೆ ಒದಗಿಸಿಕೊಟ್ಟನು. ಇದರಿಂದ ಕಾರ್ಯವೇನು ಆಗದೆ ಸೇಲೀಮನು ಅತ್ಯಂತ ಬಲಿಷ್ಠನು ಮಾತ್ರ ಆದನು.

ಮನುಷ್ಯನು ಬಡವನಿರಲಿ, ಸರ್ವಭೌಮನಿರಲಿ ಆತನಿಂದ ತಪ್ಪುಗಳು ಆಗಿಯೇ ಆಗುವದರಿಂದ, ಮನುಷ್ಯ ಪ್ರಾಣಿಯು ಸದಾ ತಪ್ಪುಗಳಿಗೆ ಪಾತ್ರನೆಂದು ಹೇಳಬೇಕಾಗುವದು. ಅಕಬರ ಬಾದಶಹನು ಸೇಲೀಮನನ್ನು ಬಂಗಾಲಕ್ಕೆ ಕಳಿಸದೆ ರಜಪೂತ ಸ್ಥಾನಕ್ಕೆ ಕಳಿಸಿ ಆತನನ್ನು ಬಲಿಷ್ಠನಾಗ ಮಾಡಿದ್ದು, ಸೇಲೀಮನ ಪಿತೃದ್ರೋಹ-ಬುದ್ಧಿಯ ಮೂಲಕ ತಪ್ಪೇ ಆಯಿತು. ಸೇಲೀಮನ ದುಷ್ಟ ಪರಿವಾರವು ಈ ಕಾಲದಲ್ಲಿ ಸೇಲೀಮನ ಮನಸ್ಸಿನಲ್ಲಿ ತಂದೆಯ ವಿರುದ್ಧ ಬಂಡಾಯ ಹೂಡುವ ದುರ್ಬುದ್ಧಿಯ ಬೀಜವನ್ನು ಬಿತ್ತತೊಡಗಿತು. ಈ ಕಾಲದಲ್ಲಿ ಮಾನಸಿಂಹನೊಡನೆ ಕೆಲವು ಬಾದಶಾಹೀ ಸೈನ್ಯವು ಬಂಗಾಲದಲ್ಲಿಯೂ, ಸ್ವತಃ ಅಕಬರ ಬಾದಶಹನೊಡನೆ ಕೆಲವು ಸೈನ್ಯವು ದಕ್ಷಿಣದಲ್ಲಿಯೂ ವಿಜಯವನ್ನು ಸಂಪಾದಿಸುವ ಕಾರ್ಯವನ್ನು ನಡಿಸಿದ್ದವು. ಹೀಗೆ ಬಾದಶಾಹಿಯ ಸೈನ್ಯವು ಅಲ್ಲಲ್ಲಿ ವಿಭಾಗಿಸಿ ಹೋಗಿರುವದನ್ನು ನೋಡಿ ಸೇಲೀಮನ ದುಷ್ಟ ಮಿತ್ರರು ಆತನನ್ನು ಕುರಿತು—"ಹುಜೂರ, ಹೀಗೆಯೇ ಅಧಿಕಾರ ಹೀನರಾಗಿ ತಾವು ಎಷ್ಟುದಿನ ಹಾದಿಯ ನೋಡತಕ್ಕವರು? ರಾಜಾ ಮಾನಸಿಂಹ, ಹಾಗು ಅಬುಲಫಜಲನ ದುರ್ಬೋಧದಿಂದ ಬಾದಶಹರು ನಿಮ್ಮ ಮೇಲಿನ ಮನಸ್ಸು ತೆಗೆಯುತ್ತ ಹೋಗಿರುವರು. ಹೀಗೆಯೇ ನೀವು ಉದಾಸೀನರಾಗಿ ಕಾಲಹರಣ ಮಾಡಹತ್ತಿದರೆ, ದಿಲ್ಲಿಯ ಸಿಂಹಾಸನಕ್ಕೆ ಎರವಾಗಬೇಕಾದೀತು. ಈಗ ಬಾದಶಾಹೀ ಸೈನ್ಯವು ಬಂಗಾಲ ಪ್ರಾಂತದಲ್ಲಿಯೂ, ದಕ್ಷಿಣದಲ್ಲಿಯೂ ವಿಭಾಗಿಸಿ ಹೋಗಿರುವದರಿಂದ, ನೀವು ನಿಮ್ಮ ಶಕ್ತಿಯ ಉಪಯೋಗ ಮಾಡಿದರೆ ಇಡಿಯ ಹಿಂದುಸ್ಥಾನವಿಲ್ಲದಿದ್ದರೂ, ಅರ್ಧ ಹಿಂದುಸ್ಥಾನವಂತು ನಿಮ್ಮ

ಕೈಸೇರುವದು. ಇಂಥ ಸಂಧಿಯು ಪುನಃ ದೊರೆಯಲಿಕ್ಕಿಲ್ಲ" ಎಂದು ಉಪದೇಶಿಸಲು, ಅವರ ಆ ದುರುಪದೇಶವು ಸೇಲೀಮನ ಮನಸ್ಸಿಗೆ ಬಂದು, ಆತನು ಸೈನ್ಯದೊಡನೆ ಆಗ್ರಾಪಟ್ಟಣದ ಮೇಲೆ ಸಾಗಿಹೋದನು. ಅಕಬರ ಬಾದಶಹನು ದಕ್ಷಿಣಕ್ಕೆ ಹೋಗುವಾಗ ಶೂರನೂ, ಪ್ರಾಮಾಣಿಕನೂ ಆದ ಕುಲೀಜಖಾನನನ್ನು ಆಗ್ರಾ ರಾಜಧಾನಿಯ ಸಂರಕ್ಷಣಕ್ಕಾಗಿ ನಿಯಮಿಸಿ, ಯೋಗ್ಯ ವ್ಯವಸ್ಥೆ ಮಾಡಿ ಹೋಗಿದ್ದನು. ಸೇಲೀಮನು ರಾಜಭಾಂಡಾರವನ್ನು ಸ್ವಾಧೀನ ಪಡಿಸಿಕೊಳ್ಳುವದಕ್ಕಾಗಿ ದೊಡ್ಡ ಸೈನ್ಯದೊಡನೆ ರಾಜಧಾನಿಯ ಮೇಲೆ ಸಾಗಿಬರುತ್ತಿರಲು, ಈ ವರ್ತಮಾನವನ್ನು ಕೇಳಿ ಕುಲೀಜಖಾನನು ಕೋಟೆಯೊಳಗಿಂದ ಹೊರಗೆ ಬಂದು ಸೇಲೀಮನನ್ನು ಯೋಗ್ಯ ರೀತಿಯಿಂದ ಸತ್ಕರಿಸಿದನು. ಯೋಗಕ್ಷೇಮದ ವಿಚಾರವಾದನಂತರ ಕುಲೀಜಖಾನನು ಸುಲ್ತಾನ ಸೇಲೀಮನನ್ನು ಕುರಿತು--ಹುಜೂರ, ಇಷ್ಟು ದೊಡ್ಡ ಸೈನ್ಯವನ್ನು ನಾಶಗೊಳಿಸಿ ದೊರಕಿಸಿಕೊಳ್ಳುವಂತಹದು ಆಗ್ರಾದ ರಾಜಭಾಂಡಾರದಲ್ಲಿ ಏನೂ ಇರುವದಿಲ್ಲ. ತಮ್ಮ ಮನಸ್ಸಿನಲ್ಲಿ ಸಾಮರ್ಥ್ಯ ಸಂಚಯವನ್ನೂ, ದ್ರವ್ಯ ಸಂಚಯವನ್ನೂ ಮಾಡುವದಿದ್ದರೆ ತಾವು ಅಲಹಾಬಾದದ ಕೋಟೆಯನ್ನು ಸ್ವಾಧೀನಪಡಿಸಿಕೊಳ್ಳಬೇಕು. ಅಲ್ಲದೆ, ಅಯೋಧ್ಯಾ ಬಿಹಾರ ಪ್ರಾಂತಗಳೆರಡೂ ಸದ್ಯಕ್ಕೆ ಯಾರ ಸಂರಕ್ಷಣದಲ್ಲಿಯೂ ಇರದೆ ಇರುವದರಿಂದ, ಅವನ್ನು ತಾವು ಸಹಜವಾಗಿಯೇ ಸ್ವಾಧೀನಪಡಿಸಿಕೊಳ್ಳಬಹುದು. ಈಗ ಬಾದಶಹರು ದಕ್ಷಿಣದಲ್ಲಿ ದೊಡ್ಡ ವಿಜಯವನ್ನು ಸಂಪಾದಿಸಿ ಅಸಂಖ್ಯ ಸೈನ್ಯದೊಡನೆ ಇತ್ತಕಡೆಗೆ ಬರುತ್ತಿರುವ ಸುದ್ದಿಯು ಬಂದಿದೆ. ಅಂದಬಳಿಕ ಈ ಪ್ರಸಂಗದಲ್ಲಿ ತಾವು ಶತ್ರುತ್ವದಿಂದ ಇಲ್ಲಿ ಇರುವದು ಘಾತಕವಾಗಿರುವದು ಎಂದು ಹೇಳಿದನು.

ದುರ್ಗಾಧಿಪತಿಯಾದ ಕುಲೀಜಖಾನನ ಯೋಗ್ಯತೆಯನ್ನೂ, ಸಾಮರ್ಥ್ಯವನ್ನೂ ಸೇಲಿಮನು ಚನ್ನಾಗಿ ಅರಿತಿದ್ದನು; ಇದಲ್ಲದೆ ಕುಲೀಜಖಾನನನ್ನು ಸೇಲೀಮನು ತನ್ನ ಮಿತ್ರನೆಂದು ತಿಳಿದಿದ್ದನು; ಆದ್ದರಿಂದ ಆತನ ಈ ಆಲೋಚನೆಯು ಯೋಗ್ಯವಾದದ್ದೆಂದು ತಿಳಿದು ಆ ಪಿತೃದ್ರೋಹಿ ರಾಜಪುತ್ರನು ಅಲಹಾಬಾದದಕಡೆಗೆ ಹೊರಳಿದನು. ಅಯೋಧ್ಯಾ-ಬಿಹಾರ ಪ್ರಾಂತಗಳೆರಡೂ ಅನಾಯಾಸವಾಗಿ ಆತನ ಕೈಸೇರಿದವು. ಬಳಿಕ ಆತನು

ಅಲಹಾಬಾದದ ಕೋಟೆಯಮೇಲೆ ತನ್ನ ನಿಶಾನೆಯನ್ನು ಏರಿಸಿ, ತನ್ನ ಹೆಸರಿನ ನಾಣ್ಯಗಳನ್ನು ಮುದ್ರಿಸಿ, ಕೆಲವು ನಾಣ್ಯಗಳನ್ನು ದುಷ್ಟತನದಿಂದ ಬಾದಶಹನಿಗೆ ಕಾಣಿಕೆಯಾಗಿ ಕಳಿಸಿದನು. ದಕ್ಷಿಣದಲ್ಲಿ ವಿಜಯಶಾಲಿಯಾಗಿ ಆಗ್ರಾದ ಕಡೆಗೆ ಸಾಗಿಬರುತ್ತಿದ್ದ ಬಾದಶಹನಿಗೆ ಹಾದಿಯಲ್ಲಿಯೇ ಆ ನಾಣ್ಯಗಳು ಮುಟ್ಟಿ, ತನ್ನ ಕೃತಘ್ನ ಮಗನ ಬಂಡಾಯದ ಸುದ್ದಿಯು ಆತನಿಗೆ ಹತ್ತಿತು. ಈ ಎಲ್ಲಾ ಅನಾಯಕತ್ವವನ್ನು ನೋಡಿ ಬಾದಶಹನು ಸಿಟ್ಟಿ ಬೆಂಕಿಯಾದನು. ಒಂದು ಹಿಂದುಸ್ಥಾನದಲ್ಲಿ ಇಬ್ಬರು ಬಾದಶಹರಿರುವದು ತಕ್ಕವಲ್ಲವೆಂದು ತಿಳಿದು, ಬಾದಶಹನು ಸೈನ್ಯದೊಡನೆ ಅಲಹಾಬಾದದ ಕಡೆಗೆ ಸಾಗಿದನು. ಆದರೆ ಪುತ್ರಸ್ನೇಹದಿಂದ ಆತನ ಹೃದಯವು ಉಕ್ಕಿಬಂದದ್ದರಿಂದ ಆತನು ಮಗನಿಗೆ ತಿರಸ್ಕಾರವಾದದ್ದೊಂದು ಪತ್ರವನ್ನು ಬರೆದನು. ಆ ಪತ್ರದಲ್ಲಿ ಆತನು— "ಸೇಲೀಮಾ, ನಿನ್ನ ಸಾಮರ್ಥ್ಯವೆಂದರೆ ಎಷ್ಟು? ನಿನ್ನ ತಂದೆಯಾದ ಅಕಬರನು ಹಿಂದುಸ್ಥಾನದ ಬಾದಶಹನಾಗಿರುವನು; ಅಂದಬಳಿಕ ಆತನ ವಿರುದ್ಧವಾಗಿ ನಿನ್ನ ಸಾಮರ್ಥ್ಯವು ಎಷ್ಟು ಹೊತ್ತು ನಡೆಯಬಹುದು? ನೀನು ಈಗ ಮಾಡಿರುವದನ್ನು ಸಣ್ಣ ಹುಡುಗರ ಕಿಡಿಗೇಡಿತನವೆಂದು ನಾನು ತಿಳಿದಿರುವೆನು. ನಿನ್ನ ಪ್ರೇಮದ ತಂದೆಯಾದ ನನಗೆ ನಿನ್ನ ಈ ಅಪರಾಧವು ಇನ್ನೂ ಕ್ಷಮ್ಯವಾಗಿ ತೋರುತ್ತಿರುವದು. ಈ ಪತ್ರವನ್ನು ಓದಿದಕೂಡಲೆ, ದುಷ್ಟರೂ, ಸ್ವಾರ್ಥಪರಾಯಣರೂ ಆದ ನಿನ್ನ ಮಿತ್ರರಿಗೆ ಅಪ್ಪಣೆಯನ್ನು ಕೊಟ್ಟು, ವಿಚಾರಪೂರ್ವಕವಾಗಿ ನಿನ್ನ ಅವಿಚಾರದ ಬುದ್ಧಿಯ ಸಂಶೋಧವವನ್ನು ಮಾಡು. ಸೇಲೀಮಾ, ನಾನು ಇನ್ನು ಎಷ್ಟು ದಿವಸ ಬದುಕಿ ಇರುವೆನು? ಸಿಂಹಾಸನವಂತು ನಿನ್ನದೇ ಇರುವದು. ಅಂದಬಳಿಕ ಇಂಥ ದುಷ್ಟತನವೇಕೆ ನೀನೇ ಹೇಳು? ಇನ್ನೂವರೆಗೆ ನನ್ನ ಸ್ನೇಹಮಯ ಹೃದಯವು ಕ್ಷಮಾಪೂರ್ವಕವಾಗಿ ನಿನ್ನನ್ನು ಆಲಿಂಗಿಸಲಿಕ್ಕೆ ಆತುರಪಡುತ್ತಿರುವದು. ನನ್ನ ಒರೆಯೊಳಗಿನ ಖಡ್ಗವು ನಿನ್ನ ವಿರುದ್ಧವಾಗಿ ಎಂದೂ ಹೊರಬೀಳಲಾರದು. ನಿನ್ನ ತಿರಸ್ಕೃತ ಕಾರ್ಯದ ಪಶ್ಚಾತ್ತಾಪವು ಸ್ವಲ್ಪವಾದರೂ ನಿನಗೆ ಆಗಿದ್ದರೆ, ಭ್ರಮೆಯಿಂದ ನಿನ್ನ ತಿಳುವಳಿಕೆಯು ತಪ್ಪಾದದ್ದು ನಿನ್ನ ಲಕ್ಷದಲ್ಲಿ ಬಂದಿದ್ದರೆ ಈ ಪತ್ರವನ್ನು ಓದಿದಕೂಡಲೆ ನೀನು ಆಗ್ರಾಕ್ಕೆ ಹೊರಟುಬಾ, ನಿಲ್ಲಬೇಡ.

ತಂದೆಯು ಈ ಪತ್ರ ಮುಟ್ಟಿದಕೂಡಲೆ ಸೇಲೀಮನಿಗೆ ಬಹಳ ಪಶ್ಚಾತ್ತಾಪವಾಯಿತು. ಆತನ ಹೃದಯದಲ್ಲಿ ಅಲ್ಪಸ್ವಲ್ಪ ಸಾತ್ವಿಕ ಸಾಮರ್ಥ್ಯವೂ ಉಂಟಾಯಿತು. ಆತನು ಪಶ್ಚಾತ್ತಾಪದಿಂದ— "ಉದಾರ ಹೃದಯದ ಪ್ರೇಮಲ ಸ್ವಭಾವವುಳ್ಳ ನನ್ನ ತಂದೆ ಸಾಮ್ರಾಟರವರು ಕದಾಚಿತ್ ನನ್ನನ್ನು ಕ್ಷಮಿಸಲೂಬಹುದು. ಅವರು ಬರೆದಿರುವಂತೆ ಇನ್ನಾದರೂ ಅವರು ಈ ಭೂಮಿಯಲ್ಲಿ ಎಷ್ಟು ದಿವಸ ಬಾಳಿ ಇರುವರು ? ಅವರ ತರುವಾಯ ಹಿಂದುಸ್ಥಾನದ ಸಿಂಹಾಸನವು ನನ್ನದೇ ಇರುತ್ತದೆ. ನಿಜವಾಗಿಯೇ ನಾನು ಹತಭಾಗ್ಯನು, ರಾಜಕುಲದಲ್ಲಿ ಉತ್ಪನ್ನವಾಗಿ ಕಲಂಕವನ್ನುಂಟುಮಾಡಿದೆನು! ಕ್ಷಮಾಶೀಲನೂ, ಸ್ನೇಹಮಯನೂ ಆದ ತಂದೆಯ ವಿರುದ್ಧವಾಗಿ ನಾನು ಶಸ್ತ್ರವನ್ನೆತ್ತಿದ್ದು ಎಂಥ ತಪ್ಪು! ಈ ಪಾಪದೊಳಗಿಂದ ನಾನು ಎಂದಾದರೂ ಮುಕ್ತನಾಗಬಹುದೋ ?" ಎಂದು ವಿಚಾರಿಸಿ, ತಂದೆಗೆ ಶರಣುಹೋಗುವದನ್ನು ನಿಶ್ಚಯಿಸಿದನು. ಈ ಕಾಲದಲ್ಲಿ ಸೇಲೀಮನ ಸ್ವಾರ್ಥಪರಾಯಣವಾದ ಮಿತ್ರಮಂಡಲವು ಅವನ ಬಳಿಯಲ್ಲಿಯೇ ಇತ್ತು. ಅದು ಸೇಲೀಮನ ಈ ಪಶ್ಚಾತ್ತಾಪಯುಕ್ತ ಉದ್ಗಾರಗಳನ್ನು ಕೇಳಿ, ಸ್ವಲ್ಪ ಚಿಂತಾತುರವಾಯಿತು; ಯಾಕಂದರೆ ಸೇಲೀಮನು ಅವರ ಕೈಯಲ್ಲಿರುವವರೆಗೆ ಅವರಿಗೆ ಯಾವ ತರದ ಕೊರತೆಯೂ ಬರುವಹಾಗಿದ್ದಿಲ್ಲವೆಂಬದು ಸ್ಪಷ್ಟವಾದದ್ದು. ಸುಲ್ತಾನ ಸೇಲೀಮನ ಖಿನ್ನವಾದ ಮುಖಮುದ್ರೆಯನ್ನು ನೋಡಿ ಆ ಮಿತ್ರರು ಆತನಿಗೆ ತಿಳಿಯಹೇಳುವದಕ್ಕಾಗಿ ಆತನನ್ನು ಕುರಿತು—"ಇಂಥ ಹೇಡಿತನದ ಕೆಲಸ ಮಾಡಬಾರದು ಹುಜೂರ! ಯಾವ ರಾಜಕೀಯ ಬಂಡುಗಾರನನ್ನೂ ಅಕಬರ ಬಾದಶಹರು ಕ್ಷಮಿಸುತ್ತಿರುವದಿಲ್ಲ. ನೀವು ಅವರನ್ನು ಕಾಣುವದಕ್ಕೆ ಹೋದರೆ, ನಿಶ್ಚಯವಾಗಿ ಅವರು ನಿಮ್ಮನ್ನು ಸೆರೆಯಲ್ಲಿಡುವರು. ಬಳಿಕ ನಿಮ್ಮ ಮಗನಾದ ಖುಸುರುವಿಗೆ ಅನಾಯಾಸವಾಗಿ ಹಿಂದುಸ್ಥಾನದ ಸಿಂಹಾಸನದ ಪ್ರಾಪ್ತಿಯಾಗುವದು. ಇದರ ಮೇಲೆಯೂ ತಂದೆಯಬಳಿಗೆ ಹೋಗುವದೇ ನಿಮ್ಮ ನಿಶ್ಚಯವಿದ್ದರೆ, ಸಂಗಡ ದೊಡ್ಡ ಸೈನ್ಯವನ್ನಾದರೂ ತಕ್ಕೊಂಡು ಹೋಗಿರಿ. ನಾವು ತಮ್ಮ ಸೇವಕರ ಸೇವಕರಾಗಿರುವೆವು; ಆದ್ದರಿಂದ ಒಡೆಯನ ಕಲ್ಯಾಣವಾಗುವಂತೆ ಹೇಳುವದು ನಮ್ಮ ಮನಸ್ಸಿನ ವಿಚಾರವಿರುವದು; ನಮ್ಮ ಈ ಆಲೋಚನೆಯ ವಿಚಾರವನ್ನು ಖಾವಂದರವರು ಮಾಡುವರೆಂದು

ನಾವು ಆಶಿಸುವೆವು." ಎಂದು ಹೇಳಿದರು. ಅವ್ಯವಸ್ಥಿತಚಿತ್ತನಾದ ಸ್ತೋತ್ರ ಪ್ರಿಯ ಸೇಲೀಮನು ತನ್ನ ಮಿತ್ರರ ಈ ಆಲೋಚನೆಗಾಗಿ ತಲೆದೂಗತೊಡಗಿದನು. ಆತನಿಗೆ ಅವರ ಮಾತು ಸಮರ್ಪಕವಾಗಿ ತೋರಿತು. ಕೂಡಲೆ ಆತನು ಅಗಣಿತ ಸೈನ್ಯದೊಡನೆ ಅಲಹಾಬಾದದಿಂದ ಹೊರಟು ಆಗ್ರಾದ ಕಡೆಗೆ ಸಾಗತೊಡಗಿದನು. ಈ ಸುದ್ದಿಯು ಕೂಡಲೆ ಬಾದಶಹರಿಗೆ ಗೊತ್ತಾಗಲು, ಅವರು ತಡಮಾಡದೆ ಸೇಲೀಮನಿಗೆ ಒಂದು ಪತ್ರವನ್ನು ಒರೆದು—"ಅಪರಿಮಿತ ಸೈನ್ಯದೊಡನೆ ಜಂಗೀಜಖಾನನ ಯಾವ ರಾಜಪುತ್ರನೂ ತಂದೆಯನ್ನು ಕಾಣಲಿಕ್ಕೆ ಬಂದದ್ದು ಯಾರಿಗೂ ಗೊತ್ತಿರುವದಿಲ್ಲ; ಸಾಮಾನ್ಯರಾದ ನಾಲ್ಕಾರುಜನ ಶರೀರ ರಕ್ಷಕ ಸೈನಿಕರನ್ನೂ, ಕೆಲವು ಜನ ಗುಲಾಮರನ್ನೂ ಸಂಗಡ ಕರಕೊಂಡು ನೀನು ಆಗ್ರಾದ ದರ್ಬಾರಕ್ಕೆ ಹಾಜರಾಗು. ಹೀಗೆ ಮಾಡುವದು ಕಠಿಣವಾಗಿ ತೋರುತ್ತಿದ್ದರೆ, ಅಥವಾ ಹೀಗೆ ಬರುವದು ನಿನ್ನ ಮನಸ್ಸಿಗೆ ಬಾರದಿದ್ದರೆ ಅಲಹಾಬಾದವನ್ನು ಬಿಟ್ಟು ಹೊರಗೆ ಬರಲಿಕ್ಕೆ ನಿನಗೆ ಯಾವ ಕಾರಣವೂ ಇರುವದಿಲ್ಲ!! ಎಂದು ತಿಳಿಸಿದನು. ತಂದೆಯ ಈ ಪತ್ರವನ್ನು ಓದಿದಕೂಡಲೆ ಸೇಲೀಮನು ಎಚ್ಚತ್ತು, ತಾನು ಅಲಹಾಬಾದಕ್ಕೇ ತಿರುಗಿ ಹೋಗುವದನ್ನು ನಿಶ್ಚಯಿಸಿ, ತನ್ನ ಉದ್ಧತತನದ ಪಶ್ಚಾತ್ತಾಪ ದರ್ಶಕವಾದ ಒಂದು ಪತ್ರವನ್ನು ಬಾದಶಹನಿಗೆ ಕಳಿಸಿ, ಕ್ಷಮೆಯನ್ನು ಬೇಡಿಕೊಂಡನು. ಅಷ್ಟರಿಂದಲೇ ಬಾದಶಹನು ಸಂತುಷ್ಟನಾಗಿ ಸೇಲೀಮನಿಗೆ ಬಂಗಾಲ-ಬಿಹಾರ ಪ್ರಾಂತಗಳೆರಡರ ಸುಬೇದಾರಿಯನ್ನು ಕೊಟ್ಟು, ಅದರಂತೆ ರಾಜಕೀಯ ಸನದನ್ನು ಕಳಿಸಿಕೊಟ್ಟನು. ಹೀಗೆ ತನ್ನ ತಂದೆಯು ತನ್ನ ತಪ್ಪನ್ನು ಕ್ಷಮಿಸಿ, ತನ್ನ ಮೇಲೆ ಸಿಟ್ಟಾಗುವದರಬದಲು ತನ್ನ ಮೇಲೆ ಪ್ರೇಮ ಮಾಡುವದನ್ನೂ, ತನ್ನನ್ನು ಕಾರಾಗೃಹದಲ್ಲಿರಿಸುವ ಬದಲು ತನಗೆ ಎರಡು ಪ್ರಾಂತಗಳ ಸುಬೇದಾರಿಯ ಕೊಟ್ಟದ್ದನ್ನೂ ನೋಡಿ ಸೇಲೀಮನು ತನ್ನ ನೀಚ ಕೃತ್ಯಕ್ಕಾಗಿ ನಾಚಿದನು. ಇಂದಿನಿಂದ ಕೆಲ ದಿವಸಗಳ ವರೆಗೆ ತಂದೆ-ಮಕ್ಕಳಿಬ್ಬರೂ ಪ್ರೇಮದಿಂದ ಇರತೊಡಗಿದರು.

ಇಷ್ಟಾದರೂ ಸೇಲೀಮನ ದುಷ್ಟ ಮಿತ್ರರು ಆತನ ಕೈಬಿಟ್ಟು ಹೋಗಿದ್ದಿಲ್ಲ. ಆ ಮಿತ್ರ ವರ್ಗದೊಳಗಿನವನಾದ ಒಬ್ಬ ದೊಡ್ಡ ಮಿತ್ರನು, ಅಬುಲಫಜಲನ ರೋಷಕ್ಕೆ ಪಾತ್ರನಾಗಿ ಸೇಲೀಮನ ಬಳಿಗೆ ಬಂದವನಾಗಿದ್ದನು.

ಆತನ ಮೇಲೆ ಸೇಲೀಮನ ಅತ್ಯಂತ ವಿಶ್ವಾಸವಿದ್ದದ್ದು ದುರ್ದೈವದ ಸಂಗತಿಯಾಗಿತ್ತು. ಆ ಮಿತ್ರನು ಸೇಲೀಮನನ್ನು ಕುರಿತು ಮಧುರ ಭಾಷಣದಿಂದ— "ಹುಜೂರ, ತಮ್ಮ ಸಿಂಹಾಸನ ಪ್ರಾಪ್ತಿಗೆ ಇಬ್ಬರು ದೊಡ್ಡ ಪ್ರತಿಬಂಧವಾಗಿರುವರು. ಅವರಲ್ಲಿ ಒಬ್ಬನಾದ ಮಾನಸಿಂಹನು ಬಂಗಾಲದ ಬಂಡಾಯವನ್ನು ಮುರಿಯುವದಕ್ಕಾಗಿ ಹೋಗಿರುವದರಿಂದ, ಆತನು ತಿರುಗಿ ಬರುವನೋ ಇಲ್ಲವೋ ಎಂಬುದು ಸಂಶಯದ ಸಂಗತಿಯಾಗಿರುತ್ತದೆ. ಮೇಲಾಗಿ ಅತನು ಬಾದಶಹರ ಅಪ್ಪಣೆ ಪಾಲಿಸುವ ಸೇವಕನಾಗಿರುವನಲ್ಲದೆ ಮಿತ್ರನಾಗಿರುವದಿಲ್ಲ. ಆದ್ದರಿಂದ ಆತನಿಂದಾಗುವ ಪ್ರತಿಬಂಧಕ್ಕಿಂತ, ಬಾದಶಹರ ನಂಬಿಗೆಯ ಮಿತ್ರನಾದ ಅಬುಲಫಜಲನಿಂದಲೇ ತಮ್ಮ ಸಿಂಹಾಸನ ಪ್ರಾಪ್ತಿಗೆ ದೊಡ್ಡ ಪ್ರತಿಬಂಧ ಉಂಟಾಗುತ್ತಿರುವದು. ಬಾದಶಹರಿಗೆ ಅಬುಲಫಜಲನು ಬಹು ದೊಡ್ಡ ಯೋಗ್ಯತೆಯವನಾಗಿ ತೋರುವನು. ಅಬುಲಫಜಲನು ತಮ್ಮ ವಿಷಯವಾಗಿ ಮೇಲಿಂದಮೇಲೆ ಬಾದಶಹರ ಮನಸ್ಸು ಕೆಡಿಸುವದು ತಾವು ಅರಿಯದ ಮಾತಲ್ಲ. ಈಗ ಬಾದಶಹರು ಮುಪ್ಪಿನಿಂದಲೂ, ರೋಗದಿಂದಲೂ ಹಣ್ಣಾಗಿರುವದರಿಂದ, ತಮ್ಮ ಪಶ್ಚಾತ್ ಸಿಂಹಾಸನವನ್ನು ಯಾರಿಗೆ ಕೊಡಬೇಕೆಂಬದನ್ನು ಆಲೋಚಿಸುವದಕ್ಕಾಗಿಯೇ ದಕ್ಷಿಣದೇಶದೊಳಗಿಂದ ಅಬುಲಫಜಲನನ್ನು ಬೇಗನೆ ಬರಬೇಕೆಂದು ಬುದ್ಧಿಪೂರ್ವಕವಾಗಿ ಕರೆಯಕಳಿಸಿರುವರು. ಈ ಪ್ರಸಂಗದಲ್ಲಿ ನೀವು ಉದಾಸೀನ ಮಾಡಿದರೆ ಕೆಲಸವು ಕೆಡುವ ಸಂಭವವಿರುವದು; ಆದ್ದರಿಂದ ಸರ್ವಾರಿಷ್ಟಗಳಿಗೂ ಮೂಲ ಕಾರಣನಾದ ಅಬುಲಫಜಲನನ್ನು ಈ ಲೋಕದಲ್ಲಿ ಇಲ್ಲದಂತೆ ಮಾಡಿದರೆ, ತಮ್ಮ ಕಾರ್ಯವಾಗುವದು ಬಹುಮಟ್ಟಿಗೆ ಸುಲಭವಾಗುವದು. ಆದ್ದರಿಂದ ಏನಾದರೂ ಹಂಚಿಕೆ ಮಾಡಿ ಹಾದಿಯಲ್ಲಿ ಅಬುಲಫಜಲನ ಖೂನು ಮಾಡಿಸಿಬಿಡಬೇಕು; ಅಂದರೆ ನಿಮ್ಮ ಮೇಲೆ ಯಾವ ಆರೋಪವೂ ಬಾರದೆ, ಹಾದಿಯಲ್ಲಿ ಯಾರೋ ಕೊಲೆಗಡಕರು ಖೂನು ಮಾಡಿದರೆಂದು ಜನರ ತಿಳುವಳಿಕೆಯಾಗಿ, ನೀವು ಅಪರಾಧಮುಕ್ತರಾಗುವಿರಿ, ಎಂದು ಹೇಳಿದನು. ಮಿತ್ರನ ಈ ಆಲೋಚನೆಯು ಸೇಲೀಮನಿಗೆ ಯೋಗ್ಯವಾಗಿ ತೋರಿ, ಆತನು ವಿವೇಕ, ಧರ್ಮ, ನ್ಯಾಯಗಳನ್ನೆಲ್ಲ ಬದಿಗಿಟ್ಟು, ತನ್ನ ಪ್ರಿಯ ಮಿತ್ರನಾದ ಬುಂದೇಲಿಯ ರಾಜಾ ವೀರಸಿಂಹದೇವನ ಸಹಾಯ

ದಿಂದ ಅಬುಲಫಜಲನನ್ನು ಕೊಲ್ಲುವ ಕಾರ್ಯವನ್ನು ಪೂರ್ಣಮಾಡಿದನು. ಯೋಗ್ಯ ಪ್ರಸಂಗದಲ್ಲಿ ಸ್ವಾಮಿನಿಷ್ಠ ಅಬುಲಫಜಲನ ತುಂಡರಿಸಿದ ತಲೆಯು ಅಲಹಾಬಾದಕ್ಕೆ ಬಂದುಮುಟ್ಟಿತು. ಈ ಭಯಂಕರ ವರ್ತಮಾನವನ್ನು ಕೇಳಿ ಯಾವತ್ತು ಅಮೀರ ಉಮರ ಉಮರಾವರು ಬೆದರಿಬಿದ್ದರು. ಬಾದಶಹರ ಕಿವಿಗೆ ಈ ಸುದ್ದಿಯು ಮುಟ್ಟಿದರೆ ಪರಿಣಾಮವೇನಾದೀತೆಂಬದರ ಅನುಮಾನವು ಯಾರಿಗೂ ಆಗದೆ, ಅವರು ಶಾಂತಿತ ಹೃದಯರಾದರು. ಬಾದ-ಶಹರಿಗೆ ಈ ಸುದ್ದಿಯನ್ನು ಮುಟ್ಟಿಸುವ ಧೈರ್ಯವು ಯಾರಿಗೂ ಆಗಲೊಲ್ಲದು. ಮೊಗಲ ರಾಜವಂಶದೊಳಗಿನ ಯಾವನೊಬ್ಬ ರಾಜಪುತ್ರನ ಮರಣದ ಸುದ್ದಿಯನ್ನು ತಿಳಿಸುವದಾದರೆ, ಆ ರಾಜಪುತ್ರನ ವಕೀಲನ ಬಲ ಮುಂಗೈಗೆ ಒಂದು ರೇಶಿಮೆಯ ರುಮಾಲವನ್ನು ಕಟ್ಟಿ ಬಾದಶಹರ ಕಡೆಗೆ ಕಳಿಸುವ ಪರಿಪಾಠವಿತ್ತು. ಅದರಂತೆ ಈಗೂ ಮಾಡಿ ಅಬುಲಫಜಲನ ವಕೀಲನನ್ನು ಬಾದಶಹರ ಕಡೆಗೆ ಕಳಿಸಿದರು. ತನ್ನ ಪ್ರಿಯ ಮಿತ್ರನ ಮರಣವಾರ್ತೆಯನ್ನು ಕೇಳಿ ಬಾದಶಹನು ಅತ್ಯಂತ ದುಃಖಿತನಾದನು. ಹೀಗೆ ಬಾದಶಹನು ಬಹುದಿನ ದುಃಖಮಗ್ನನಾಗಿದ್ದರೂ, ಆತನ ಕಣ್ಣುಗಳೊಳಗಿಂದ ಮೊದಮೊದಲು ಒಂದು ಅಶ್ರುಬಿಂದುವೂ ಉದುರಲಿಲ್ಲ; ಆದರೆ ಮುಂದೆ ಬರಬರುತ್ತ ಬಾದಶಹನ ಈ ಅನಿವಾರ ದುಃಖವು ಹೊಟ್ಟೆಯಲ್ಲಿ ಹಿಡಿಸಲಾರದೆ ಹೊರಬಿದ್ದು, ಆವನು ಒಂದೇಸವನೆ ಕಣ್ಣೀರು ಸುರಿಸಹತ್ತಿದನು. ರಜಪೂತ ಆಸದಖಾನನು ಅಬುಲಫಜಲನ ಮರಣದ ಹೃದಯದ್ರಾವಕ ವರ್ತಮಾನವನ್ನು ಸಾದ್ಯಂತವಾಗಿ ತನ್ನ ಹೃದಯಭೇದಕ ಶೋಕವಿಹ್ವಲ ಭಾಷೆಯಿಂದ ಸವಿಸ್ತಾರವಾಗಿ ಹೇಳಲು, ಅದನ್ನು ಕೇಳಿ ಬಾದಶಹನು ತನಗಾಗುವ ಕಸಿವಿಸಿಯನ್ನು ತಾಳಲಾರದೆ ದುಃಖಾವೇಶದಲ್ಲಿ ಕೂಗಿ—"ಹಾಯ ! ಸೇಲೀಮಾ!! ಬಾದಶಹನಾಗುವ ನಿನ್ನ ಇಚ್ಛೆಯು ಇಷ್ಟು ಪ್ರಬಲವಾಗಿದ್ದರೆ, ಹೀಗೆ ನನ್ನ ಪ್ರೀಯ ಅಬುಲಫಜಲನ ಕೊಲೆಮಾಡದೆ ನೀನು ನಿನ್ನ ತಂದೆಯ ಕೊಲೆಯನ್ನು ಯಾಕೆ ಮಾಡಲಿಲ್ಲ? ಹಾಗೆ ಮಾಡಿದ್ದರೆ ನಿನ್ನ ಇಚ್ಛೆಯು ಬೇಗನೆ ಪೂರ್ಣವಾಗುತ್ತಿತ್ತು" ಎಂದು ನುಡಿದನು.

ಈ ಕ್ರೂರತನಕ್ಕಾಗಿ ಬಾದಶಹನು ಸೇಲೀಮನ ಮೇಲೆ ಬಹಳ ಸಿಟ್ಟಾದನು. ಈ ಸಿಟ್ಟಿನ ಪರಿಣಾಮವು ಬಹಳ ಭಯಂಕರವಾದೀತೆಂದು ತಿಳಿದು,

ಒಬ್ಬ ಉದಾತ್ತ ಹೃದಯದ ಸ್ತ್ರೀಯು ಆ ತಂದೆಮಕ್ಕಳ ನಡುವೆಯಾಗಿ ಅವರ ವಿತುಷ್ಟತೆಯನ್ನು ದೂರ ಮಾಡುವದಕ್ಕಾಗಿ ಬಂದಳು. ಆಕೆಯ ಹೆಸರು "ಸುಲ್ತಾನಾ ಸೇಲೀಮಾ ಬೇಗಮ" ಎಂಬದಾಗಿತ್ತು. ಈಕೆಯು ಅಕಬರ ಬಾದಶಹನ ಅತ್ಯಂತ ಸುಂದರಳಾದ ಪ್ರೀಯ ಬೇಗಮೆಯಾಗಿದ್ದಳು. ಸುಲತಾನ ಸೇಲೀಮನಿಗೆ ಮಾತೃವಿಯೋಗವಾದನಂತರ ಆತನು ಈಕೆಯನ್ನೇ ತಾಯಿಯೆಂದು ತಿಳಿದು ನಡೆದುಕೊಂಡದ್ದರಿಂದ, ಈಗ ಆ ಬೇಗಮೆಯು ಪುತ್ರ ಪ್ರೇಮದಿಂದ ಮಧ್ಯಸ್ತಿಕೆಯ ಕೆಲಸವನ್ನು ಮಾಡಿದಳು. "ಅಂಗಾಲಿಗೆ ಹೇಸಿಗೆಯಿಲ್ಲ, ಕರಳಿಗೆ ನಾಚಿಕೆಯಿಲ್ಲ" ಎಂಬಂತೆ ಅಕಬರಬಾದಶಹನು ಪುನಃ ಸೇಲೀಮನನ್ನು ಪ್ರೀತಿಸತೊಡಗಿದನು. ಅವರಿಬ್ಬರ ಆ ಪ್ರೇಮದ ವ್ಯವಹಾರವನ್ನು ನೋಡಿದರೆ, ಇನ್ನುಮೇಲೆ ಈ ತಂದೆ ಮಕ್ಕಳಲ್ಲಿ ಎಂದೂ ವಿತುಷ್ಟತೆಯುಂಟಾಗದೆಂದು ಯಾರಿಗಾದರೂ ತೋರುವಹಾಗಿತ್ತು; ಆದರೆ ಆಕಬರ ಬಾದಶಹನು ಅಂಥ ಸುದೈವಿಯಾಗಿದ್ದಿಲ್ಲ. ಯುದ್ಧಕಾರ್ಯದಲ್ಲಿ ತೊಡಗಿಹೋದರೆ ದುಷ್ಟ ಮಿತ್ರರ ತೆಕ್ಕೆಯೊಳಗಿಂದ ಸೇಲೀಮನು ಬಿಡುಗಡೆ ಹೊಂದಿಯಾನೆಂದು ತಿಳಿದು, ಅಕಬರನು ಪುನಃ ಮಗನನ್ನು ಉದೇಪುರದ ರಜಪೂತರ ಮೇಲೆ ಸಾಗಿ ಹೋಗಲು ಆಜ್ಞಾಪಿಸಿದನು. ಆದರೆ ಸುಖ-ವಿಲಾಸಮಗ್ನನಾದ ಸೇಲೀಮನು ಈಗೂ ಮೊದಲಿನಂತೆಯೇ ಬೇರೆ ಬೇರೆ ಬಗೆಯ ತೊಂದರೆಯ ಕಾರಣಗಳನ್ನು ಬಾದಶಹನ ಮುಂದೆ ಓದಿಕೊಳ್ಳ ಹತ್ತಿದನು; ಆದ್ದರಿಂದ ಬಾದಶಹನು ಪುನಃ ಅಲಹಾಬಾದಕ್ಕೆ ಹೋಗಲು ಆಜ್ಞಾಪಿಸಿದನು. ಸೇಲೀಮನು ಅಲಹಾಬಾದಕ್ಕೆ ಬಂದಬಳಿಕ ಪೂರ್ಣ ಸ್ವಾತಂತ್ರ್ಯದಿಂದ ನಡೆಯತೊಡಗಿದನು. ದುಷ್ಟರೂ, ಸ್ವಾರ್ಥಪರಾಯಣರೂ ಆದ ಮಿತ್ರರು ನಾಲ್ಕೂ ಕಡೆಯಿಂದ ಅವನನ್ನು ಸುತ್ತಿಕೊಂಡರು. ಮತ್ತೆ ಮದ್ಯ–ಅಫುಗಳ ಸೇವನವು ಮಿತಿಮೀರಿ ಆಗತೊಡಗಿತು. ದಿನದಿನಕ್ಕೆ ಸೇಲೀಮನು ಅಧಃಪತನವನ್ನು ಹೊಂದುತ್ತ ಹೊಂದುತ್ತ ಕೆಳಕೆಳಗೆ ಹೋಗತೊಡಗಿದನು. ಈ ಎಲ್ಲ ವರ್ತಮಾನವು ಗುಪ್ತಚಾರರ ಮುಖಾಂತರ ಪ್ರತಿದಿನ ಬಾದಶಹರ ಕಿವಿಗೆ ಮುಟ್ಟಿ, ಅವರು ಶೋಕವಿಹ್ವಲರಾಗಿ ಉಸುರ್ಗಳೆದು ಒಳಗೇ ಸಣ್ಣಾಗತೊಡಗಿದರು.

ಮಗನ ಈ ಅಧಃಪತನವನ್ನು ನೋಡಿ ಈತನನ್ನು ಹೀಗೆಯೇ ಬಿಟ್ಟರೆ

ಈತನು ಕೆಲಸಕ್ಕೆ ಬಾರನೆ ಹೋಗುವನೆಂದು ತಿಳಿದು, ಅಕಬರಬಾದಶಹನು ಅಂಜಿಕೆ ತೋರಿಸಿ ಮಗನನ್ನು ಹಾದಿಗೆ ತರುವದಕ್ಕಾಗಿ ಸೈನ್ಯದೊಡನೆ ಅಲಹಾಬಾದದಕಡೆಗೆ ಸಾಗಿದನು. ಆತನು ದೊಡ್ಡ ಸೈನ್ಯದೊಡನೆ ಯಮುನಾ ನದಿಯನ್ನು ದಾಟಿ ಸ್ವಲ್ಪ ದೂರ ಹೋಗುತ್ತಿರುವದರೊಳಗೆ, ತನ್ನ ತಾಯಿಯಾದ ಹಮೀದಾಬಾನುವು ಅತ್ಯಂತ ರೋಗಪೀಡಿತಳಾಗಿರುವಳೆಂಬ ಸುದ್ದಿಯು ಆತನಿಗೆ ಹತ್ತಿತು. ಅಕಬರನು ಕೇವಲ ಮಾತೃಭಕ್ತನಾಗಿದ್ದು, ತಾಯಿಯನ್ನು ಸಾಕ್ಷಾತ್ ದೇವಿಯೆಂದು ತಿಳಿದು ಆಕೆಯನ್ನು ಪೂಜಿಸುತ್ತಿದ್ದನು. ತನ್ನ ತಾಯಿಯು ಮರಣೋನ್ಮುಖಳಾಗಿರುವದನ್ನು ಕೇಳಿ ಖಿನ್ನನಾಗಿ ಜಡ ಮನಸ್ಸಿನಿಂದ ಆತನು ತಿರುಗಿ ಆಗ್ರಾ ಪಟ್ಟಣಕ್ಕೆ ಬಂದನು; ಆದರೆ ಎಷ್ಟು ಪ್ರಯತ್ನ ಮಾಡಿದರೂ ತಾಯಿಯನ್ನು ಬದುಕಿಸಿಕೊಳ್ಳುವದು ಆತನಿಂದಾಗಲಿಲ್ಲ. ತಾಯಿಯ ವಿಯೋಗದಿಂದ ಕಣ್ಣೀರು ಸುರಿಸುವ ಬಾಲಕನಂತೆ ಅಕಬರಬಾದಶಹನು ಶೋಕವಿಹ್ವಲನಾಗಿ, ಅಂತ್ಯಸಂಸ್ಕಾರಕ್ಕಾಗಿ ತಾಯಿಯ ಶವಹಾಕಿದ ಪೆಟ್ಟಿಗೆಯನ್ನು ಹೊತ್ತುಕೊಂಡು ಬರಿಗಾಲು ಬಸ್ಕ-ನೆತ್ತಿಯಿಂದ ತನ್ನ ತಂದೆಯಾದ ಹುಮಾಯೂನನ ಕಬರಸ್ಥಾನದ ಹಾದಿಯನ್ನು ಹಿಡಿದನು. ಅಸಂಖ್ಯ ಅಮೀರ ಉಮರಾವರು ಆತನಂತಹ ಉಡಿಗೆ ತೊಡಿಗೆಗಳಿಂದ ಆತನನ್ನು ಹಿಂಬಾಲಿಸಿ ನಡೆದಿದ್ದರು. ಇರುವೆಯಂತೆ ಅಗಣಿತ ಸೈನ್ಯವು ಆಗ್ರಾ ಪಟ್ಟಣದ ರಾಜಬೀದಿಯನ್ನು ಹಿಡಿದು ನಿಂತುಕೊಂಡು, ಆ ಮೃತ ಸಾಮ್ರಾಟ್ ಜನನಿಯನ್ನು ಸನ್ಮಾನಿಸುತ್ತಲಿದ್ದಿತು. ಬಾದಶಹನು ಮೃತದೇಹವನ್ನು ಸಮಾಧಿಸ್ಥವಾಗಿ ಮಾಡಿ ಆಗ್ರಾದ ಅರಮನೆಗೆ ಬಂದನು. ಆತನು ಯಾವತ್ತು ಸುಖವಿಲಾಸಗಳನ್ನೂ, ಮುತ್ತು ರತ್ನಗಳ ಹಾರಗಳನ್ನೂ, ಅಂಗಾಂಗಗಳಲ್ಲಿ ಶೋಭೆಯನ್ನುಂಟುಮಾಡುವ ಬೇರೆ ವಸ್ತು ವ್ಯವಹಾರಗಳನ್ನೂ ಬಿಟ್ಟು, ಶೋಕಮಯ ಹೃದಯದಿಂದ ದಿನಗಳನ್ನು ಕಳೆಯಹತ್ತಿದನು. ಮೊದಲೇ ಮಗನ ಉದ್ಧತತನದ ನಡಾವಳಿಯಿಂದ ಚಿಂತಾತುರನಾಗಿದ್ದ ಬಾದಶಹನಿಗೆ ಈ ಮಾತೃವಿಯೋಗ ದುಃಖವು ಅತ್ಯಂತ ದುಸ್ಸಹವಾಯಿತು. ಅತ್ತ ಸೇಲೀಮನಿಗೆ ತನ್ನ ಅಮ್ಮನ ಈ ಮರಣ ವಾರ್ತೆಯು ಹತ್ತಲು, ಆತನು ದುಃಖಿತನಾಗಿ ಹೃದಯ ಕರಗಿ ತಂದೆಯ ಮೇಲಿನ ಸಿಟ್ಟುಬಿಟ್ಟು ನೆಟ್ಟಗೆ ಆಗ್ರಾ ಪಟ್ಟಣಕ್ಕೆ ಬಂದು ತಂದೆಯ ಚರಣ

ಕ್ಕೆರಗಿ ಪುನಃ ತಂದೆಯು ಕ್ಷಮೆಬೇಡಿ ಅಮ್ಮನ ಮರಣಕ್ಕಾಗಿ ಕಣ್ಣೀರು ಸುರಿಸಿದನು. ಸೇಲೀಮನ ಈ ಅಶ್ರುಪ್ರವಾಹದಲ್ಲಿ ಬಾದಶಹನ ಸಿಟ್ಟು-ವೈರಾಗ್ಯ-ಔದಾಸೀನ್ಯಗಳೆಲ್ಲ ತೇಲಿಹೋಗಿ, ಈ ವಿಲಕ್ಷಣ ಯೋಗದಿಂದ ಪುನಃ ತಂದೆ-ಮಕ್ಕಳು ಕೂಡಿಕೊಂಡರು; ಆದರೂ ಬಾದಶಹನ ಹೃದಯಕ್ಕೆ ಮಗನ ಅಯೋಗ್ಯಾಚರಣೆಗಳಿಂದ ಪುನಃ ಪುನಃ ಆಗುತ್ತ ಬಂದಿದ್ದ ಆಘಾತಗಳಿಂದ ಅವನು ತೀರ ಜರ್ಜರನಾದನು.

ಅಕಬರಬಾದಶಹನು ಎಂಥ ದೊಡ್ಡ ಸಾರ್ವಭೌಮನಾದರೂ, ಆತನು ಸಾರ್ವಭೌಮರ ಸಾರ್ವಭೌಮನಾದ ಪರಮೇಶ್ವರನ ತಂತ್ರಕ್ಕೆ ಹೊರಗಾದವನಿದ್ದಿಲ್ಲ. ಸಂಸಾರ ಧರ್ಮದಂತೆ ಆ ಬಾದಶಹನ ಉತ್ಕರ್ಷವ ಹಾಗು ಸುಖದ ಕಾಲವು ಮುಗಿದಕೂಡಲೆ ಆತನ ಅಪಕರ್ಷದ ಹಾಗು ದುಃಖದ ಕಾಲಕ್ಕೆ ಆರಂಭವಾಗಿ, ಇಲ್ಲದ ಚಿಂತಾ-ಕ್ಲೇಶಗಳಿಂದ ಮುಪ್ಪಿನ ಕಾಲದಲ್ಲಿ ಆತನು ಕೊರಗಹತ್ತಿದನು. ಸಿಂಹಾಸನದ ಭಾವೀ ಅಧಿಕಾರಿಯಾದ ಮಗ ಸೇಲೀಮನು ಉದ್ಧತನಾದ ದುಃಖವೊಂದು, ತನ್ನ ತಂದೆಯು ಸಮಾನವೆಂದು ತಿಳಿದುಕೊಂಡಿದ್ದ ಪ್ರೀಯ ಮಿತ್ರ ಅಬುಲಫಜಲನ ಅಕಾಲದ ಕೊಲೆಯು ದುಃಖವೊಂದು, ದಾರುಣವಾದ ಮಾತೃವಿಯೋಗದ ದುಃಖವೊಂದು ಈ ಬಗೆಯು ಹಲವುಬಗೆಯು ದುಃಖಗಳಿಂದ ತಳಮಳಿಸುತ್ತಿರುವಾಗ, ಬಾದಶಹನ ಪ್ರೀಯ ಪುತ್ರನಾದ ದಾನಿಯಲನ ಮರಣವಾರ್ತೆಯ ದುಃಖವು ಬಾದಶಹನನ್ನು ಇರಿಯುಹತ್ತಿತು! ಈಗಿನ ಅಕಬರಬಾದಶಹನ ದುಃಖವನ್ನು ನೋಡಿ ಪಾಷಾಣ ಹೃದಯವೂ ಕರಗಬಹುದಾಗಿತ್ತು. ಮಕ್ಕಳಲ್ಲಿ ಮುರಾದನು ಹೋದನು, ದಾನಿಯಲನು ಹೋದನು, ಉಳಿದಿದ್ದ ಸೇಲೀಮನು ಉದ್ಧತನಾಗಿ ಯಾವಾಗಲೂ ತ್ರಾಸ ಕೊಡತೊಡಗಿದನು. ಆದರೂ ಎಲ್ಲ ಮಕ್ಕಳನ್ನು ಕಳಕೊಂಡಿದ್ದ ಬಾದಶಹನು ಆ ಕೃತಘ್ನ ಸೇಲೀಮನನ್ನೇ ಅಂತರಂಗದಲ್ಲಿ ಪ್ರೀತಿಸತೊಡಗಿದನು; ಆದ್ದರಿಂದ ಸಾಂಸಾರಿಕ ವ್ಯಾಮೋಹಗಳು ಬಹು ಬಲಿಷ್ಠವಾದವೆಂದು ಹೇಳಬೇಕಾಗುವದು!

ಹೀಗೆ ಹಲವುಬಗೆಯ ಚಿಂತೆಗಳಿಂದ ಹಣ್ಣಾಗಿದ್ದ ಬಾದಶಹನನ್ನು ತೀರ ನೆಲಪಟ್ಟು ಮಾಡಿದ್ದೊಂದು ಪ್ರಸಂಗವನ್ನು ವಾಚಕರಿಗೆ ಹೇಳಿ ಈ ಐತಿಹಾಸಿಕ ಸಂಗತಿಗಳನ್ನು ಮುಗಿಸಿ ಕಾದಂಬರಿಯ ಕಡೆಗೆ ಹೊರಳೋಣ.

ಪ್ರಸಂಗವೆಂದರೆ, ಸೇಲೀಮನಿಗೂ ಆತನ ಮಗ ಖುಸ್ರೂವಿಗೂ ಬದ್ಧ ದ್ವೇಷ ಉಂಟಾದದ್ದು. ರೋಗ ಪೀಡಿತನಾದ ಬಾದಶಹನು ತನ್ನ ಮನಸ್ಸು ರಮಿಸುವದಕ್ಕಾಗಿ ಹಲವು ಮನೋರಂಜಕ ಆಟನೋಟಗಳನ್ನು ಆಗಾಗ್ಗೆ ಮಾಡಿಸುತ್ತಿದ್ದನು. ಆನೆಗಳ, ಹುಲಿಗಳ, ಚಿರ್ತುಗಳ ಕಾದಾಟ ನೋಡುವದರಲ್ಲಿ ಬಾದಶಹನ ಪ್ರೀತಿ ಬಹಳ. ಬಹಳ ಹೇಳುವದೇನು? ಜೇಡ ಹುಳಗಳ ಕಾದಾಟ ನೋಡಿಯೂ ಬಾದಶಹನು ಆನಂದಪಡುತ್ತಿದ್ದನು. ಒಮ್ಮೆ ಆತನು ರಾಜಪುತ್ರರ ಆನೆಗಳ ಕಾದಾಟವನ್ನು ನೋಡಲಿಚ್ಛಿಸಿ ಅದರ ಸಿದ್ಧತೆಯನ್ನು ಮಾಡಲು ಆಜ್ಞಾಪಿಸಿದನು. ಕರ್ಮಧರ್ಮ ಸಂಯೋಗದಿಂದ ಈ ಕಾಲದಲ್ಲಿ ಖುಸ್ರುವು ಪ್ಯಾರೀ ಬಾನುವಿನೊಡನೆ ಆಗ್ರಾಕ್ಕೆ ಬಂದಿದ್ದನು; ಸೇಲೀಮನೂ ಆಗ್ರಾದಲ್ಲಿಯೇ ಇದ್ದನು. ದುರ್ದೈವದಿಂದ ಇವರಿಬ್ಬರ ಆನೆಗಳೇ ಕಾದಾಡಬೇಕೆಂದು ಬಾದಶಹನ ಅಪ್ಪಣೆಯಾಯಿತು. ಖುಸ್ರುವಿನ ಕಾದಾಟದ ಆನೆಯ ಹೆಸರು "ಅಪರೂಪ" ಎಂಬದಾಗಿತ್ತು. ಇತಿಹಾಸಕಾರರು ಆ ಆನೆಯ ಹೆಸರು "ಚಂಚಲ" ಎಂದು ಇತ್ತೀಂತಲೂ ಬರೆದಿರುವರು. ಅದರಂತೆ ಸೇಲೀಮನ ಪರಾಕ್ರಮಿಯಾದ ಆನೆಯ ಹೆಸರು "ಜಿರಾನಬಾರ" ಎಂಬದಾಗಿತ್ತು. ಬಾದಶಹನ ಅಪ್ಪಣೆಯಂತೆ ಇವೆರಡೂ ಆನೆಗಳನ್ನು ಕಾದಾಡಲು ಸಜ್ಜುಮಾಡಿದರು. ಈ ಆನೆಗಳ ಕಾದಾಟವು ಬಹು ಭಯಂಕರವಾದದ್ದು. ಬಲಿಷ್ಠ ಆನೆಯು ತನ್ನ ಶತ್ರುವನ್ನು ಸಂಹರಿಸದೆ ಇರುತ್ತಿದ್ದಿಲ್ಲ. ಆನೆಗಳು ಕಾದಾಡುತ್ತಿರುವಾಗ ಯಾವದೊಂದು ಆನೆಯು ಸೋತರೆ, ಕೂಡಲೆ ಆ ಆನೆಗಳ ಕಾದಾಟವನ್ನು ನಿಲ್ಲಿಸುವದಕ್ಕಾಗಿ ಬೇರೊಂದು ಮೂರನೆಯ ಆನೆಯನ್ನು ಸಿದ್ಧಮಾಡಿ ಇಟ್ಟಿರುವರು. ಅದಕ್ಕೆ "ತವಂಚಾ" ಎಂಬ ಹೆಸರು. ಆ ಮಧ್ಯಸ್ಥ ಆನೆಯು ಆ ಎರಡೂ ಆನೆಗಳ ನಡುವೆಯಾಗಿ ಕಾದಾಟವನ್ನು ನಿಲ್ಲಿಸುವದು. ಈ ಯಾವತ್ತೂ ಸಮರ-ಕುಂಜರಗಳು ಅತ್ಯಂತ ಸುಶಿಕ್ಷಿತವಾಗಿದ್ದು, ಅವುಗಳ ಬೆಲೆಯಾದರೂ ಬಹಳ ಇರುತ್ತಿತ್ತು. ಬಾದಶಹನು ಯಾವತ್ತು ಪರಿವಾರದೊಡನೆ ಸಿದ್ಧಮಾಡಿದ್ದ ರಣರಂಗದಲ್ಲಿಯ ಆಸನಗಳ ಮೇಲೆ ಕುಳಿತಿರುವಾಗ ಇಬ್ಬರು ರಾಜಪುತ್ರರ ಆನೆಗಳ ಕಾದಾಟಕ್ಕೆ ಆರಂಭವಾಯಿತು. ಆ ಸೊಕ್ಕಿದ ಆನೆಗಳು ರಭಸದಿಂದ ಕಾದುತ್ತಿರುವಾಗ ಸೇಲೀಮನ ಆನೆಯು ಖುಸ್ರುವಿನ ಆನೆಯನ್ನು ಹಣ್ಣಿಗೆ ತಂದು ಸೋಲಿಸುತ್ತಿರಲು,

ಬಾದಶಹನ ಅಪ್ಪಣೆಯಿಂದ ಮಧ್ಯಸ್ಥ ಆನೆಯನ್ನು ಕಾದಾಟ ನಿಲ್ಲಿಸುವದ ಕ್ಕಾಗಿ ಬಿಟ್ಟರು. ಆಗ ಸೇಲೀಮನ ಕಡೆಯವರು ಆ ಮಧ್ಯಸ್ಥ ಆನೆಯನ್ನು ಕಲ್ಲು ಒಗೆದು ಹಿಂದಕ್ಕಟ್ಟಹತ್ತಿದರು. ಇದನ್ನು ನೋಡಿ ಖುಸ್ರುವು ಅಭಿಮಾನ ದಿಂದ ಸಿಟ್ಟಿಗೆದ್ದು, ತನ್ನ ತಂದೆಯ ಹಂಗು ಇಡದೆ ಬಾಯಿಗೆ ಬಂದಂತೆ ಮಾತಾಡತೊಡಗಿದನು. ಹೀಗೆ ತಂದೆಮಕ್ಕಳ ನಡುವೆ ವಾದಿಸಾಟವಾಗಿ ಉಭಯರ ಮನಸ್ಸು ಕಲುಷಿತವಾದದ್ದು ಬಾದಶಹನ ದುಃಖಕ್ಕೆ ಕಾರಣ ವಾಯಿತು. ಮನೋರಂಜನಕ್ಕಾಗಿ ಹೂಡಿದ ಆಟದಿಂದ ಮನಸ್ತಾಪವಾದದ್ದ ಕ್ಕಾಗಿ ಬಾದಶಹನು ವಿಷಾದಪಟ್ಟು ಯುದ್ಧಭೂಮಿಯಿಂದ ಎದ್ದು ಹೋಗಿ ಬಿಟ್ಟನು. ಕೂಡಿದ ಜನರಲ್ಲಿ ತನ್ನ ಮಗ ಖುಸ್ರುವು ತನ್ನ ಅಪಮಾನ ಮಾಡಿದ್ದಕ್ಕಾಗಿ ಸೇಲೀಮನು ಕ್ಷುಬ್ಧನಾಗಿ ಮಗನನ್ನು ದ್ವೇಷಿಸಹತ್ತಿದನು. ಈ ಆನೆಯ ಕಾದಾಟದ ಅಲ್ಪ ಕಾರಣವೇ ಅಕಬರಬಾದಶಹನನ್ನು ಹಾಸಿಗೆ ಹಿಡಿಸಿತು. ಹೀಗೆ ಒಮ್ಮೆ ಹಾಸಿಗೆ ಹಿಡಿದ ಬಾದಶಹನು ತಿರುಗಿ ಏಳಲೇ ಇಲ್ಲ. ಆನೆಯ ಕಾದಾಟದ ಪರಿಣಾಮವೇ ಹೀಗೆ ಗೃಹಕಲಹವನ್ನು ಹೆಚ್ಚಿಸಲಿಕ್ಕೆ ಕಾರಣವಾಯಿತು. ಬಲವಿಲ್ಲದಾಗ ನೆಲವೆದ್ದು ಬಡಿಯಿತೆಂಬ ಮಾತು ಸುಳ್ಳಲ್ಲ. ಬಾದಶಹನಿಗೆ ಬಲವಿಲ್ಲದಾಗಲು, ಹೀಗೆ ಒಂದಿಲ್ಲೊಂದು ಕಾರಣಗಳು ಆತನ ಶಾಂತಿಯ ಭಂಗಕ್ಕೆ ಕಾರಣವಾದವು. ಅಂದಬಳಿಕ ಆ ಶಾಂತಿಹೀನನಿಗೆ ಸುಖವೆಲ್ಲಿಂದ ದೊರೆಯಬೇಕು ?



೧೫ನೆಯ ಪ್ರಕರಣ

# ಕೆಟ್ಟ ಚಟದ ಸುಂಕ

ಮಾನಸಿಂಗನ ಉಪದೇಶದಂತೆ ಚಾರಣಿಯ ವೇಷದಿಂದ ಮಂದಾಕಿನಿಯು ಪ್ಯಾರೀಬಾನುವಿನ ಹೃದಯದಲ್ಲಿ ಆಸುರೀ ಮಹತ್ವಾಕಾಂಕ್ಷೆಯ ವಿಷವನ್ನು ಸುರವುವ ತನ್ನ ಕಾರ್ಯವನ್ನು ಮಾಡಿದಬಳಿಕ ಆಕೆಯು ಅಂಬರ ರಾಜಧಾನಿಗೆ ಬಂದಳು. ಆಕೆಯ ಗಂಡನಾದ ದುರ್ಜಯಸಿಂಹನನ್ನು ಬಂಧಮುಕ್ತಮಾಡುವ ವ್ಯವಸ್ಥೆಯನ್ನು ಮಾನಸಿಂಹನು ಇನ್ನೂ ಮಾಡಿದ್ದಿಲ್ಲ; ಆದರೆ ಅಂಬರಾಧೀಶ್ವರನು ದುರ್ಜಯಸಿಂಹನಿಗೆ ಕಾರಾಗೃಹವಾಸದ ಯಾವ ಬಗೆಯ ಕಷ್ಟವೂ ತಗಲದಂತೆ ವ್ಯವಸ್ಥೆ ಮಾಡಿದ್ದನಲ್ಲದೆ, ಮಂದಾಕಿನಿಗೆ ಗಂಡನನ್ನು ಕಾಣಲಿಕ್ಕೆ ಬೇಕಾದಾಗ ಹೋಗಲು ಮುಕ್ತದ್ವಾರ ಮಾಡಿದ್ದನು. ಅಂಬರ ರಾಜಧಾನಿಯಿಂದ ರತನಗಡವು ಎರಡು ಹರದಾರಿಯಿದ್ದದ್ದರಿಂದ, ದಿನಾಲು ಮಂದಾಕಿನಿಯು ಅಲ್ಲಿಗೆ ಹೊಗದಿದ್ದರೂ, ಆಗಾಗ್ಗೆ ಪತಿಯ ದರ್ಶನಕ್ಕಾಗಿ ಹೋಗುತ್ತಿದ್ದಳು. ಮಾನಸಿಂಹನು ಪತ್ತೇಪುರ ಸಿಕ್ರಿಗೆ ಹೋದಬಳಿಕ ಒಂದು ದಿನ ಮಂದಾಕಿನಿಯು ರತನಗಡಕ್ಕೆ ಹೋಗಲು, ದುರ್ಜಯಸಿಂಹನು ಕಾರಾಗೃಹದಲ್ಲಿದ್ದಿಲ್ಲ. ಅದನ್ನು ನೋಡಿ ಮಂದಾಕಿನಿಗೆ ಆಶ್ಚರ್ಯವಾಯಿತು. ಅತ್ತಿತ್ತ ಆಕೆಯು ಪತಿಯ ವರ್ತಮಾನವನ್ನು ಕೇಳಲು, ಆತನು ಎಲ್ಲಿಯೋ ಓಡಿಹೋದನೆಂದು ಜನರು ಆಕೆಗೆ ಹೇಳಿದರು; ಕಾರಾಗೃಹದ ಕಾವಲುಗಾರರೂ ಆಕೆಗೆ ಹೀಗೆಯೇ ಹೇಳಿದರು; ಆದರೆ ಸ್ವಾಭಿಮಾನಿಯಾದ ದುರ್ಜಯಸಿಂಹನು ಹೀಗೆ ಕಳ್ಳನಂತೆ ಓಡಿಹೋಗಿರಬಹುದೆಂಬದು ಮಂದಾಕಿನಿಗೆ ವಿಶ್ವಸನೀಯವಾಗಿ ತೋರಲೊಲ್ಲದು. ಹಿಂದಕ್ಕೆ ತಾನು ಮುದ್ರಿಕೆಯನ್ನು ಒಯ್ದು ಓಡಿಸಬೇಕೆಂದು ಯತ್ನಿಸಿದಾಗ ತನ್ನ ಪತಿಯ ಸ್ವಾಭಿಮಾನದ ನಿರ್ಧಾರವನ್ನು ಆಕೆಯು ಚನ್ನಾಗಿ ಅರಿತಿದ್ದಳು; ಆದ್ದರಿಂದ ಆಕೆಯು ತನ್ನ ಪತಿಯು ಅದೃಶ್ಯನಾದ ಬಗ್ಗೆ ಬಗೆಬಗೆಯ ದುರಾಲೋಚನೆಗಳನ್ನು ಮಾಡತೊಡಗಿದಳು. ಆದರೆ ಅವುಗಳಲ್ಲಿ ಒಂದೂ ಸಮರ್ಪಕವಾಗಲೊಲ್ಲವು. ಆ ದುರಾಲೋಚನೆಗಳ ಕಟ್ಟಕಡೆಯಲ್ಲಿ ಆಕೆಯು ತನ್ನ ಪತಿಯು ಮರಣವನ್ನೇ ಹೊಂದಿರುವನೆಂದು ನಿಶ್ಚಯಿಸಿದಳು! ಆದರೆ ಯಾರಿಂದ ತನ್ನ ಪತಿಯು ಮರಣಹೊಂದಿರ

ಬಹುವೆಂಬದರ ನಿಶ್ಚಯುವಾಗಲಿಕ್ಕೆ ಆಕೆಗೆ ಮಾರ್ಗವಿದ್ದಿಲ್ಲ. ಆಕೆಯ ಸಂಶಯುವು ಸಂಪೂರ್ಣವಾಗಿ ಮಾನಸಿಂಗನ ಮೇಲೆ ಇತ್ತು; ಯಾಕಂದರೆ, ಖುಸ್ರುವು ಸೇಲೀಮುನನ್ನು ಕೊಲ್ಲಿಸಹೋದ ಸಂಗತಿಯನ್ನು ಸೇಲೀಮುನ ಮುಂದೆ ಸಪ್ರಮಾಣವಾಗಿ ಸಿದ್ಧಮಾಡಿಕೊಡುವದಕ್ಕೆ ದುರ್ಜಯುಸಿಂಹ ನೊಬ್ಬನೇ ಸಮರ್ಥನೆಂಬದು ಮಾನಸಿಂಹನಿಗೆ ಗೊತ್ತಿತ್ತು. ಆ ಸಂಬಂಧದ ಯಾವತ್ತು ಸಂಗತಿಗಳ ಸಾಕ್ಷಿಗಳು ದುರ್ಜಯುಸಿಂಹನ ಬಳಿಯಲ್ಲಿದ್ದವು; ಆದ್ದರಿಂದ ದುರ್ಜಯುಸಿಂಹನೊಬ್ಬನನ್ನು ಈ ಲೋಕದೊಳಗಿಂದ ಇಲ್ಲದಂತೆ ಮಾಡಿಬಿಟ್ಟರೆ,ಒಂದು ಅರಿಷ್ಟವೇ ಹೋದಹಾಗಾಗುವದೆಂದು ಮಾನಸಿಂಹನು ಭಾವಿಸಬಹುದಾಗಿತ್ತು; ಇದಲ್ಲದೆ ಒಮ್ಮೆ ಮಾನಸಿಂಗನು ಮಂದಾಕಿನಿಗೆ "ನಿನ್ನನ್ನು ವಿಧವೆಯಾಗಮಾಡುವೆನೆಂ"ಬರ್ಥದಿಂದ ಅಂಜಿಕೆ ಹಾಕಿದ್ದನು. ಆದರೆ ರಜಪೂತನಾದ ಮಾನಸಿಂಹನಂಥ ಘನವಂತನು ವಚನಭ್ರಷ್ಟನಾಗು ವದೂ ಮಂದಾಕಿನಿಗೆ ಒಮ್ಮೆಲೆ ಶಕ್ಯವಾಗಿ ತೋರಲೊಲ್ಲದು. ಹೀಗೆ ಆಕೆಯು ತನ್ನ ಗಂಡನ ಮರಣದ ವಿಷಯುವಾಗಿ ಸಂಶಯುಗ್ರಸ್ತಳಾಗಿ ವಿಚಾರ ಮಾಡು ತ್ತಿರುವಾಗ, ಆಕೆಯ ಮನಸ್ಸು ಅತ್ಯಂತ ಚಂಚಲವಾಯಿತು. ನಿರಾಶಯು ದುಃಖದಿಂದ ಆಕೆಯ ಕಣ್ಣುಗಳು ನೀರಿನಿಂದ ತುಂಬಿದವು. ಆಕೆಯು ದುಃಖ ವೇಗವನ್ನು ತಾಳಲಾರದೆ ಗಟ್ಟಿಯಾಗಿ— "ದುರ್ಜಯುಸಿಂಹ, ನೀವು ಎಲ್ಲಿರು ವಿರಿ? ನಿಜವಾಗಿಯೇ ನಿಮಗೆ ವಿಷಪಾನದಿಂದ ಮರಣವು ಪ್ರಾಪ್ತವಾಯಿತೇ? ಹಾಗೆ ಮರಣವು ಪ್ರಾಪ್ತವಾಗಿದ್ದರೆ, ನಿಮ್ಮ ಶರೀರರಹಿತವಾದ ಆತ್ಮವು ನಿಮಗೆ ಮರಣವನ್ನೊದಗಿಸಿಕೊಟ್ಟವನ ಹೆಸರನ್ನು ಹೇಳಬಹುದೇ?" ಎಂದು ಕೂಗಿದಳು. ಅದೇ ಕಾಲಕ್ಕೆ ಆಕೆಯ ಹಿಂದಿನಿಂದ ಯಾರೋ— "ಅಶರೀರಿ ಯಾದ ಆತ್ಮವು ಹೇಳಲಿ ಹೇಳದಿರಲಿ; ಈ ಶರೀರಿಯಾದ ಆತ್ಮನು ದುರ್ಜಯು ಸಿಂಹನನ್ನು ಕೊಂದವನ ಹೆಸರು ಹೇಳಲು ಸಿದ್ಧನಾಗಿರುವನು" ಎಂದು ನುಡಿದರು.

ಈಗ ಮಂದಾಕಿನಿಯು ಜನಸಂಚಾರವಿಲ್ಲದ ದುರ್ಗದ ಒಂದು ನಿಟ್ಟಿ ನಲ್ಲಿ ನಿಂತಿದ್ದಳು. ಆಗ ಹೊತ್ತು ಮುಣಗಲಿಕ್ಕೆ ಒಂದು ತಾಸಿನ ಅವಕಾಶ ವಿರಬಹುದು. ಆಗ ಮೋಡವಾಗಿ ಮಳೆಬರುವಂತೆ ಆದದ್ದರಿಂದ ಹೊತ್ತು ಇದ್ದೂ ಹೊತ್ತು ಮುಣುಗಿದಹಾಗೆ ತೋರುತ್ತಿತ್ತು. ಇಂಥ ಎಡಹೊತ್ತಿನಲ್ಲಿ

ಅಕಸ್ಮಾತ್ ಯಾರೋ ಹೀಗೆ ಹೇಳಿದ್ದನ್ನು ಕೇಳಿ ಮಂದಾಕಿನಿಯು ಬೆಚ್ಚಿ ಬಿದ್ದು ಎಚ್ಚತ್ತಳು. ಆಕೆಯು ಕಣ್ಣು ಒರಿಸಿಕೊಳ್ಳುತ್ತ ನಾಲ್ಕೂಕಡೆಗೆ ನೋಡಲು, ಮರೆಗೆ ನಿಂತಿದ್ದ ಲಜಪತಸಿಂಗನು ಆಕೆಯಮುಂದೆ ನಿಂತು ಕೊಂಡನು. ಕೂಡಲೆ ಕೃಷ್ಣಸರ್ಪವನ್ನು ನೋಡಿ ಬೆದರಿದವರಂತೆ ಮಂದಾ ಕಿನಿಯು ಬೆದರಿ ದೂರ ಸರಿದು ನಿಂತಳು. ಆಕೆಯು ಅತ್ಯಂತ ಕ್ರುದ್ಧಳಾಗಿ ಲಜಪತನನ್ನು ಕುರಿತು—

ಮಂದಾಕಿನಿ— ಲಜಪತ, ನಾನಾಡಿದ ಶಬ್ದಗಳನ್ನು ನೀನು ಕೇಳಿ ದೆಯೋ ?

ಲಜಪತ— ಹೌದು, ಕೇಳಿದೆನು. ಕೆಲವೊಂದು ಕಾರಣದಿಂದ ದುರ್ಗದ ಹೊರಗೆ ಹೋಗಬೇಕೆಂದು ಹೊರಟಿದ್ದ ನಾನು, ಇಂಥ ನಿರ್ಜನ ಪ್ರದೇಶದಲ್ಲಿ ನೀನು ನಿಂತಿರುವದನ್ನು ನೋಡಿ ಈ ಗೋಡೆಯಮರೆಗೆ ನಿಂತುಕೊಂಡಿರಲು, ನನ್ನ ಇಚ್ಛೆಯಿಲ್ಲದಿದ್ದರೂ ನೀನಾಡಿದ ಶಬ್ದಗಳು ನನ್ನ ಕಿವಿಗೆ ಬಿದ್ದವು. ಪ್ರಿಯ ಮಂದಾಕಿನೀ, ನಿನ್ನ ಪತಿಯ ಮರಣದ ವಿಷಯವಾಗಿ ಸಂಶಯ ಗ್ರಸ್ತಳಾಗಿರುವ ನಿನ್ನ ಸಂಶಯವನ್ನು ದೂರ ಮಾಡುವದಕ್ಕಾಗಿ ದೇವರೇ ನನ್ನನ್ನು ಇಲ್ಲಿಗೆ ಕರತಂದಿರುವನೆಂದು ತಿಳಿ. ನಾನು ಇಲ್ಲಿಂದ ನಾಳೆಯಾದರೂ ಈ ಸುದ್ದಿಯನ್ನು ನಿನಗೆ ತಿಳಿಸಲೇಬೇಕಾಗಿರುವಾಗ, ನನಗೆ ಅನಾಯಾಸ ವಾಗಿ ಇಂದು ಅದನ್ನು ತಿಳಿಸುವ ಪ್ರಸಂಗವೊದಗಿದ್ದೊಂದು ಅನುಕೂಲವೇ ಆಯಿತೆಂದು ತಿಳಿಯಬೇಕಾಗುವದು.

ಮಂದಾಕಿನಿ— ಏನು, ನನ್ನ ಪತಿಯು ಮರಣಹೊಂದಿದ್ದೇ ನಿಜವೋ? ನನ್ನ ಪ್ರಿಯ ಪತಿಯ ಮರಣಕ್ಕೆ ಕಾರಣನಾದ ನೀಚನ ಹೆಸರನ್ನು ನೀನು ಹೇಳುವೆಯಾ ?

ಲಜಪತ—ಪ್ರಿಯ ಮಂದಾಕಿನೀ, ನಿನ್ನ ಪತಿಯು ಮರಣ ಹೊಂದಿದ್ದೇ ನಿಜವು; ಆತನನ್ನು ಕೊಂದವನ ಹೆಸರನ್ನು ನಾನು ಹೇಳಬಲ್ಲೆನು; ಆದರೆ ನೀನು ಹೆಸರು ಕೇಳಿ ಮಾಡುವದೇನು ? ನಿನ್ನ ಪತಿಯನ್ನು ಕೊಂದವನು ಮಹಾಬಲಿಷ್ಠನು. ಆತನ ಕೂದಲು ಕೊಂಕಿಸುವದು ಕೂಡ ನಿನ್ನಿಂದ ಆಗದು; ಅಂದಬಳಿಕ ಹೆಸರು ಕೇಳಲು ಇಷ್ಟು ಏಕೆ ಆತುರಪಡುವೆ ?

ಮಂದಾಕಿನಿ— ಲಜಪತ, ತಿಳಿಯಿತು, ನನ್ನ ಪತಿಯನ್ನು ಕೊಂದವರು

ಯಾರೆಂಬದು ನನ್ನ ಮನಸ್ಸಿಗೆ ಹೊಳೆಯಿತು. ಆದರೆ ಆ ದುಷ್ಟನು ಎಷ್ಟು ಬಲಿಷ್ಠನಿದ್ದರೂ ಸತಿಯು ಹಾಕಿದ ದುಃಖದ ಉಸುರಿನ ಬೆಂಕಿಯಿಂದ ಆತನ ನಾಶವು ತಪ್ಪದೆ ಆಗುವದೆಂಬದನ್ನು ನೀನು ನಿಶ್ಚಯವಾಗಿ ನಂಬು.

ಲಜಪತ— ನಿನ್ನ ಗಂಡನ ಕೊಲೆ ಮಾಡಿದವನು ಯಾರೆಂದು ತಿಳಿದಿರುವೆ ಮಂದಾಕಿನೀ? ಸುಳ್ಳೇ ಒಬ್ಬರಿಗೆ ದೋಷವಿಟ್ಟು ದ್ವೇಷಿಸುವದು ಯೋಗ್ಯವಲ್ಲ. ಹೇಳು, ನಿನ್ನ ಗಂಡನನ್ನು ಕೊಂದವನ ಹೆಸರನ್ನು ನನ್ನ ಮುಂದೆ ಸ್ಪಷ್ಟವಾಗಿ ಹೇಳು.

ಮಂದಾಕಿನಿ— ಸ್ಪಷ್ಟ ಹೇಳುವದೇನು? ಮಾನಸಿಂಹನೇ ನನ್ನ ಗಂಡನ ಮರಣಕ್ಕೆ ಕಾರಣವಾಗಿರುವನು.

ಲಜಪತ— ತಪ್ಪಿದೆ, ಮಂದಾಕಿನೀ, ಮಾನಸಿಂಹನ ಅಪ್ಪಣೆಯಿಂದ ದುರ್ಜಯನ ಕೊಲೆಯಾಗಿರುವದಿಲ್ಲ.

ಮಂದಾಕಿನಿ— ಹಾಗಾದರೆ ಆತನ ಹೊರತು ಇಂಥ ದುಷ್ಟನು ಬೇರೆ ಯಾವನಿರುವನು?

ಲಜಪತ— ಬೇರೆ ಯಾವನೇಕೆ? ಶಹಾಜಾದಾ ಖುಸರುವನ್ನು ನೀನು ಮರೆತೆಯಾ?

ಮಂದಾಕಿನಿ— ಆದರೆ ಮಾನಸಿಂಹನ ಸೆರೆಯಾಳಿನಮೇಲೆ ಖುಸ್ರುವಿನ ಅಪ್ಪಣೆ ಹೇಗೆ ನಡೆಯುವದು?

ಲಜಪತ— ಈ ಕಾಲದಲ್ಲಿ ಶಹಾಜಾದಾ ಖುಸ್ರುವು ಮಾನಸಿಂಹನ ಸರ್ವಸ್ವವಾಗಿರುವನು. ಆತನು ಮಾಡಿದ ನ್ಯಾಯಾನ್ಯಾಯಗಳನ್ನು ಮುಚ್ಚಿ ಇಡಲಿಕ್ಕೆ ಮಾನಸಿಂಹನು ಹಿಂದೆಮುಂದೆ ನೋಡುವದಿಲ್ಲ.

ಮಂದಾಕಿನಿ— ಲಜಪತ, ನನ್ನ ತಿಳುವಳಿಕೆಯು ನಿಜವಿರದಿದ್ದರೂ, ನಿನ್ನ ಮಾತಿನ ಸತ್ಯತೆಗಾಗಿ ನನಗೆ ಆಧಾರವು ಬೇಕು. ನಿರಾಧಾರವಾಗಿ ನಾನು ಯಾರಮೇಲೆಯೂ ನಿಶ್ಚಿತವಾದ ಆರೋಪವನ್ನು ಹೊರಿಸಿ ಸೇಡು ತೀರಿಸಿಕೊಳ್ಳಲಾರೆನು.

ಲಜಪತ— ಮಂದಾಕಿನಿ, ನೀನು ಸೇಡುತೀರಿಸಿಕೊಳ್ಳು, ಏನಾದರೂ ಮಾಡು. ನಾನು ಇದ್ದ ಸಂಗತಿಯನ್ನು ಹೇಳುವೆನು ಕೇಳು. ನನ್ನ ಹಿಂದಿನ ಅಪರಾಧಕ್ಕಾಗಿ ಪಶ್ಚಾತ್ತಾಪಪಟ್ಟು ನಿನ್ನ ಗಂಡನಾದ ದುರ್ಜಯಸಿಂಗನಿಗೆ

ಕಾಲುಬಿದ್ದು ಕ್ಷಮೆ ಬೇಡಲು, ನಮ್ಮಿಬ್ಬರಲ್ಲಿ ಅಕೃತ್ರಿಮ ಪ್ರೇಮವುಂಟಾಯಿತು. ಪ್ರಿಯ ಮಂದಾಕಿನೀ, ಇತ್ತಿತ್ತ ನಾವಿಬ್ಬರೂ ಅಕೃತ್ರಿಮ ಸ್ನೇಹಿತರಾಗಿ ನಡೆಯುತ್ತಿದ್ದದ್ದು ನಿನಗೆ ಗೊತ್ತಿಲ್ಲದ್ದಕ್ಕಾಗಿ ನನಗೆ ಬಹಳ ದುಃಖವಾಗುತ್ತದೆ. ನಮ್ಮಿಬ್ಬರಲ್ಲಿ ಸ್ನೇಹಸಂಬಂಧವು ಬೆಳೆದು ಬಹಳ ದಿವಸಗಳೂ ಆಗಿಲ್ಲ. ನೀನು ಇಲ್ಲಿಗೆ ಬಾರದಿರುವ ತಿಂಗಳೊಪ್ಪತ್ತಿನ ಅವಧಿಯಲ್ಲಿಯೇ ನಾವಿಬ್ಬರು ಜೀವದ ಗೆಳೆಯರಾದೆವು. ಮಂದಾಕಿನೀ, ಬಹಳ ಮಾತುಗಳೇಕೆ? ನೀನು ಇಲ್ಲಿ ಸ್ವಲ್ಪ ಹೊತ್ತು ನಿಂತುಕೊಳ್ಳು. ಈಗ ಹೋಗಿ ದುರ್ಜಯನು ಮರಣಕಾಲದಲ್ಲಿ ನನಗೆ ಕೊಟ್ಟಿರುವದೊಂದು ಗುರುತನ್ನು ನಿನಗೆ ತಂದುಕೊಡುವೆನು.

ಮಂದಾಕಿನಿಯು ಏನೂ ಉತ್ತರಕೊಡದೆ ಆಶ್ಚರ್ಯದಿಂದ ನೋಡುತ್ತಿರಲು, ಲಜಪತನು ತಟ್ಟನೆ ಅಲ್ಲಿಂದ ಹೊರಟು ಓಡುತ್ತ ತನ್ನ ಕೋಣೆಗೆ ಹೋಗಿ ದುರ್ಜಯಸಿಂಹನ ಮರಣದ ಚಿಹ್ನವನ್ನು ತಕ್ಕೊಂಡು ಮಂದಾಕಿನಿಯು ನಿಂತಲ್ಲಿಗೆ ಬಂದು ಆಕೆಯ ಕೈಯಲ್ಲಿ ಅದನ್ನು ಕೊಟ್ಟು— "ನೋಡು, ಈ ಲಕಲಕಿಸುವ ಮುದ್ರಿಕೆಯು ಯಾರದೆಂಬದನ್ನು ಗುರುತಿಸು" ಎಂದು ಹೇಳಿದನು. ಮಂದಾಕಿನಿಯು ಕೂಡಲೆ ಆ ಉಂಗುರವನ್ನು ಗುರುತಿಸಿದಳು. ತಾನು ವಿವಾಹ ಕಾಲದಲ್ಲಿ ಪ್ರೇಮದ ಚಿಹ್ನವೆಂದು ತನ್ನ ಪತಿಗೆ ಅದನ್ನು ಅರ್ಪಿಸಿದ್ದಳು. ಸಿಸೋದೀ ರಜಪೂತರ ಪವಿತ್ರ ಕುಲದೇವತೆಯಾದ ಏಕ-ಲಿಂಗಜಿಯ ಚಿಹ್ನವು ಆ ಉಂಗುರದಮೇಲೆ ಕೊರೆದಿತ್ತು. ವೈವಾಹಿಕ ಮಂತ್ರಗಳಿಂದ ಇದು ಪವಿತ್ರವಾಗಿರುವದೆಂಬ ನಂಬಿಗೆಯಿರುವದರಿಂದ, ದುರ್ಜಯಸಿಂಹನು ಯುದ್ಧಕ್ಕೆ ಹೋಗುವಾಗ ಅದನ್ನು ಕೈಯಲ್ಲಿ ಇಟ್ಟುಕೊಂಡು ಹೋಗುತ್ತಿದ್ದನು. ಆತನ ಈ ಸದ್ಭಾವದಂತೆ ಆತನಿಗೆ ಯುದ್ಧದಲ್ಲಿ ಜಯವಾಗುತ್ತಲೇ ಬಂದದ್ದರಿಂದ, ಆತನು ಆ ಉಂಗುರವನ್ನು ಪ್ರಾಣಕ್ಕಿಂತ ಹೆಚ್ಚೆಂದು ಕಾಯುತ್ತ ಬಂದಿದ್ದನು. ಮಂದಾಕಿನಿಯು ಆ ಉಂಗುರವನ್ನು ಅತ್ತಿತ್ತ ಹೊರಳಿಸಿ ನೋಡಿ ಅದನ್ನು ಭಕ್ತಿಯಿಂದ ಚುಂಬಿಸಿ— "ನಾಥ, ಹೃದಯೇಶ್ವರ, ಇಂದು ನನಗೆ ನಿಮ್ಮ ಮರಣದ ಗುರುತು ಸಿಕ್ಕಿತು. ನೀವು ದುಷ್ಟರ ನೀಚ ಸ್ವಾರ್ಥದ ವ್ಯವಹಾರದ ಬಲೆಯಲ್ಲಿ ಸಿಕ್ಕು ಸ್ವರ್ಗದ ಹಾದಿಯನ್ನು ಹಿಡಿದಿರಿ. ನೀವು ಹಿಡಿದ ಹಾದಿಯು ನನಗೆ ಗೊತ್ತಿರುವದು;

ಆ ಹಾದಿಯನ್ನು ಹಿಡಿದು ನಿಮ್ಮ ಬಳಿಗೆ ಬರಲಿಕ್ಕೆ ನಾನು ಸಿದ್ಧಳೂ ಇರುವೆನು; ಆದರೆ ನನ್ನ ಕಣ್ಣುಗಳಿಂದ ಅಶ್ರುಗಳನ್ನು ಧಾರೆಯಿಟ್ಟು ಸುರಿಸಿದವನ ಕಣ್ಣುಗಳಿಂದ ರಕ್ತವು ಧಾರೆಯಿಟ್ಟು ಸುರಿಯುವದನ್ನು ನೋಡಿದ ಹೊರತು ನಿಮ್ಮ ಬಳಿಗೆ ಬರಲಿಕ್ಕೆ ಈ ರಜಪೂತ ವೀರ ಪತ್ನಿಗೆ ಮೋರೆಯಿಲ್ಲವು," ಎಂದು ನುಡಿದು ಲಜಪತನನ್ನು ಕುರಿತು—

ಮಂದಾಕಿನಿ— ಲಜಪತ, ಈ ಉಂಗುರವು ನನ್ನ ಬಳಿಯಲ್ಲಿಯೇ ಇರಲಿ. ನನ್ನ ವ್ರತಧಾರಣಕ್ಕೂ, ಪೂಜೆಗೂ ಇದು ಅವಶ್ಯವಾಗಿರುವದು.

ಲಜಪತ— ಇದನ್ನು ನಿನಗೇ ಕೊಡಬೇಕೆಂದು ದುರ್ಜಯಸಿಂಹನು ನನ್ನ ಮುಂದೆ ಹೇಳಿರುವದರಿಂದ, ನೀನು ಅವಶ್ಯವಾಗಿ ಇದನ್ನು ತೆಗೆದುಕೋ; ಆದರೆ ಮಂದಾಕಿನೀ, ಮಳೆ ಬರುವಹಾಗಾಯಿತು, ಹೊತ್ತು ಮುಣುಗಿತು. ಇಂದು ನನ್ನ ಮನೆಯಲ್ಲಿಯೇ ಇದ್ದು ನಾಳೆ ಬೆಳಗಾಗುತ್ತಲೇ ನೀನು ಬೇಕಾದಲ್ಲಿಗೆ ಹೋಗು. ನನ್ನದಿಷ್ಟು ಪ್ರಾರ್ಥನೆಯನ್ನು ನೀನು ನಡಿಸಲೇಬೇಕು. ಇಂಥ ಕಗ್ಗತ್ತಲೆಯ ರಾತ್ರಿಯಲ್ಲಿ ನಿರ್ಜನ ಪ್ರದೇಶದೊಳಗಿಂದ ನಿನ್ನಂಥ ಒಬ್ಬಳೇ ಸ್ತ್ರೀಯು ಹೋಗುವದು ಯೋಗ್ಯವಲ್ಲ.

ಮಂದಾಕಿನಿ ( ನಿರ್ಭಯದಿಂದ )— ನನಗೆ ಮಳೆಯು ಅಂಜಿಕೆಯಿಲ್ಲ; ಆದರಂತೆ ಈ ರಜಪೂತರ ದೇಶದಲ್ಲಿ ನನ್ನಂಥ ರಜಪೂತ ಸ್ತ್ರೀಗೆ ಅಂಜಿಕೆ ಬರುವದು ತೀರ ಅಶಕ್ಯವಾಗಿರುವದು.

ಹೀಗೆಂದು ನುಡಿದು ಮಂದಾಕಿನಿಯು ಹೆಚ್ಚಿಗೆ ಏನೂ ಮಾತಾಡದೆ, ಬಡಬಡ ಕಾಲುಹಾಕುತ್ತ ಕೋಟೆಯೊಳಗಿಂದ ಹೊರಬಿದ್ದು ಹೋಗಿಬಿಟ್ಟಳು. ಲಜಪತಸಿಂಹನು ಸುಮ್ಮನೆ ಆಕೆಯನ್ನು ನೋಡುತ್ತ ನಿಂತುಕೊಂಡನು. ಕಡೆಗೆ ಆತನು ಒಮ್ಮೆ ನಿಟ್ಟುಸಿರುಬಿಟ್ಟು— ಹಾಯ! ಪಾಷಾಣ ಹೃದಯದ ಸ್ತ್ರೀಯೇ, ನಿನ್ನ ಸಲುವಾಗಿ ನಾನು ಎಷ್ಟು ಕಷ್ಟಪಟ್ಟೆನೆಂಬದು ನಿನಗೇನು ಗೊತ್ತು? ನೀನು ಹೀಗೆ ನನ್ನನ್ನು ಕಾಲಿಲಿ ಒದ್ದು ಹೋಗುವದು ಯೋಗ್ಯವೇ? ಆದರೆ ನಾನು ಮಾತ್ರ ನಿನ್ನನ್ನು ಬಿಟ್ಟವನಲ್ಲ. ಪಿಶಾಚದ ಹಾಗೆ ಹೀಗೆಯೇ ನಿನ್ನ ಬೆನ್ನಹತ್ತಿ ಬರುವೆನು, ಎಂದು ನುಡಿದು ಸುಳುವು ಹತ್ತಗೊಡದೆ ಆತನು ಮಂದಾಕಿನಿಯ ಬೆನ್ನುಹತ್ತಿ ನಡೆದನು.

ಹಾದಿಯಲ್ಲಿ ಮಂದಾಕಿನಿಯು ತನ್ನ ಪತಿಯು ಮರಣದ ವಿಷಯವಾಗಿ ವಿಚಾರಮಾಡುತ್ತ, ದುಃಖದಿಂದ ಕಣ್ಣೀರು ಸುರಿಸುತ್ತ ಅಂಬರರಾಜಧಾನಿಯ ಹಾದಿಯನ್ನು ಹಿಡಿದು ಒತ್ತರದಿಂದ ಸಾಗಿದಳು. ಬರಬರುತ್ತ ಮಳೆಯು ನಿಂತಿತು; ಗಾಳಿಯೂ ಕಡಿಮೆಯಾಯಿತು; ಅವುಗಳೊಡನೆ ಮಂದಾಕಿನಿಯ ಶೋಕವೇಗವೂ ಕೆಲಮಟ್ಟಿಗೆ ಕಡಿಮೆಯಾಗಲು, ಆಕೆಯು ಮನಸ್ಸಿನಲ್ಲಿ—"ನನ್ನಂಥ ಸತಿಗೆ ಹೀಗೆ ಅಕಾಲ ವೈಧವ್ಯವು ಪ್ರಾಪ್ತವಾಗಬಹುದೇ? ಅಥವಾ ನನ್ನ ಪತಿಯು ಜೀವದಿಂದಿದ್ದು ಲಜಪತಸಿಂಗನು ಹೀಗೆ ಸುಳ್ಳೇ ಹೇಳಿರ ಬಹುದೇ? ಸುಳ್ಳು ಆಗಿದ್ದರೆ ಈ ಉಂಗುರವು ಲಜಪತನ ಕೈಗೆ ಹೇಗೆ ಬಂದಿದ್ದೀತು? ಛೀ ಛೀ! ಪತಿಯು ಮರಣಹೊಂದಿದ್ದೇ ನಿಜವು. ಕೆಟ್ಟ ಸುದ್ದಿಗಳು ಸುಳ್ಳಾಗುವದಿಲ್ಲ. ದುಷ್ಟ ಖುಸ್ರುವು ದುಷ್ಟ ಬುದ್ಧಿಯಿಂದ ನನ್ನ ಪತಿಯ ಕೊಲೆ ಮಾಡಿಸಿದ್ದರೂ ಮಾಡಿಸಿರಬಹುದು. ಇಲ್ಲದಿದ್ದರೆ ಲಜಪತಸಿಂಹನಾದರೂ ಸುಳ್ಳೇ ಏಕೆ ಹೇಳಿಯಾನು?" ಎಂದು ಆಲೋಚಿಸುತ್ತ ಸಾಗಿರಲು, ತನ್ನ ಹಿಂದೆ ಯಾರೋ ಬರುತ್ತಿರುವಂತೆ ಕಾಲಸಪ್ಪಳವು ಆಕೆಗೆ ಕೇಳಿಸ ಹತ್ತಿತು. ಆಗ ಆಕೆಯು ಅಂಜಿ ನಿಂತುಕೊಂಡು ಹಿಂದಿರುಗಿ ನೋಡುತ್ತಿರಲು, ಒಂದು ಕಪ್ಪುಬಣ್ಣದ ಮನುಷ್ಯಾಕೃತಿಯು ಆಕೆಯ ಕಡೆಗೆ ಸಾಗಿ ಬರತೊಡಗಿತು. ಆಗ ಮಂದಾಕಿನಿಯು ತಾನು ನಿಂತುಕೊಂಡಿದ್ದ ಗಿಡದ ಬುಡದಲ್ಲಿಯೇ ಉಲುಕಾಡದೆ ಧೈರ್ಯದಿಂದ ನಿಂತುಕೊಂಡುಬಿಟ್ಟಳು. ಆಗ ಬೆನ್ನುಹತ್ತಿ ಬರುತ್ತಿದ್ದ ಆಕೃತಿಯು ಹತ್ತರಬರಲು ಮಂದಾಕಿನಿಯು ದಿಟ್ಟತನದಿಂದ—

ಮಂದಾಕಿನಿ— ಯಾರು ನೀನು?

ಆಕೃತಿ— ನನ್ನ ಗುರುತು ನಿನಗೆ ಹತ್ತಲಿಲ್ಲವೆ? ನಾನು ಲಜಪತ ಸಿಂಹನು!

ಮಂದಾಕಿನಿ— ನನ್ನ ಬೆನ್ನಹತ್ತಿ ಇಷ್ಟು ರಾತ್ರಿ ಇಷ್ಟುದೂರ ಯಾಕೆ ಬಂದಿರಿ ಲಜಪತ?

ಲಜಪತ— ನೀನು ಇಂಥ ಕಗ್ಗತ್ತಲೆಯ ರಾತ್ರಿಯಲ್ಲಿ ಸಂಗಡ ಯಾರನ್ನೂ ಕರಕೊಳ್ಳದೆ ಒಬ್ಬಳೇ ಹೋದದ್ದು ನನಗೆ ಸಮಾಧಾನವಾಗದ್ದರಿಂದ, ನಾನು ನಿನ್ನ ಬೆನ್ನುಹತ್ತಿ ಬಂದೆನು. ಇದಲ್ಲದೆ ನಿನ್ನನ್ನು ಒಂದು ಮಾತು ಕೇಳುವದು ನನ್ನ ಮನಸ್ಸಿನಲ್ಲಿ ಇತ್ತು.

ಮಂದಾಕಿನಿ (ಸರಳತನದಿಂದ)— ಏನು ಕೇಳುವದನ್ನು ನೀವು ರತನ ಗಡದ ಮೇಲೆಯೇ ಏಕೆ ಕೇಳಲಿಲ್ಲ? ಅಷ್ಟಕ್ಕಾಗಿ ನೀವು ಇಲ್ಲಿಯವರೆಗೆ ಯಾಕೆ ಬಂದಿರಿ ?

ಲಜಪತ— ಮಂದಾಕಿನೀ, ನಿನ್ನನ್ನು ಅಲ್ಲಿ ಕೇಳುವದು ಆಗಲಿಲ್ಲ. ಇನ್ನು ಕೇಳಬೇಕೆನ್ನುವದರೊಳಗೆ ನೀನು ನಿಲ್ಲದೆ ತಟ್ಟನೆ ಹೊರಟುಬಂದು ಬಿಟ್ಟಿ. ಈಶ್ವರನು ನಿನಗೆ ಅಲಭ್ಯ ಸೌಂದರ್ಯ ಕೊಟ್ಟಿರುವನು; ಆದರೆ ಮಂದಿಯ ಮನಸ್ಸಿನ ಭಾವವನ್ನು ತಿಳಿಯುವ ಸಾಮರ್ಥ್ಯವನ್ನು ಕೊಟ್ಟಿರುವದಿಲ್ಲ. ನೀನು ಹೂವಿನಂತೆ ಸುಕುಮಾರಿಯಾದ ಸ್ತ್ರೀಯಿದ್ದರೂ, ಪಾಷಾಣ ಹೃದಯದವಳಾಗಿರುತ್ತೀ.

ಮಂದಾಕಿನಿ— ಏನನ್ನುವಿರಿ ಲಜಪತಸಿಂಹ ? ನೀವು ರಜಪೂತರೇ ಇರುವಿರಲ್ಲವೆ ? ರಮಣಿಯರ ಮಾನವನ್ನು ಕಾಯುವದು ಪ್ರತಿಒಬ್ಬ ರಜಪೂತ ವೀರನ ಕರ್ತವ್ಯವಾಗಿರುವದು; ಆದರೆ ಈಗ ನೀವು ಆಡಿದ ಮಾತುಗಳು ಸಭ್ಯತನಕ್ಕೆ ಸಲ್ಲದವೆಂದು ಯಾರಾದರೂ ಹೇಳಬಹುದು.

ಲಜಪತ— ನೀನು ನಿಜವಾಗಿ ಮಾತಾಡಿದೆ. ನಾನು ಸಭ್ಯತನವನ್ನು ಬಿಟ್ಟುಕೊಟ್ಟಿರುವೆನಲ್ಲದೆ ಧರ್ಮವನ್ನೂ ಮರೆತಿರುವೆನು. ಕರ್ತ್ತವ್ಯಪರಾಙ್ಮುಖನಂತು ನಾನು ಯಾವಾಗೋ ಆಗಿರುವೆನು. ನಿನ್ನ ಸ್ವರ್ಗೀಯ ಸೌಂದರ್ಯಕ್ಕಾಗಿ ಮರುಳಾಗಿರುವ ನನ್ನ ಮನಸ್ಸು ನನ್ನನ್ನು ಅಡ್ಡಹಾದಿಗೆ ಎಳೆದೊಯ್ಯುತ್ತಿರುವದು; ಆದರೆ ಪ್ರಿಯ ಮಂದಾಕಿನೀ, ಇನ್ನು ನೀನು ನನ್ನವಳಾಗುವದಿಲ್ಲವೆ ?

ಲಜಪತಸಿಂಹನು ಹೀಗೆ ಅಕಲ್ಪಿತ ಮಾತಾಡಿದ್ದನ್ನು ಕೇಳಿ ಮಂದಾಕಿನಿಯ ಮೈಮೇಲಿನ ಕೂದಲುಗಳು ನೆಟ್ಟಗಾದವು. ಆಕೆಯ ಬಳಿಯಲ್ಲಿ ಆತ್ಮರಕ್ಷಣದ ಯಾವ ಸಾಧನಗಳೂ ಇಲ್ಲದ್ದರಿಂದ ಆಕೆಯು ಲಜಪತನ ನೀಚತನಕ್ಕಾಗಿ ಮನಸ್ಸಿನಲ್ಲಿ ಬಹಳವಾಗಿ ಅಂಜಿದಳು; ಆದರೆ ಈಗ ಹೀಗೆ ಅಂಜಿ ಕೈಕಾಲು ಬಿಟ್ಟರೆ ಮತ್ತಿಷ್ಟು ಅನರ್ಥವಾದೀತೆಂದು ತಿಳಿದು ಆಕೆಯು ದಿಟ್ಟತನವನ್ನು ಮುಂದೆಮಾಡಿ— “ಲಜಪತಸಿಂಹ, ನನ್ನಂಥ ಅನಾಥ ವಿಧವೆಯ ಸಂಗಡ ಹೀಗೆ ನೀನು ನಡೆದುಕೊಳ್ಳುವದು ಯೋಗ್ಯವಲ್ಲ. ಈ ನಿರ್ಜನವಾದ ಕಗ್ಗತ್ತಲೆಯ ರಾತ್ರಿಯಲ್ಲಿ ನನ್ನ ಸಹಾಯಕರು ಯಾರೂ

ಇಲ್ಲವೆಂದು ನೀನು ನಿರ್ಭಯದಿಂದ ನಿರ್ಲಜ್ಜನಾಗಬೇಡ. ರಜಪೂತ ಸ್ತ್ರೀಯರು ಆತ್ಮರಕ್ಷಣದ ಸಾಧನವಿಲ್ಲದೆ ಹೊರಬೀಳರೆಂಬ ಮಾತು ನಿನಗೆ ಗೊತ್ತಿರುತ್ತದಷ್ಟೇ ? ಆದರೂ ನಿನಗೆ ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ನಿನ್ನ ಒಡಹುಟ್ಟಿದ ತಂಗಿಯೆಂದು ತಿಳಿದು ನನ್ನ ಮಾನವನ್ನು ಕಾಯು. ಅನಾಥ ರಕ್ಷಕನಾದ ದೇವರು ನನ್ನ ವಿಪತ್ಕಾಲದಲ್ಲಿ ಯಾವದೊಂದು ಬಗೆಯಿಂದ ನನಗೆ ಸಹಾಯ ಮಾಡಿಯೇ ಮಾಡುವನು; ಆದರೆ ನೀನು ಮಾತ್ರ ಆ ಈಶ್ವರೀ ಕ್ಷೋಭದಿಂದ ನಾಶ ಹೊಂದೀ; ಅಥವಾ ನನ್ನ ಬಳಿಯಲ್ಲಿರುವ ಗುಪ್ತ ಕಠಾರಿಯಿಂದ ಇರಿತುಕೊಂಡು ನಾನು ಪ್ರಾಣತ್ಯಾಗ ಮಾಡಿಕೊಂಡರೆ, ನೀನು ಸ್ತ್ರೀ ಹತ್ಯೆಯ ದೋಷಕ್ಕೆ ಗುರಿಯಾದೀ" ಎಂದು ನುಡಿಯುತ್ತ ಮಂದಾಕಿನಿಯು ಹಿಂದಕ್ಕೆ ಸರಿಯಹತ್ತಿದಳು; ಆದರೆ ಕಾಮಾಂಧನಾದ ನಿರ್ಲಜ್ಜ ಲಜಪತನು ಆಕೆಯ ಧರ್ಮಶ್ರವಣವನ್ನು ಲಕ್ಷಿಸದೆ ಮುಂದುವರಿದು ಹೋಗಿ ಆಕೆಯ ಸೆರಗು ಹಿಡಿದನು. ಆಗ ಮಂದಾಕಿನಿಯು ಲಜಪತನನ್ನು ಒದ್ದು ಹಿಂದಕ್ಕೆ ಕೆಡವಿ--"ಸತಿಯ ಸಂರಕ್ಷಕರೇ, ಯಾರಾದರೂ ಎಲ್ಲಿಯಾದರೂ ಇದ್ದರೆ ಬೇಗನೆ ಬರ್ರಿ. ಈ ದುಷ್ಟನು ನನ್ನ ಸತೀತ್ವವನ್ನು ಭಂಗ ಪಡಿಸುವನು" ಎಂದು ಒಂದೇಸವನೆ ಕೂಗಿ ಕೂಗಿ ಕರೆಯಹತ್ತಿದಳು. ಆಗ ಅಕಸ್ಮಾತ್ ಓಡುತ್ತಬರುವ ಕೊಳಗಗಳ ಸಪ್ಪಳವು ಆಕೆಗೆ ಕೇಳಿಸ ತೊಡಗಿತು. ಆಗಂತು ಮಂದಾಕಿನಿಯು ಗಂಟಲು ಹರಿಯುವಂತೆ ಒಂದೇ ಸವನೆ ಒದರಿ ಒದರಿ ಕರೆಯತೊಡಗಿದಳು. ಅಷ್ಟರಲ್ಲಿ ನಾಲ್ವರು ಜನ ರಾವುತರು ಮಂದಾಕಿನಿಯೇ ಇದ್ದಲ್ಲಿಗೆ ಬಂದರು. ಆಗ ಪಾಪಿಷ್ಟನಾದ ಲಜಪತನು ಅಂಜಿ ಓಡಿ ಹೋಗಬೇಗನ್ನುತ್ತಿರಲು, ಆ ರಾವುತರ ಮುಖ್ಯನು ಅದನ್ನು ಅರಿತು ಲಜಪತನನ್ನು ಕುರಿತು-- ಏ ಬದಮಾಷ, ನಿನ್ನ ದುಷ್ಟ ವಿಚಾರವನ್ನು ನಾನು ಅರಿತಿರುವೆನು. ನೀನು ಒಂದು ಹೆಜ್ಜೆಯನ್ನು ಕಿತ್ತಿ ಇಟ್ಟರೆ ನಿನ್ನನ್ನು ಇಲ್ಲಿಯೇ ತುಂಡರಿಸುವೆನು" ಎಂದು ಗದ್ದರಿಸಿ ತನ್ನ ಸೇವಕನನ್ನು ಕುರಿತು-- "ಇನಾಯತ ಉಲ್ಲಾಖಾನ, ಈ ದುಷ್ಟನನ್ನು ಬಂಧಿಸು" ಎಂದು ಆಜ್ಞಾಪಿಸಿ, ಮಂದಾಕಿನಿಯ ಬಳಿಗೆ ಹೋದನು; ಆದರೆ ಮಂದಾಕಿನಿಯು ಭಯದಿಂದ ಮೂರ್ಛೆ ಹೊಂದಿ ನೆಲಕ್ಕೆ ಬಿದ್ದಿದ್ದಳು. ಆ ಮುಖ್ಯನು ತನ್ನ ಸೇವಕರಿಗೆ-ಒಬ್ಬೊಬ್ಬರು ಒಬ್ಬೊಬ್ಬರನ್ನಂತೆ ಇವರಿಬ್ಬರನ್ನೂ ನಿಮ್ಮ

ಕುದುರೆಯ ಮೇಲೆ ಹಾಕಿಕೊಂಡು ಬರಬೇಕೆಂದು ಆಜ್ಞಾಪಿಸಿ, ತಾನು ತನ್ನ ಕುದುರೆಯನ್ನು ಹತ್ತಿ ಎಲ್ಲರೊಡನೆ ಫತ್ತೇಪುರ ಸಿಕರಿಯ ಕಡೆಗೆ ಸಾಗಿದನು. ಮಂದಾಕಿನಿಯನ್ನು ಹೀಗೆ ಲಜಪತನ ಕೈಯೊಳಗಿಂದ ಅಕಸ್ಮಾತ್ ಬಿಡಿಸಿದವನು ಬೇರೆ ಯಾವನೂ ಆಗಿರದೆ, ಶಹಾಜಾದಾ ಖುಸ್ರುವೇ ಆಗಿದ್ದನು. ಹಿಂದೆ ಹೇಳಿದಂತೆ ಖುಸ್ರುವು ಆನೆಯ ಕಾಳಗದಲ್ಲಿ ಅಭಿಮಾನಕ್ಕೆ ಬಿದ್ದು ತಂದೆಯಾದ ಸುಲ್ತಾನ ಸೇಲೀಮನಿಗೆ ಬಾಯಿಗೆ ಬಂದಹಾಗೆ ಅಂದು ತನ್ನ ತಂದೆಯ ಸಿಟ್ಟಿಗೆ ಗುರಿಯಾದದ್ದು ವಾಚಕರಿಗೆ ಗೊತ್ತಿರುವದು. ಈ ಸುದ್ದಿಯು ಖುಸ್ರುವಿನ ತಾಯಿಯಾದ ಶಾಹೀಬೇಗಮೆಗೆ, ಅಥವಾ ಜೋಧಬಾಯಿಗೆ ಗೊತ್ತಾಗಲು, ಆಕೆಯು ಮಗನಿಗೆ ಬಾಯಿಗೆ ಬಂದಹಾಗೆ ಅಂದಳು. ಅತ್ತ ಅಕಬರ ಬಾದಶಹನೂ ಖುಸ್ರುವನ್ನು ಕರೆಸಿ— “ಖುಸ್ರೊ, ನೀನು ಇಷ್ಟು ದೊಡ್ಡವನಾದರೂ ನಿನ್ನ ಹಿತಾಹಿತಗಳು ನಿನಗೆ ತಿಳಿಯುವದಿಲ್ಲವಲ್ಲ! ನಾನು ಇನ್ನು ಎಷ್ಟು ದಿವಸ ಬದುಕಿ ಇರುವೆನು? ನನ್ನ ತರುವಾಯ ನಿನ್ನ ತಂದೆಯಾದ ಸೇಲೀಮನೇ ದಿಲ್ಲಿಯ ಸಿಂಹಾಸನವನ್ನು ಏರುವವನಿದ್ದು, ಆತನ ಸಿಟ್ಟಿಗೆ ನೀನು ಈ ಪರಿ ಗುರಿಯಾಗಬಹುದೇ? ಬಾದಶಹನಾದ ಸೇಲೀಮನು ನಿನ್ನನ್ನು ಕಾರಾಗೃಹದಲ್ಲಿರಿಸಿದರೆ, ಕಬರಸ್ಥಾನದಲ್ಲಿ ಶಾಂತರೀತಿಯಿಂದ ಶಯನ ಮಾಡಿದ ನಾನು ನಿನಗೇನು ಸಹಾಯ ಮಾಡುವೆನು? ಈಗ ನೀನು ಈ ಆಗ್ರಾ ಪಟ್ಟಣದಲ್ಲಿರಬೇಡ, ಫತ್ತೇಪುರ ಸಿಕರಿಗೆ ಹೋಗು. ನಾನು ನಿನ್ನ ತಂದೆಗೆ ಸಮಾಧಾನ ಹೇಳಿ ಕ್ರಮವಾಗಿ ಆತನ ಸಿಟ್ಟು ಇಳಿಸುವೆನು. ನನ್ನ ಪತ್ರ ಬಂದಬಳಿಕ ಪುನಃ ನೀನು ಆಗ್ರಾ ಪಟ್ಟಣಕ್ಕೆ ಬರುವೆಯಂತೆ.” ಎಂದು ಹೇಳಿದನು. ಅದರಂತೆ ಖುಸ್ರುವು ರಾವುತರನ್ನು ಸಂಗಡ ಕರಕೊಂಡು ಬಾದಶಹನಾದ ಅಜ್ಜನ ಅಪ್ಪಣೆಯಂತೆ, ಫತ್ತೇಪುರ ಸಿಕರಿಗೆ ಬರುತ್ತಿದ್ದನು. ಆತನೇ ಈಗ ಹಾದಿಯಲ್ಲಿ ಮಂದಾಕಿನಿಯ ಕಷ್ಟವನ್ನು ದೂರ ಮಾಡಿದನು.

ಖುಸ್ರುವು ಅರಮನೆಯನ್ನು ಮುಟ್ಟಿದಕೂಡಲೆ ತಾರ್ತರಿ ರಮಣಿಯರನ್ನು ಕರೆದು— “ನೀವು ಈ ಮೂರ್ಛಿತ ಸ್ತ್ರೀಯನ್ನು ಇಸ್ತಂಬುಲಿಬೇಗಮ ಸಾಹೇಬರ ಮಂದಿರಕ್ಕೆ ಕರಕೊಂಡು ಹೋಗಿರಿ.” ಎಂದು ಹೇಳಿ ಮಂದಾಕಿನಿಯನ್ನು ಅವರಿಗೆ ಒಪ್ಪಿಸಿದನು. ಇಸ್ತಂಬುಲಿ ಅಥವಾ ರುಮಿಬೇಗಮೆಯು ಅಕಬರಬಾದಶಹನ ಒಬ್ಬ ಅತ್ಯಂತ ಪ್ರೀತಿಯ ಬೇಗಮೆಯಾಗಿದ್ದಳು.

ಈಕೆಯು ಖುಸ್ರುವನ್ನೂ ಆತನ ಹೆಂಡತಿಯಾದ ಪ್ಯಾರಿ ಬಾನುವನ್ನೂ ಬಹಳ ವಾಗಿ ಪ್ರೀತಿಸುತ್ತಿದ್ದಳು. ಬಾದಶಹನ ಮುಂದೆಯಾದರೂ ಈ ಬೇಗಮೆಯು ಖುಸ್ರುವನ್ನು ಆಗಾಗ್ಗೆ ಶ್ಲಾಘಿಸುತ್ತಿದ್ದಳು. ತುರ್ಕಸ್ಥಾನದೊಳಗಿನ ಇಸ್ತಂಬೂಲ ಪಟ್ಟಣದಲ್ಲಿ ಈಕೆಯ ಜನ್ಮವಾದದ್ದರಿಂದ, ಈಕೆಯನ್ನು ಇಸ್ತಂಬುಲೀ ಬೇಗಮೆಯೆಂದು ಕರೆಯುತ್ತಿದ್ದರು. ಈಕೆಯಂಥ ಗಾಯನ ಕುಶಲರು ಆಗಿನ ಜನಾನಖಾನೆಯಲ್ಲಿ ಮತ್ತೊಬ್ಬರಿದ್ದಿಲ್ಲವೆಂದು ಹೇಳಬಹುದು. ಈಕೆಯು ಬಹುದೊಡ್ಡ ಮನಸ್ಸಿನವಳು; ಹಿಂದು ಮುಸಲ್ಮಾನರಲ್ಲಿ ಭೇದವನ್ನು ಎಣಿಸುತ್ತಿದ್ದಿಲ್ಲ. ಆಗ್ರಾ ರಾಜಧಾನಿಯ ಕೋಲಾಹಲದಲ್ಲಿ ಇರಲಾರದೆ ತನಗೆ ಏಕಾಂತಸ್ಥಾನವು ಬೇಕೆಂದು ಹೇಳಿದ್ದರಿಂದ ಅಕಬರ ಬಾದಶಹನು ಈಕೆಯ ಸಲುವಾಗಿಯೇ ಫತ್ತೇಪುರ ಸಿಕ್ರಿಯಲ್ಲಿ ಒಂದು ಸುಂದರ ಮಂದಿರವನ್ನು ಕಟ್ಟಿಸಿದ್ದನು. ಈಗಲೂ ಆ ಮಂದಿರದ ಭಗ್ನಾವಶೇಷವನ್ನು ಅಲ್ಲಿ ಕಾಣಬಹುದು. ಇಸ್ತಂಬುಲೀ ಬೇಗಮೆಯು ಮಂದಾಕಿನಿಯ ಉಡಿಗೆತೊಡಿಗೆಗಳನ್ನು ನೋಡಿ ಈಕೆಯು ಹಿಂದುವೆಂದು ತಿಳಿದುಕೊಂಡು ಮಮತೆಯಿಂದ ಆಕೆಯ ಶುಶ್ರೂಷೆಯನ್ನು ಮಾಡಿಸತೊಡಗಿದಳು. ಮಂದಾಕಿನಿಯ ಸೌಂದರ್ಯವನ್ನು ನೋಡಿ ಬೇಗಮೆಗೆ ಆಶ್ಚರ್ಯವಾಯಿತು. ಅಷ್ಟರಲ್ಲಿ ಖುಸ್ರುವು ಕಳಿಸಿಕೊಟ್ಟ ಹಕೀಮನು ಅಲ್ಲಿಗೆ ಬರಲು, ಆತನ ಉಪಚಾರದಿಂದ ಮಂದಾಕಿನಿಯು ಎಚ್ಚತ್ತಳು. ತಾನು ಒಂದು ಭವ್ಯ ಮಂದಿರದಲ್ಲಿ ಇರುವದನ್ನು ನೋಡಿ ಆಕೆಯು ಆಶ್ಚರ್ಯಪಟ್ಟಳು! ಅಡವಿಯಲ್ಲಿ ಇದ್ದ ತಾನು ಇಲ್ಲಿಗೆ ಹೇಗೆ ಬಂದೆನೆಂಬದು ಆಕೆಗೆ ತಿಳಿಯದಾಯಿತು. ಆಕೆಯು ಹೀಗೆ ಆಶ್ಚರ್ಯಮಗ್ನಳಾಗಿರುವದನ್ನು ನೋಡಿ ಇಸ್ತಂಬುಲಿಯು ಆಕೆಗೆ ತನ್ನ ಪರಿಚಯವನ್ನು ಮಾಡಿಕೊಟ್ಟು, ನೀನು ಯಾವ ಚಿಂತೆಯನ್ನೂ ಮಾಡಬೇಡವೆಂದು ಮಂದಾಕಿನಿಗೆ ಧೈರ್ಯ ಹೇಳಿದಳು. ತಾನು ಮೂರ್ಛಿತಳಾಗಿದ್ದಾಗ ಖುಸ್ರುವು ತನ್ನನ್ನು ಇಲ್ಲಿಗೆ ಕರತಂದನೆಂದು ರೂಮಿ ಬೇಗಮೆಯು ಹೇಳಿದ್ದನ್ನು ಕೇಳಿ ಮಂದಾಕಿನಿಯು ಅಸಮಾಧಾನಪಟ್ಟಳು. ತನ್ನ ಪತಿಯನ್ನು ಕೊಂದ ಖುಸ್ರುವಿನ ಉಪಕೃತಿಯು ಆ ಪತಿವ್ರತೆಗೆ ಹೇಗೆ ಸಹನವಾಗಬೇಕು? ಮೇಲಾಗಿ ಖುಸ್ರುವು ಪಾಪ ಬುದ್ಧಿಯವನೆಂಬದು ಆಕೆಗೆ ಪೂರ್ಣ ಗೊತ್ತಿತ್ತು; ಆದ್ದರಿಂದ ಆಕೆಯು ಅಸಮಾಧಾನಪಟ್ಟು ಕಣ್ಣುಗಳನ್ನು ಮುಚ್ಚಿಕೊಂಡಳು.

ಆಗ ರೂಮಿ ಬೇಗಮೆಯು ಈ ತರುಣಿಗೆ ವಿಶ್ರಾಂತಿಯು ಅವಶ್ಯಕತೆಯಿರುವದೆಂದು ತಿಳಿದು, ಸರ್ವೋತ್ಕೃಷ್ಟವಾದದ್ದೊಂದು ಮಾದಕ ಪೇಯವನ್ನು ಮಂದಾಕಿನಿಗೆ ಕುಡಿಸಿದಳು. ಅದರಿಂದ ಮಂದಾಕಿನಿಗೆ ಗಾಢ ನಿದ್ರೆಹತ್ತಿ ಆಕೆಯು ಮಲಗಿಕೊಳ್ಳಲು, ಇಸ್ತಂಬುಲೀ ಬೇಗಮೆಯೂ ಮಲಗಿಕೊಳ್ಳುವದಕ್ಕಾಗಿ ಹೊರಟುಹೋದಳು.

ಬೇಗಮೆಯು ಹೋದ ಸ್ವಲ್ಪ ಹೊತ್ತಿನಲ್ಲಿಯೇ ಖುಸ್ರುವು ಅಲ್ಲಿಗೆ ಬಂದು, ಆ ಸ್ತ್ರೀಯ ಪ್ರಕೃತಿಯು ಹೇಗಿರುವದೆಂದು ದಾಸಿಯರನ್ನು ಕೇಳಿದನು. ಒಬ್ಬ ದಾಸಿಯು ನಡೆದ ಸಂಗತಿಯನ್ನೆಲ್ಲ ಹೇಳಲು, ನಿದ್ದೆ ಹತ್ತಿದ ಮಂದಾಕಿನಿಯನ್ನು ನೋಡುವದಕ್ಕಾಗಿ ಖುಸ್ರುವು ಆಕೆಯು ಮಲಗಿಕೊಂಡಿದ್ದ ಕೋಣೆಯೊಳಗೆ ಹೋದನು. ಕಗ್ಗತ್ತಲೆಯ ರಾತ್ರಿಯಲ್ಲಿ ಆವಸರದೊಳಗೆ ಕರಕೊಂಡು ಬರುವಾಗ ಮಂದಾಕಿನಿಯ ಗುರುತು ಖುಸ್ರುವಿಗೆ ಹತ್ತಿದ್ದಿಲ್ಲ. ಆತನು ಒಳಗೆ ಹೋಗಿ ಶುಭ್ರ ಹಾಸಿಗೆಯ ಮೇಲೆ ನಿದ್ದೆ ಹತ್ತಿ ಮಲಗಿಕೊಂಡಿದ್ದ ಮಂದಾಕಿನಿಯ ಗುರುತು ಹಿಡಿದು ಪರಮಾಶ್ಚರ್ಯಪಟ್ಟನು. ನನ್ನ ಮನಸ್ಸನ್ನು ಹರಣ ಮಾಡಿದ್ದ ಈ ಸುಂದರಿಯು ಹೀಗೆ ಅಕಸ್ಮಾತ್ ನನ್ನ ಕೈಗೆ ಸಿಕ್ಕದ್ದು ವಿಲಕ್ಷಣ ಯೋಗವೆಂದು ತಿಳಿದು ಆತನಿಗೆ ಒಂದುಬಗೆಯ ಸಮಾಧಾನವಾಯಿತು. ನಿದ್ದೆಯಲ್ಲಿ ಅಸ್ತವ್ಯಸ್ತವಾಗಿದ್ದ ಆಕೆಯ ಅವಯವಗಳ ಸೌಂದರ್ಯ ನೋಡಿಯಂತು ಆತನ ಚಿತ್ತಭ್ರಮವಾಗಿ ಹೋಯಿತು. ತಾನು ಹೀಗೆ ಭ್ರಾಂತನಾದದ್ದು ದಾಸಿಯರಿಗೆ ತಿಳಿದು ಅವರು ರೂಮಿ ಬೇಗಮೆಯ ಮುಂದೆ ಹೇಳಿದರೆ, ತನ್ನ ನೀಚತನಕ್ಕಾಗಿ ಬೇಗಮೆಯು ತನ್ನನ್ನು ತಿರಸ್ಕರಿಸಬಹುದೆಂದು ತಿಳಿದು, ಮಹಾಸಮರ್ಥನಂತೆ ಮನೋನಿಗ್ರಹ ಮಾಡಿ ಆತನು ದಾಸಿಯನ್ನು ಕುರಿತು— “ಈ ಹಿಂದೂ ರಮಣಿಯ ಪ್ರಕೃತಿಯು ಹೇಗೆ ಇರುವದೆಂಬದನ್ನು ನಾಳೆ ಬೆಳಗಿನಲ್ಲಿ ನನಗೆ ತಿಳಿಸು” ಎಂದು ಹೇಳಿ ಹೊರಟುಹೋದನು. ಏನು ಮಾಡಿದರೂ ಒಮ್ಮೆ ಹತ್ತಿದ ಆತನ ಕೆಟ್ಟ ಚಟದ ಸುಂಕವು ಹೋಗಲೊಲ್ಲದು!



## ೧೬ನೆಯ ಪ್ರಕರಣ

# ಸತಿಯ ಶಾಪ !



ಈ ವಿಚಿತ್ರವಾದ ಸಂಸಾರದಲ್ಲಿ ಮನುಷ್ಯನು ಒಮ್ಮೊಮ್ಮೆ ಹೊಂದಬಾರದ ಸಂತೋಷವನ್ನು ಅಕಸ್ಮಾತ್ ಹೊಂದುತ್ತಿರುತ್ತಾನೆ; ಒಮ್ಮೊಮ್ಮೆ ಮಾಡಬಾರದ ಚಿಂತೆಯನ್ನು ಮಾಡುತ್ತಿರುತ್ತಾನೆ; ಒಮ್ಮೊಮ್ಮೆ ಪಡಬಾರದ ದುಃಖವನ್ನು ಪಡುತ್ತಿರುತ್ತಾನೆ; ಆದರೆ ಅವನ ಈ ಯಾವ ಸ್ಥಿತಿಗೂ ಸಂಬಂಧವಿಲ್ಲದಂತೆ ಒಮ್ಮೊಮ್ಮೆ ಅಕಸ್ಮಾತ್ತಾಗಿ ಆಗುವದು ತಟ್ಟನೆ ಆಗಿಯೇ ಹೋಗುತ್ತಿರುತ್ತದೆ. ಅದರಂತೆ ಅಕಸ್ಮಾತ್ತಾಗಿ ಒದಗಿದ ಆನೆಗಳ ಕಾಳಗದ ನೆವದಿಂದ ಸೇಲೀಮನಿಗೂ, ಖುಸ್ರುವಿಗೂ ಆದ ಜಗಳವನ್ನು ರೂಮಿ ಬೇಗಮೆಯು ಖುಸ್ರುವಿನ ಮುಖದಿಂದಲೇ ಕೇಳಿ ಬಹಳವಾಗಿ ಅಂಜಿದಳು. ಖುಸ್ರುವಿನ ಮೇಲೆ ಆಕೆಯ ಪ್ರೇಮವು ಬಹಳ. ಸೇಲೀಮನಿಂದ ತನ್ನ ಪ್ರಿಯ ಖುಸ್ರುವಿಗೆ ಏನಾದರೂ ತ್ರಾಸವಾದೀತೆಂದು ತಿಳಿದು ಸೇಲೀಮನ ಸಿಟ್ಟು ಇಳಿಸುವದಕ್ಕಾಗಿ ಆಕೆಯು ಆಗ್ರಾಕ್ಕೆ ಹೋಗಬೇಕೆಂದು ನಿಶ್ಚಯಿಸಿದಳು. ರೂಮಿ ಬೇಗಮೆಯೂ ಸೇಲೀಮನನ್ನು ಹೊಟ್ಟೆಯ ಮಗನಂತೆ ನೋಡುತ್ತಿದ್ದದ್ದರಿಂದ, ತನ್ನ ಮಾತನ್ನು ಸೇಲೀಮನು ಮೀರಲಿಕ್ಕಿಲ್ಲವೆಂದು ಆಕೆಯು ತಿಳಿದುಕೊಂಡಿದ್ದಳು. ಆಕೆಯು ಖುಸ್ರುವನ್ನು ಕುರಿತು— "ಖುಸ್ರೂ, ನೀನು ತಂದೆಯ ದ್ವೇಷವನ್ನು ಕಟ್ಟಿಕೊಂಡದ್ದು ಒಳಿತಾಗಲಿಲ್ಲ. ಈ ಪ್ರಸಂಗದಲ್ಲಿ ಆದಷ್ಟು ಬೇಗನೆ ನಿನ್ನ ತಂದೆಯ ಸಿಟ್ಟು ಇಳಿಸದಿದ್ದರೆ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ; ಆದ್ದರಿಂದ ನಾನು ಆಗ್ರಾಕ್ಕೆ ಇಂದೇ ಹೋಗುವೆನು. ನನ್ನ ಬಳಿಯಲ್ಲಿರುವ ಹಿಂದೂ ರಮಣಿಯ ಯೋಗಕ್ಷೇಮದ ಕಡೆಗೆ ನಿನ್ನ ಲಕ್ಷವಿರಲಿ. ನಾನು ಆಗ್ರಾಕ್ಕೆ ಹೋದಬಳಿಕ ನೀನು ಏನೇನು ಮಾಡಬೇಕೆಂಬದನ್ನು ಹೇಳಿಕಳಿಸುವೆನು, ಅದರಂತೆ ನೀನು ಹಟಮಾಡದೆ ನಡೆಯುತ್ತಿರು." ಎಂದು ಹೇಳಿ, ಆ ಉದಾರ ಹೃದಯದ ಬೇಗಮೆಯು ಮಂದಾಕಿನಿಯ ಬಳಿಗೆ ಹೋದಳು. ಮಂದಾಕಿನಿಯು ಬೇಗಮೆಯ ವಿಷಯವಾಗಿ ಅತ್ಯಂತ ಭಕ್ತಿ-

ಯುಳ್ಳವಳಾಗಿದ್ದಳು. ಆ ಘನವಂತಳಿಂದಾದ ಉಪಕೃತಿಗಾಗಿ ತಾನು ಆಜನ್ಮ ಆಕೆಯ ವಿಷಯವಾಗಿ ಕೃತಜ್ಞಳಾಗಿರಬೇಕೆಂದು ಆಕೆಯು ನಿಶ್ಚಯಿಸಿದ್ದಳು. ಹೀಗೆ ಮಂದಾಕಿನಿಯು ಸದ್ಭಾವ ತಾಳಿದವಳಾಗಿರುವಾಗ ಬೇಗಮೆಯು ಆಕೆಯನ್ನು ಕುರಿತು— ಮಂದಾಕಿನೀ, ನಾನು ಒಂದು ಕೆಲಸದ ಸಲುವಾಗಿ ನಾಲ್ಕುದಿನ ಆಗ್ರಾಕ್ಕೆ ಹೋಗಿಬರುವೆನು. ಅಲ್ಲಿಯವರೆಗೆ ಈ ರೆಝಿಯಾ ದಾಸಿಯು ನಿನ್ನ ಯಾವತ್ತು ಯೋಗಕ್ಷೇಮವನ್ನು ಯಥಾಸ್ಥಿತವಾಗಿ ನೋಡಿ ಕೊಳ್ಳುತ್ತಿರುವಳು. ಹೇಗೂ ನಿನ್ನ ಊಟಉಡಿಗೆಯ ಸಂಬಂಧದಿಂದ ನಿನ್ನ ಧರ್ಮಕ್ಕೆ ಬಾಧೆ ಬಾರದಂತೆ ಹಿಂದೂ ಸ್ತ್ರೀಯನ್ನು ಇಟ್ಟು ವ್ಯವಸ್ಥೆ ಮಾಡಿರು ತ್ತದೆ. ಈ ಮಂದಿರದಲ್ಲಿ ಯಾವ ಪುರುಷರಿಗೂ ಬರಲಿಕ್ಕೆ ಪರವಾನಿಗೆಯಿಲ್ಲವು. ನೀನು ನಿಶ್ಚಿಂತಳಾಗಿರು. ನಿನಗೆ ಬೇಸರ ಬಂದರೆ ಈ ಹಿಂದಿನ ಗುಲಾಬಿಯ ಉದ್ಯಾನದಲ್ಲಿ ಯಥೇಚ್ಛವಾಗಿ ವಿಶ್ರಾಂತಿಯನ್ನು ಹೊಂದು. ಅಲ್ಲಿ ನಿನಗೆ ಯಾವ ಬಗೆಯಿಂದಲೂ ತೊಂದರೆಯಾಗಲಾರದು. ನಾನು ಬರುವವರೆಗೆ ಮಾತ್ರ ನೀನು ಹೋಗಬೇಡ. ನಾನು ಬಂದಬಳಿಕ ನಿನ್ನ ಹೇಳಿಕೆಯಂತೆ ನಿನ್ನ ಆಪ್ತರಬಳಿಗೆ ನಿನ್ನನ್ನು ಕಳಿಸಿಕೊಡುವೆನು, ಎಂದು ಹೇಳಿದಳು.

ಇಷ್ಟಂಬೂಲೀ ಬೇಗಮೆಯು ಆಗ್ರಾಕ್ಕೆ ಹೋಗಲು, ಮಂದಾಕಿನಿಗೆ ಬಹಳ ಚಡಪಡಿಕೆಯಾಯಿತು. ಪತಿಯ ಮರಣವಾರ್ತೆಯಿಂದ ಮೊದಲೇ ಆಕೆಯ ಹೃದಯಕ್ಕೆ ಬಲವಾದ ಗಾಯವಾಗಿತ್ತು. ಅದರಲ್ಲಿ ತನ್ನ ಪತಿಯ ಮರಣಕ್ಕೆ ಕಾರಣನಾದ ಖುಸ್ರುವಿನ ಮನೆಯಲ್ಲಿ ನಾನು ಇರುತ್ತಿದ್ದದ್ದರಿಂದ, ಆ ಘಾಯಕ್ಕೆ ಉಪ್ಪು ತೊಡೆದಂತೆ ಆಕೆಗೆ ವಿಶೇಷ ವ್ಯಥೆಯುಂಟಾಗಿತ್ತು. ಬೇಗಮೆಯು ಹೋದದ್ದರಿಂದಂತು ಆಕೆಯ ಮನಸ್ಸಿನಲ್ಲಿ ಇಲ್ಲದ ವಿಚಾರ ಗಳು ಬರತೊಡಗಿ, ಆಕೆಯ ಮನಸ್ಸು ಅತ್ಯಂತ ಅಸ್ವಸ್ಥವಾಯಿತು. ರಾತ್ರಿ ಏನು ಮಾಡಿದರೂ ಆಕೆಗೆ ನಿದ್ರೆ ಬರಲೊಲ್ಲದು. ಆಗ ಆಕೆಯು ತನ್ನ ಕೋಣೆಯಿಂದ ಹೊರಬಿದ್ದು ಹಿಂದಿನ ಗುಲಾಬಿಯ ಉದ್ಯಾನದೊಳಗೆ ಹೋದಳು. ಆ ಮನೋಹರವಾದ ಉದ್ಯಾನದಲ್ಲಿಯ ಸುಗಂಧದ ಸುಳಿ-ಗಾಳಿಯ ಪರಿಚರ್ಯದಿಂದ ಆಕೆಯ ಮನಸ್ಸು ಸ್ವಲ್ಪ ವಿಶ್ರಮಿಸಿ ಆಕೆಗೆ ನಿದ್ದೆ ಬರಲು, ತಾನು ಕುಳಿತಿರುವ ಕಟ್ಟೆಯ ಮೇಲೆಯೇ ಆಕೆಯು ಸ್ವಲ್ಪ ಅಡ್ಡಾ ದಳು. ಸ್ವಲ್ಪ ಹೊತ್ತಿನಲ್ಲಿಯೇ ಮಂದಾಕಿನಿಗೆ ಗಾಢವಾದ ನಿದ್ದೆಯು ಹತ್ತಿತು.

ಆ ಬೆಳದಿಂಗಳ ರಾತ್ರಿಯಲ್ಲಿ ಆ ಶುಭ್ರಸಂಗಮುರವರಿಯ ಕಲ್ಲಿನ ಕಟ್ಟೆಯ ಮೇಲೆ ಮಲಗಿದ್ದ ಮಂದಾಕಿನಿಯ ಸೌಂದರ್ಯವು ಅತ್ಯಂತ ಮೋಹಕ ವಾಗಿದ್ದರೂ, ಅದನ್ನು ನೋಡಿ ಮೋಹಿತರಾಗಲಿಕ್ಕೆ ಅಲ್ಲಿಗೆ ಯಾರೂ ಬರುವ ಹಾಗಿದ್ದಿಲ್ಲ; ಆದರೆ ಮಂದಾಕಿನಿಗೆ ಮೋಹಿತನಾಗಿದ್ದ ಖುಸ್ರುವು, ರೂಮಿ ಬೇಗಮೆಯು ಆಗ್ರಾಕ್ಕೆ ಹೋದದ್ದರಿಂದ ನಿರ್ಭಯನಾಗಿ ಮಂದಾಕಿನಿಯ ಪ್ರಾಪ್ತಿಯು ಹೇಗಾದೀತೆಂದು ಚಿಂತಿಸತೊಡಗಿದ್ದನು. ಮನುಷ್ಯನ ಮನಸ್ಸು ಒಮ್ಮೆ ವ್ಯಸನಾಸಕ್ತವಾಯಿತೆಂದರೆ, ಅದನ್ನು ಆ ವ್ಯಸನದಿಂದ ಹಿಂದಕ್ಕೆ ತಿರುಗಿಸುವದು ಅಶಕ್ಯವೆಂತಲೇ ಹೇಳಬೇಕಾಗುವದು. ರೂಮಿ ಬೇಗಮೆಯ ಭಯದಿಂದ ಖುಸ್ರುವು ಮಂದಾಕಿನಿಯ ಮೇಲಿನ ತನ್ನ ಮನಸ್ಸನ್ನು ಬಿಗಿ ಹಿಡಿಯಲು ವಿಶ್ವಪ್ರಯತ್ನ ಮಾಡಿದನು; ಆದರೆ ಆ ವಿಷಯಾಸಕ್ತ ತರುಣನ ಮನಸ್ಸು ಆ ತರುಣಿಯ ಕಡೆಗೆ ಹರಿಯದೆ ನಿಲ್ಲಲಿಲ್ಲ. ಮನಸ್ಸು ಹರಿದರೂ ತನ್ನ ದೇಹವನ್ನು ಅದಕ್ಕೆ ಅಧೀನವಾಗಿ ಮಾಡದೆ, ಖುಸ್ರುವು ತಾನು ಕುಳಿತು ಕೊಂಡಿದ್ದಲ್ಲಿ ಕುಳಿತುಕೊಂಡುಬಿಟ್ಟಿದ್ದರೆ, ಆತನು ದೈಹಿಕ ಪಾಪದಿಂದಾದರೂ ಮುಕ್ತನಾಗಿ, ಆತನ ಮನಸ್ಸಿನ ದುರ್ವಿಚಾರದ ಕಸುವೂ ಕಡಿಮೆಯಾಗ ಬಹುದಾಗಿತ್ತು; ಆದರೆ, ಹೀಗೆ ದೇಹವನ್ನು ಮನಸ್ಸಿಗೆ ಒಪ್ಪಿಸದಿರುವ ದುರ್ಧರ ಕೆಲಸವು ಖುಸ್ರುವಿನಂಥ ಸುಖ ಪುರುಷರಿಂದಂತು ಆಗುವದೇ ಇಲ್ಲ. ಅಂತೇ ಈ ಜಗತ್ತಿನಲ್ಲಿ ಪ್ರತ್ಯಕ್ಷವಾದ ಪಾಪದ ಕೃತಿಗಳು ಎಲ್ಲರಿಂದಲೂ ಆಗುತ್ತಿರುತ್ತವೆ. ಇವು ಪಾಪದ ಕೃತಿಗಳೆಂದು ಯಾರಿಗೆ ಗೊತ್ತಿರುವದಿಲ್ಲ? ಆದರೆ ಕೆಟ್ಟ ಮನಸ್ಸು ಪಾಪ ಮಾಡುವದಕ್ಕೆ ಹರಿದು ಹೋಗಲು, ಮನುಷ್ಯನು ಅದರ ಕೈಯಲ್ಲಿ ಸಿಕ್ಕು ಅದು ಎಳೆದತ್ತ ಹೋಗಿಬಿಡುವನು. ಅದರಂತೆಯೇ ಖುಸ್ರುವು ಮಂದಾಕಿನಿಯ ಕಡೆಗೆ ಹರಿಯಹತ್ತಿದ ತನ್ನ ಮನಸ್ಸಿನ ಕೈಯಲ್ಲಿ ಸಿಕ್ಕು ತನ್ನ ದೇಹವನ್ನು ಆದಕ್ಕೆ ಒಪ್ಪಿಸಿದನು. ಆಗ ಆತನು ಗುಪ್ತ ರೀತಿ ಯಿಂದ ಒಬ್ಬ ದಾಸಿಯ ಮುಖಾಂತರ ಮಂದಾಕಿನಿಯು ಗುಲಾಬಿಯ ತೋಟದಲ್ಲಿರುವದನ್ನು ತಿಳಿದು, ಅಂಜುತ್ತಂಜುತ್ತ ಅತ್ತ ಕಡೆಗೆ ನಡೆದನು. ಒಬ್ಬ ಅಬಲೆಗೆ ಅಂಜುವಷ್ಟು ಖುಸ್ರುವು ಹೇಡಿಯಿದ್ದಿಲ್ಲ; ಆ ತರುಣ ಶೂರನು ಯುದ್ಧದಲ್ಲಿ ತನ್ನ ಜೀವವನ್ನು ತೃಣಕ್ಕೆ ಬಗೆಯುವ ಎದೆಗಾರನಾಗಿದ್ದನು; ಆದರೆ ಆತನ ಕೃತಿಯು ಪಾಪಮಯವಾದದ್ದರಿಂದ, ತನ್ನನ್ನು ಯಾರು

ನೋಡುವರೋ ಎಂಬ ಭಯದಿಂದ ಆ ತರುಣನ ಹೃದಯವು ನಡುಗ ತೊಡಗಿತು. ಪಾಪಕ್ಕೆ ಅಂಜದವನು ಎಲ್ಲರಿಗೂ ಅಂಜುತ್ತಾನೆಂಬ ಮಾತು ಸುಳ್ಳಲ್ಲ. ಖುಸ್ರುವು ಕಳ್ಳನಂತೆ ಆ ಉದ್ಯಾನದಲ್ಲಿ ಮಂದಾಕಿನಿಯನ್ನು ಹುಡುಕುತ್ತಿರಲು, ಸುಂದರವಾದ ಕಟ್ಟೆಯಮೇಲೆ ನಿದ್ರೆಹೋಗಿದ್ದ ಆ ಸುಂದರಿಯು ಆತನ ಕಣ್ಣಿಗೆ ಬಿದ್ದಳು.

ಅಪೂರ್ವ ಸೌಂದರ್ಯಶಾಲಿನಿಯಾದ ಮಂದಾಕಿನಿಯು ನಿದ್ದೆಹೋದ ಶಾಂತ ಮುಖಮುದ್ರೆಯ ಮೇಲೆ ಚಂದ್ರನ ಸ್ವಚ್ಛ ಪ್ರಕಾಶವು ಬಿದ್ದದ್ದರಿಂದ, ನೋಡುವವರಿಗೆ ಆ ಪ್ರಮದೆಯು ಸ್ವರ್ಗಾಂಗನೆಯಂತೆ ತೋರುತ್ತಿದ್ದಳು; ಅದರಲ್ಲಿ ಮೋಹಿತನಾದ ಖುಸ್ರುವಿಗಂತು ಆಕೆಯ ಸೌಂದರ್ಯರಾಶಿಯು ಅಪಾರವಾಗಿ ತೋರುತ್ತಿತ್ತು. ಶಾಂತವಾದ ನಿರ್ಜನಪ್ರದೇಶವು, ಮೇಲೆ ಏಕಾಂತವು; ಆದ್ದರಿಂದ ಖುಸ್ರುವಿನ ವಿಕೃತ ಹೃದಯವು ಕ್ಷುಬ್ಧವಾಯಿತು. ಆತನು ಆಶಾಪೂರ್ಣವಾದ ಮನಸ್ಸಿನಿಂದ ಗಟ್ಟಿಯಾಗಿ ಕೂಗಿ—"ನೀನು ಇಷ್ಟು ಹತ್ತರ ಇದ್ದು ನಿನ್ನ ಈ ಸೌಂದರ್ಯವನ್ನು ನೋಡಲಿಕ್ಕೆ ನನಗೆ ಅವಕಾಶವೇ ದೊರೆಯಲಿಲ್ಲ! ಮಂದಾಕಿನೀ, ನೀನು ಎಷ್ಟು ಸುಂದರಿಯಿರುವೆಯಲ್ಲ! ಆಹಾ! ನನ್ನ ಪ್ಯಾರೀಬಾನುವು ಇಷ್ಟು ಸುಂದರಿಯಾಗಿದ್ದರೆ"—ಎಂದು ನುಡಿಯುತ್ತಿರಲು, ಆತನು ಹೀಗೆ ಬೇಕಂತ ಗಟ್ಟಿಸಿಗಟ್ಟಿಸಿ ಆಡಿದ ಮಾತುಗಳಿಂದ ಮಂದಾಕಿನಿಗೆ ಎಚ್ಚರವಾಯಿತು. ಆಕೆಯು ತಟ್ಟನೆ ಕಟ್ಟೆಯಿಂದ ಕೆಳಗೆ ಇಳಿದು ರುಷ್ಟಸ್ವರದಿಂದ ಖುಸ್ರುವನ್ನು ಕುರಿತು—"ಶಹಾಜಾದೇಸಾಹೇಬ, ನಿಮ್ಮ ಹೃದಯದ ದೊಡ್ಡಿಸ್ತನವು ಇದೇ ಏನು? ನನ್ನನ್ನು ಅಕಾಲದಲ್ಲಿ ವಿಧವೆಯಾಗಮಾಡಿಯೂ ನಿಮಗೆ ಸಮಾಧಾನವಾಗಿಲ್ಲವೆನ್ನುವ ಹಾಗೆ ತೋರುತ್ತದೆ. ನಿಮ್ಮ ಆಗಿನ ಪರೋಪಕಾರದ ವೃತ್ತಿಯು ಈಗ ಎಲ್ಲಿ ಹೋಯಿತು? ನನ್ನ ಪತಿಯ ಬಂಧವಿಮೋಚನಕ್ಕಾಗಿ ನಿಮ್ಮ ಬೆರಳೊಳಗಿನ ಉಂಗುರವನ್ನು ನೀವೇ ನನಗೆ ಕೊಟ್ಟಿದ್ದಿರಲ್ಲವೇ? ಅದರಂತೆ ಹಾದಿಯಲ್ಲಿ ಮೂರ್ಛಿತಳಾಗಿ ಬಿದ್ದುಕೊಂಡಿದ್ದ ನನ್ನನ್ನು ನೀವೇ ಕರತಂದು ನನ್ನ ಮರ್ಯಾದೆಯನ್ನು ಉಳಿಸಿದಿರಲ್ಲವೇ? ಹುಜೂರ, ಅಕಬರ ಬಾದಶಹರ ಮೊಮ್ಮಕ್ಕಳಾದ ನಿಮ್ಮ ಘನವಂತಿಕೆಗೆ ಈ ಉಪಕಾರದ ಕೃತಿಗಳು ಒಪ್ಪುತ್ತಿದ್ದರೂ, ನೀವು ನನ್ನ ಪತಿಯ ಮರಣಕ್ಕೆ ಕಾರಣವಾದದ್ದೂ, ಮೇಲೆ ಈಗ

ನನ್ನ ವಿಷಯವಾಗಿ ಪಾಪವಾಸನೆಯನ್ನು ತಾಳಿದ್ದು ತೀರ ಲಾಂಛನಾಸ್ಪದವಾಗಿರುವವು. ಆದರೆ ಖಾವಿಂದ, ನಾನು ಅನಾಥ ವಿಧವೆಯೆಂದು ತಿಳಿದು ನನ್ನನ್ನು ಕರುಣಿಸಬೇಕು! ತಮ್ಮ ಘನವಾದ ದೈವಶಾಲಿತ್ವದ ವೈಭವದ ಮುಂದೆ ನನ್ನಂಥ ಪಾಪಿಷ್ಠ ಕ್ಷುದ್ರ ವಿಧವೆಯ ಬೆಲೆಯೇನು?

ಹೀಗೆ ಮಂದಾಕಿನಿಯು ಮಾತಾಡುತ್ತಿರಲು, ಖುಸ್ರುವು ಆಶ್ಚರ್ಯಮಗ್ನನಾಗಿ ನಡುವೇ ಬಾಯಿ ಹಾಕಿ— ಮಂದಾಕಿನೀ, ನಿನ್ನ ವಿವೇಕದ ಮಾತುಗಳನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುವೆನು; ಆದರೆ ವಿಕಾರಹತನಾಗಿರುವ ನನ್ನ ವಿವೇಕವು ಕೆಲಸಕ್ಕೆ ಬಾರದ್ದಾಗಿರುವದರಿಂದ, ನಾನು ಅತ್ಯಂತ ಕ್ಷುದ್ರರಲ್ಲಿ ಗಣಿಸಲು ತಕ್ಕವನಾಗಿರುವೆನು; ವಿಕಾರದ ಮುಂದೆ ವಿಚಾರದ ಆಟವು ನಡೆಯುವದಿಲ್ಲವಾದದ್ದರಿಂದ, ಈಗ ನಾನು ಕ್ಷುದ್ರನಂತೆಯೇ ಆಚರಿಸುತ್ತಿರುವೆನು, ಅದಿರಲಿ; ಆದರೆ ನಾನು ನಿನ್ನ ಪತಿಯನ್ನು ಕೊಂದ ಆರೋಪವನ್ನು ನೀನು ನನ್ನ ಮೇಲೆ ಹೊರಿಸಿದೆಯಲ್ಲ! ಹೀಗೆ ನಿನ್ನ ಮುಂದೆ ಯಾರು ಹೇಳಿದರು? ಪ್ರಿಯ ಮಂದಾಕಿನೀ, ನಾನು ಖುದಾನ ಆಣೆ ಮಾಡಿ ಹೇಳುವೆನು, ಈ ವರೆಗೆ ನಿಷ್ಕಲಂಕವಾಗಿರುವ ನನ್ನ ಈ ಕೈಗಳು ಮನುಷ್ಯರ ರಕ್ತದಿಂದ ಕಲಂಕಿತವಾಗಿಲ್ಲ; ಅದರಂತೆ, ನನ್ನ ತಾಯಿಯ ಸದುಪದೇಶವಾದಂದಿನಿಂದ ಈ ವರೆಗೆ ನಾನು ಯಾರ ಪ್ರಾಣಹರಣ ಮಾಡಲಿಕ್ಕೂ ಆಜ್ಞಾಪಿಸಿರುವದಿಲ್ಲ, ಅನ್ನಲು, ಮಂದಾಕಿನಿಯು— "ಸರಕಾರ, ಈ ಸುದ್ದಿಯನ್ನು ಲಜಪತನು ನನ್ನ ಮುಂದೆ ಹೇಳಿದನು. ನಿಮ್ಮ ಅಪ್ಪಣೆಯಿಂದಲೇ ನನ್ನ ಪತಿಯು ವಿಷಪ್ರಯೋಗದಿಂದ ಕೈಲಾಸವಾಸಿಯಾದನಂತೆ" ಎಂದು ಹೇಳಿದಳು. ಆಗ ಖುಸ್ರುವು ಕೆಲಮಟ್ಟಿಗೆ ಆವೇಶಪೂರ್ಣ ಸ್ವರದಿಂದ— ಮಂದಾಕಿನೀ, ಇದು ತೀರ ಸುಳ್ಳು! ನೀನು ಯಾವದೋ ಭಯಂಕರವಾದ ಕೃಷ್ಣಕಾರಸ್ಥಾನದಲ್ಲಿ ಸಿಕ್ಕಿರುವದರಿಂದ ಹೀಗೆ ಏನೇನೋ ಹರಟುತ್ತಿರುವೆ. ನಿನ್ನ ಪ್ರಿಯಕರ ದುರ್ಜಯಸಿಂಹನು ಇನ್ನೂ ಜೀವದಿಂದಿರುವನೆಂದು ನಂಬು. ಇಗೋ ನೋಡು, ನಿನ್ನ ಪತಿಯು ನಿನ್ನ ಕೈಯಲ್ಲಿ ಕೊಡುವದಕ್ಕಾಗಿ ಲಜಪತನ ಕೈಯಲ್ಲಿ ಕೊಟ್ಟಿದ್ದ ಪತ್ರವಿದು. ಇದು ಇಂದು ಲಜಪತನ ಶೋಧ ಮಾಡುವಾಗ ಆತನ ಬಳಿಯಲ್ಲಿ ನನಗೆ ಸಿಕ್ಕದ್ದೊಂದು ಲಾಭವೇ ಆಯಿತು. ಈ ಪತ್ರವಿಲ್ಲದಿದ್ದರೆ, ನಿನ್ನ ಪತಿಯು ಜೀವದಿಂದಿದ್ದ ಬಗ್ಗೆ ನಿನ್ನ

ನಂಬಿಗೆಯಾಗುತ್ತಿದ್ದಿಲ್ಲ, ನಾನು ಅಪವಾದದಿಂದ ಮುಕ್ತನಾಗುತ್ತಿದ್ದಿಲ್ಲ. ದುಷ್ಟ ವಾಸನೆಯಿಂದ ಲಜಪತನು ಹೀಗೆ ಸುಳ್ಳು ಹೇಳಿ ನನ್ನನ್ನು ಅಪವಾದಕ್ಕೆ ಗುರಿಮಾಡಿದ್ದರ ಫಲವನ್ನು ಆತನು ಇನ್ನು ಉಣ್ಣುವನು; ಆದರೆ ಮಂದಾಕಿನೀ, ಮೊದಲು ಈ ಪತ್ರವನ್ನು ನೋಡು, ಎಂದು ಹೇಳಿ ಖುಸ್ರುವು ಒಂದು ಚೀಟಿಯನ್ನು ಮಂದಾಕಿನಿಯ ಕೈಯಲ್ಲಿ ಕೊಟ್ಟನು. ತನ್ನ ಪತಿಯ ಹಸ್ತಾಕ್ಷರದ ಆ ಪತ್ರವನ್ನು ನೋಡಿ ಮಂದಾಕಿನಿಯ ಸಂಶಯ ನಿವೃತ್ತಿಯಾಗಿ ಲಜಪತನ ದುರಾಚಾರಪ್ರವೃತ್ತಿಯನ್ನು ನೆನಿಸಲು, ಆತನು ಹೀಗೆ ಸುಳ್ಳು ಹೇಳಿದ್ದರಕಾರಣವು ಆಕೆಗೆ ಮನದಟ್ಟಾಯಿತು. ಆಕೆಯು ಪಶ್ಚಾತ್ತಾಪದಿಂದ ಖುಸ್ರುವಿಗೆ ಕೈಜೋಡಿಸಿ– "ಶಹಾಜಾದೇಸಾಹೇಬ, ನಾನು ನಿಷ್ಕಾರಣ ನಿಮ್ಮಮೇಲೆ ಅಪವಾದ ಹೊರಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದಳು

ಮಂದಾಕಿನಿಯ ಈ ವಿನಯೋಕ್ತಿಯನ್ನು ಕೇಳಿ ಖುಸ್ರುವು ಮನಸ್ಸಿನಲ್ಲಿ— "ಇದು ಒಳ್ಳೇ ಸುಪ್ರಸಂಗವಾಗಿರುತ್ತದೆ. ಇದೇ ಕಾಲದಲ್ಲಿ ನನ್ನ ಹೇತುವು ಸಾಧಿಸಿದರೆ ನೋಡಬೇಕು" ಎಂದು ಯೋಚಿಸಿ ಅವಸರದಿಂದ ಮಂದಾಕಿನಿಯನ್ನು ಕುರಿತು— "ಮಂದಾಕಿನೀ, ನಿನ್ನನ್ನು ಬರಿಯ ಕ್ಷಮಿಸುವದಕ್ಕೇ ಏಕೆ, ನಿನ್ನ ಸಮಾಧಾನಕ್ಕಾಗಿ ಬೇಕಾದದ್ದನ್ನು ಮಾಡಲು ನಾನು ಸಿದ್ಧನಿರುವೆನು; ಆದರೆ ನೀನು ನನ್ನ ಬೇಗಮೆಯಾಗಬೇಕೆಂದು ಮಾತ್ರ ಸ್ಪಷ್ಟವಾಗಿ ಹೇಳುವೆನು. ಹಿಂದಕ್ಕೆ ನೀನು ಆ ಗುಹೆಯಲ್ಲಿ ನನ್ನ ಚಿತ್ತಹರಣ ಮಾಡಿದಾಗ ನಾನು ನನ್ನ ಮನಸ್ಸನ್ನು ಬಿಗಿಹಿಡಿದು ನಿನ್ನನ್ನು ಬಿಟ್ಟು ಹಾಗೆಯೇ ಬಂದೆನು; ಆದರಂತೆ, ನೀನು ನನ್ನ ಬೆರಳೊಳಗಿನ ಉಂಗುರವನ್ನು ಕೇಳಲಿಕ್ಕೆ ಬಂದಾಗ, ನಿನ್ನ ಉದಾತ್ತ ಉಪದೇಶಕ್ಕೆ ಮಾನಕೊಟ್ಟು ನಿನ್ನನ್ನು ಹಾಗೆಯೇ ಹೋಗಗೊಟ್ಟೆನು; ಆದರೆ ಈಗ ಮಾತ್ರ ನನ್ನ ಮನಸ್ಸಿನ ಸಯ್ಯಮನವಾಗುವದಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಡುವೆನು. ಇನ್ನು ನೀನು ದುರ್ಜಯಸಿಂಹನ ಆಶೆಯನ್ನು ಬಿಟ್ಟು ಬಿಟ್ಟು ದಿಲ್ಲೀಶ್ವರನ ಮನೆತನದವಳಾಗು. ನನ್ನಿಂದಾಗಿರುವ ಉಪಕೃತಿಗಳನ್ನು ನೀನು ಈಗ ಸ್ಮರಿಸತಕ್ಕದ್ದು. ಇನ್ನುಮೇಲಾದರೂ ನಿನ್ನ ಸಲುವಾಗಿ ನಾನು ಏನು ಮಾಡಲೆಂಬದನ್ನು ಸ್ಪಷ್ಟವಾಗಿ ಹೇಳು. ಈಗ ನೀನು ನನ್ನ ಸಂಗಡ ನನ್ನ ಮಂದಿರಕ್ಕೆ ನಡೆ. ನಿನಗೆ ರತ್ನಾಲಂಕಾರಗಳು ಬೇಕಾಗಿದ್ದರೆ, ಗೋವಳಕೊಂಡದ ರತ್ನಗಳ

ಅಲಂಕಾರಗಳಿಂದ ನಿನ್ನ ಸರ್ವಾಂಗವನ್ನು ಮುಚ್ಚಿಬಿಡುವೆನು. ನೀನು ರಾಜರಾಜೇಶ್ವರೀಯಾಗಬೇಕೆಂದು ಇಚ್ಛಿಸುತ್ತಿದ್ದರೆ, ನಾನು ಪಿತೃದ್ರೋಹಿಯಾಗಿ ನನ್ನ ತಂದೆಯ ಮಸ್ತಕದ ಮೇಲಿನ ರತ್ನಖಚಿತವಾದ ರಾಜಮುಕುಟವನ್ನು ನಿನ್ನ ಮಸ್ತಕದ ಮೇಲೆ ಇಡುವೆನು, ಎಂದು ನುಡಿಯುತ್ತ ಮಂದಾ-ಕಿನಿಯನ್ನು ಆಲಿಂಗಿಸುವದಕ್ಕಾಗಿ ಮುಂದಕ್ಕೆ ಬಂದನು; ಆದರೆ ಅತ್ಯಂತ ಜಾಗರೂಕತೆಯಿಂದ ಇರುತ್ತಿದ್ದ ಮಂದಾಕಿನಿಯು ಹಿಂದಕ್ಕೆ ಸರಿದು, ಕೆಂಪಡರಿದ ಕಣ್ಣುಗಳಿಂದ ಖುಸ್ರುವನ್ನು ನೋಡುತ್ತ— ಖುಸ್ರೂ, ಮೊಗಲ ರಾಜವಂಶದಲ್ಲಿ ಇಂಥ ದುಷ್ಟ ಪ್ರಾಣಿಯು ಉತ್ಪನ್ನವಾಗಬಹುದೆಂದು ಯಾರೂ ಎಣಿಸಿರಲಿಕ್ಕಿಲ್ಲ! ರಾಜಪುತ್ರಾ, ನಿನ್ನ ಹೃದಯವು ಎಷ್ಟು ಕ್ಷುದ್ರವಾದದ್ದು! ನಿನ್ನ ಗೋವಳಕೊಂಡದ ರತ್ನಗಳು ನಮ್ಮಂಥ ರಜಪೂತ ಸ್ತ್ರೀಯರಿಗೆ ಬೀದಿಯೊಳಗಿನ ಕಾಡು ಕಲ್ಲುಗಳಾಗಿರುವವು. ರಕ್ತದಿಂದ ನೆನೆದಿದ್ದ ನಿಮ್ಮ ಆಗ್ರಾದ ಸಿಂಹಾಸನವನ್ನು ನಿನ್ನಂಥ ದುಷ್ಟರಲ್ಲದೆ ಧರ್ಮಿಷ್ಠರು ಇಚ್ಛಿಸಬಹುದೇ? ನೀಚ ಸ್ವಾರ್ಥಪ್ರೇರಿತವಾದ ನಿನ್ನ ಪರೋಪಕಾರ ಗುಣಕ್ಕೆ ಧಿಕ್ಕಾರವಿರಲಿ! ಖುಸ್ರೂ, ಯಾವತ್ತು ರಜಪೂತ ಸ್ತ್ರೀಯರೆಂದರೆ ಅಂಬರರಾಜ–ಕನ್ಯೆಯರೆಂದು ತಿಳಿದಿರುವಿಯೋ? ಯಾವತ್ತು ರಜಪೂತ ಪುರುಷರೆಂದರೆ ಮಾನಸಿಂಹರಿರುವರೇ? ನಿಮ್ಮ ಯವನ ವೈಭವಕ್ಕೆ ಮರುಳಾಗುವ ಸ್ತ್ರೀ-ಪುರುಷರು ನಮ್ಮ ಆರ್ಯ ಸಮುದಾಯದಲ್ಲಿ ಬಹು ಸ್ವಲ್ಪ ಜನರು ದೊರೆಯಬಹುದೆಂದು ತಿಳಿ. ಏನೇ ಇರಲಿ, ಇನ್ನು ನಾನು ನಿನ್ನ ಸಂಗಡ ಹೆಚ್ಚಿಗೆ ಮಾತಾಡಲಾರೆನು, ಬೇಗಮ ಸಾಹೇಬರು ಇಲ್ಲದಿರುವ ಸಂಧಿಯನ್ನು ನೋಡಿ ನೀನು ಹೀಗೆ ನೀಚತನ ಮಾಡುವದರಿಂದ ನಿಮ್ಮವರಾರಿಗೂ ಗೌರವವುಂಟಾಗಲಾರದು, ಹಾದಿಯ ಬಿಡು, ನಾನು ನನ್ನ ಮಂದಿರಕ್ಕೆ ಹೋಗುವೆನು.

ಎರಡನೆಯದಾವದಾದರೊಂದು ಪ್ರಸಂಗದಲ್ಲಿ ಮಂದಾಕಿನಿಯು ಈ ಮಾತುಗಳನ್ನು ಖುಸ್ರುವಿಗೆ ಆಡಿದ್ದರೆ, ಅಭಿಮಾನಿಯಾದ ಆ ಶೂರ ಖುಸ್ರುವು ಆಕೆಯನ್ನು ಆಜನ್ಮ ಕಾರಾಗೃಹದಲ್ಲಿರಿಸಲಿಕ್ಕೂ ಹಿಂದೆಮುಂದೆ ನೋಡುತ್ತಿದ್ದಿಲ್ಲ; ಆದರೆ ಈ ಕಾಲದಲ್ಲಿ ಸೈತಾನನು ಖುಸ್ರುವನ್ನು ಪೂರಾ ಅಂಧನಾಗ ಮಾಡಿದ್ದರಿಂದ ಆ ಶಹಾಜಾದಾನ ಹೃದಯದ ಸ್ವಾಭಾವಿಕವಾದ ದೊಡ್ಡಿ

ಸ್ತನವೂ, ಶೀಲವೂ, ಮರ್ಯಾದೆಯೂ, ಜ್ಞಾನವೂ ಲೋಪವಾಗಿ ಹೋಗಿದ್ದವು. ಸೌಂದರ್ಯದ ಉನ್ಮಾದದಿಂದ ಹುಚ್ಚನಾಗಿದ್ದ ಆತನು ಮಂದಾಕಿನಿಯ ಈ ಮರ್ಮಭೇದಕ ಮಾತುಗಳನ್ನು ಕೇಳದವನಂತೆ ಅಧೀರತೆಯಿಂದ ಮುಂದಕ್ಕೆ ಸರಿದು ಮಂದಾಕಿನಿಯ ಕೈಯನ್ನು ಹಿಡಿದನು. ಆಗ ಮಂದಾಕಿನಿಯು ಕೆರಳಿದ ಕರಿ ನಾಗರ ಹಾವಿನಂತೆ ಖುಸ್ರುವಿನ ಮೇಲೆ ವಿಷಕಾರುತ್ತ ಕೈ ಕೊಸರಿ ದೂರಸರಿದು ನಿಂತು ತನ್ನ ಶಾಪ ವಾಣಿಯಿಂದ ಆತನನ್ನು ಕುರಿತು— "ದುಷ್ಟಾ, ಪತಿವ್ರತೆಯ ಅಭಿಮಾನಕ್ಕೆ ಏನಾದರೂ ಬೆಲೆಯಿದ್ದರೆ, ಪತಿವ್ರತೆಯ ತೇಜಸ್ಸಿನಲ್ಲಿಯೇನಾದರೂ ಸಾಮರ್ಥ್ಯವಿದ್ದರೆ, ದುರ್ಜಯ ಸಿಂಹನ ಚರಣಗಳ ಹೊರತು ಅನ್ಯತ್ರ ನನ್ನ ದೃಷ್ಟಿಯು ಹೋಗದಿರುವದು ನಿಜವಿದ್ದರೆ ನಾನು ನಿನಗೆ ಈಗ ಕೊಡುವ ಶಾಪವು ನಿಜವಾಗಲಿ! ನನ್ನನ್ನು ಪೀಡಿಸುವ ಕಾಮಾಂಧನಾದ ಎಲೈ ನರಾಧಮನೇ, ನೀನು ರಾಜಪುತ್ರನಿರು, ಬೇರೆ ಯಾವನಾದರೊಬ್ಬ ಶ್ರೇಷ್ಠನೆಂದು ಭಾವಿಸಿದ್ದ ಪ್ರಾಣಿಯಿರು; ಆದರೆ ಒಂದಾನೊಂದು ದಿನ ನಿನ್ನ ದೋಷಯುಕ್ತ ನೇತ್ರಗಳಿಂದ ರಕ್ತಸೋರಿ ಅವು ಸೇದಿಹೋಗಿ ನೀನು ಅಂಧನಾಗುವೆ! ಇಂದು ನನ್ನ ಕಣ್ಣೀರು ಸುರಸಿದ ನೀನು ಒಂದಿಲ್ಲೊಂದು ಕಾರಣದಿಂದ ನಿರಾಧಾರನಾಗಿ ಅಳುತ್ತ ಕುಳಿತುಕೊಂಡಾಗ ಇಂದಿನ ಪ್ರಸಂಗದ ನೆನಪು ನಿನಗೆ ಆದೀತು. ಸಂತೋಷಪಟ್ಟವನ ಆಶೀರ್ವಾದವೂ, ದುಃಖಪಟ್ಟವನ ಶಾಪವೂ ಎಂದೂ ಸುಳ್ಳಾಗಲಾರವೆಂದು ಈ ಅನಾಥ ಪತಿವ್ರತೆಯು ಕಟ್ಟಕಡೆಯಲ್ಲಿ ನಿನಗೆ ಸ್ಪಷ್ಟವಾಗಿ ಹೇಳುವೆನು." ಎಂದು ದುಃಖಾವೇಗದಿಂದ ಮಂದಾಕಿನಿಯು ಇನ್ನೂ ಏನೇನೋ ಮಾತಾಡುತ್ತಿರಲು, ಅಷ್ಟರಲ್ಲಿ ಒಬ್ಬ ದೀರ್ಘಕಾಯದ ಪುರುಷನು ವೇಗದಿಂದ ಬಂದು ಖುಸ್ರುವನ್ನು ಭರದಿಂದ ಹಿಂದಕ್ಕೆ ದೂಡಿದನು. ಆಗ ಜೋಲಿಹೋಗಿ ಖುಸ್ರುವು ಹಿಂದಕ್ಕೆ ಒಂದು ಕಾರಂಜಿಯ ಕಟ್ಟಿಗೆ ಬೀಳಲು, ಮೂರ್ಛೆಬಂದು ಆತನು ವೈಮರೆತನು. ಆಗ ಮಂದಾಕಿನಿಯು ಆಶ್ಚರ್ಯಮಗ್ನಳಾಗಿ ತನಗೆ ಸಹಾಯ ಮಾಡಿದವನ ಕಡೆಗೆ ನೋಡುತ್ತಿರುವಾಗ ಒಬ್ಬ ಭವ್ಯಾಕಾರದ ಫಕೀರನು ಆಕೆಯ ಕಣ್ಣಿಗೆ ಬಿದ್ದನು. ಆತನ ಮುಖವು ಉದ್ದವಾದ ಗಡ್ಡ ಮೀಸೆಗಳಿಂದ ಮುಚ್ಚಿಹೋಗಿದ್ದರೂ, ಸಿಟ್ಟಿನಿಂದ ಕೆಂಪಾದ ಆತನ ಮುದ್ರೆಯು ಸೂಕ್ಷ್ಮ ರೀತಿಯಿಂದ ನೋಡುವವರಿಗೆ ಸ್ಪಷ್ಟ

ವಾಗಿ ಕಾಣುತ್ತಿತ್ತು. ಆತನ ಕಣ್ಣುಗಳಿಂದಂತು ಕಿಡಿಗಳು ಹಾರುತ್ತಿರುವಂತೆ ಭಾಸವಾಗುತ್ತಿತ್ತು. ಮಂದಾಕಿನಿಗೆ ಮಾತಾಡಲು ಏನೂ ಅವಕಾಶ ಕೊಡದೆ ಫಕೀರನು ಆಕೆಯನ್ನು ಕುರಿತು ಗಂಭೀರ ಸ್ವರದಿಂದ— ನೀನು ಪಿಟ್ಟೆಂದು ಮಾತಾಡದೆ ನನ್ನ ಸಂಗಡ ನಡೆ; ಯಾಕೆಂದರೆ ಈಗ ನಿನ್ನ ಮೇಲೆ ಭಯಂಕರ ಸಂಕಟಬರುವ ಸಂಭವವಿದೆ.” ಎಂದು ನುಡಿದು, ಉದ್ಯಾನದಿಂದ ಸಾಗ-ಹತ್ತಿದನು. ಮಂದಾಕಿನಿಯೂ ಆತನನ್ನು ಹಿಂಬಾಲಿಸಿ ನಡೆದಳು. ಫಕೀರನ ಬಳಿಯಲ್ಲಿ ಶಹಾಜಾದಾನ ಹೆಸರಿನ ಮುದ್ರಿಕೆಯಿದ್ದದ್ದರಿಂದ ಬಾಗಿಲ ಕಾವಲು ಗಾರರು ಬಾಗಿಲು ತೆರೆದು ಸನ್ಮಾನಪೂರ್ವಕವಾಗಿ ಅವರನ್ನು ಹೋಗಗೊಟ್ಟರು. ಫತ್ತೇಪುರವನ್ನು ಬಿಟ್ಟು ಅರ್ಧ ಹರದಾರಿ ಹೋಗುವ ವರೆಗೆ ಯಾರೂ ಮಾತಾಡಲಿಲ್ಲ; ಆದರೆ, ತನ್ನನ್ನು ಸಂಕಟದಿಂದ ಮುಕ್ತಮಾಡಿದ ಈತನು ಯಾರಿರಬಹುದೆಂದು ತಿಳಿಯುವ ಆತುರತೆಯಿಂದ ಮಂದಾಕಿನಿಯು ಫಕೀರ ನನ್ನು ಕುರಿತು— ಮಹಾತ್ಮನ್, ಆಭಾಗಿನಿಗೆ ತಮ್ಮ ಪರಿಚಯವಾಗುವದು ಶಕ್ಯವಿರುವದೋ, ಎಂದು ಕೇಳಲು, ಫಕೀರನು— ಮಂದಾಕಿನೀ, ಅವಸರ ಮಾಡಬೇಡ. ನಾನು ನಿನಗೆ ಅಪರಿಚಿತನಲ್ಲ. ನನ್ನಿಂದ ನಿನಗೆ ಯಾವ ಬಗೆಯ ತೊಂದರೆಯೂ ಆಗಲಾರದು. ಈಗ ಸುಮ್ಮನೆ ನಡೆ. ನಿರ್ಭಯ ಸ್ಥಳಕ್ಕೆ ಮುಟ್ಟಿದಬಳಿಕ ನಾನು ನಿನಗೆ ಎಲ್ಲ ಸಂಗತಿಯನ್ನು ಹೇಳುವೆನು.

ಫಕೀರನು ಹೀಗೆ ತನ್ನನ್ನು ಹೆಸರುಗೊಂಡು ಕರೆದದ್ದಕ್ಕಾಗಿಯಂತು ಮಂದಾಕಿನಿಗೆ ಪರಮಾಶ್ಚರ್ಯವಾಯಿತು. ಸಾಧು-ಸತ್ಪುರುಷರೂ, ಫಕೀರರು, ಸನ್ಯಾಸಿಗಳು ಮೊದಲಾದ ದೇವಭಕ್ತ ಮಹಾಪುರುಷರೂ ಅಂತಜ್ಞಾನಿ ಗಳಿರುವರೆಂದು ತಿಳಿದು ಆಕೆಯು ಸಮಾಧಾನ ಮಾಡಿಕೊಂಡಳು. ಫಕೀರನು ಮಂದಾಕಿನಿಯೊಡನೆ ಒಂದೆರಡು ಹರದಾರಿ ಹೋದಬಳಿಕ ಒಂದು ಹಳ್ಳಿಯೊಳ ಗಿನದೊಂದು ಮನೆಯನ್ನು ಹೊಕ್ಕನು. ಆಗ ಬೆಳಗಾಗಲಿಕ್ಕೆ ಇನ್ನು ಮೂರು ತಾಸು ರಾತ್ರಿ ಇರಬಹುದು. ಫಕೀರನು ಮನೆಯೊಳಗೆ ಹೋದಬಳಿಕ ತನ್ನ ಉಡಿಗೆತೊಡಿಗೆಗಳನ್ನಷ್ಟೇ ಅಲ್ಲ, ಉದ್ದವಾದ ತನ್ನ ಗಡ್ಡಮೀಸೆಗಳನ್ನೂ ತೆಗೆದು ಮಂದಾಕಿನೀಯ ಮುಂದೆ ನಿಂತುಕೊಂಡನು. ಆಗ ಮಂದಾಕಿನಿಯು “ಮರಣ ಹೊಂದಿದೆನೆಂ”ದು ತಾನು ದುಃಖಿಸುತ್ತಿದ್ದ ತನ್ನ ಪತಿಯೇ ತನ್ನ ಮುಂದೆ ನಿಂತುಕೊಂಡದ್ದನ್ನು ನೋಡಿ ಪರಮಾಶ್ಚರ್ಯಪಟ್ಟಳು. ಆಕೆಯು

ತನ್ನ ಪತಿಯನ್ನು ಕುರಿತು—“ಆಗ ತಮ್ಮ ದನಿಯು ಗುರುತು ನನಗೆ ಹತ್ತಿದಹಾಗೆಯಾದರೂ, ತಮ್ಮ ವೇಷವನ್ನೂ, ತಾವು ಅಲ್ಲಿಗೆ ಬರುವದರ ಅವಶ್ಯಕತೆಯನ್ನೂ ಮನಸ್ಸಿನಲ್ಲಿ ತಂದು, ತಾವೇ ಫಕೀರನ ವೇಷ ಹಾಕಿಕೊಂಡು ಬಂದಿರಬಹುದೆಂಬ ತರ್ಕವು ನನ್ನ ಮನಸ್ಸಿನಲ್ಲಿ ಉತ್ಪನ್ನವಾಗಲೇ ಇಲ್ಲ; ಆದರೆ ತಾವು ಈ ವೇಷದಿಂದ ಆ ಬಾದಶಾಹೀ ಜನಾನಖಾನೆಯಲ್ಲಿ ಹೇಗೆ ಬಂದಿರಬಹುದು? ನನ್ನ ಅನುಭವಕ್ಕೆ ಬರುತ್ತಿರುವ ಈ ಎಲ್ಲ ಸಂಗತಿಯು ಸ್ವಪ್ನವಿರಬಹುದೇ ಎಂಬ ಸಂಶಯವು ಈಗಲೂ ನನ್ನಲ್ಲಿ ಉತ್ಪನ್ನವಾಗುತ್ತದೆ, ಎಂದು ಹೇಳಿದಳು. ತನ್ನ ಹೆಂಡತಿಯ ಈ ಮಾತುಗಳನ್ನು ಕೇಳಿ ದುರ್ಜಯಸಿಂಹನು— ಪ್ರಿಯೆ, ನನ್ನ ವೃತ್ತಾಂತವನ್ನು ಸ್ವಲ್ಪದರಲ್ಲಿ ಹೇಳುವೆನು ಕೇಳು. ಹಿಂದಕ್ಕೆ ನಿನ್ನ ಮುಂದೆ ಹೇಳಿದಂತೆ ಕಾರಾಗೃಹದಿಂದ ಎಂದೂ ಓಡಿಹೋಗಲಿಕ್ಕಿಲ್ಲವೆಂಬ ನಿಶ್ಚಯದಿಂದ ನಾನು ಕಾರಾಗೃಹದಲ್ಲಿಯೇ ಇರುತ್ತಿದ್ದೆನು; ಆದರೆ ಒಂದು ದಿವಸ ನಮ್ಮ ಗುರುಗಳಾದ ಬೋಧಾನಂದ ಮಹಾರಾಜರು ನನ್ನ ಕನಸಿನಲ್ಲಿ ಬಂದು— “ದುರ್ಜಯ, ನೀನು ಇಂದು ಬೆಳಗಾಗುವದರೊಳಗೆ ಕಾರಾಗೃಹದಿಂದ ಹೊರಟು ಹೋಗಿ ನಾಳೆ ರಾತ್ರಿ ಫತ್ತೇಪುರ ಸಿಕರಿಯೊಳಗಿನ ಖುಸ್ರುವಿನ ಮಂದಿರದಲ್ಲಿ ಇರತಕ್ಕದ್ದು. ನನ್ನ ಈ ಅಪ್ಪಣೆಯನ್ನು ಮೀರಬೇಡ. ಈ ಮಾತು ನನ್ನ ಮನಸ್ಸಿಗೆ ಬಂದಿರುವದೆಂಬದಕ್ಕೆ ಸಾಕ್ಷಿಯನ್ನು ಹೇಳುವೆನು ಕೇಳು. ನೀನು ಈಗಲೇ ಎದ್ದು ಕಾರಾಗೃಹದ ಬಾಗಿಲಿಗೆ ಹೋಗು, ಅದು ತೆರೆದಿರುವದು, ಎಂದು ಹೇಳಿ, ನನ್ನನ್ನು ಕೈಹಿಡಿದು ಎಬ್ಬಿಸಿದಂತಾಗಿ ನನಗೆ ಎಚ್ಚರವಾಯಿತು. ಕೂಡಲೆ ನಾನು ಬಾಗಿಲಿಗೆ ಹೋಗಲು, ಅದು ನಿಜವಾಗಿಯೇ ತೆರೆದಿತ್ತು. ಸದ್ಗುರುಗಳ ಈ ಕರುಣಾಶಾಲಿತ್ವವನ್ನೂ, ಮಹಾಮಹಿಮೆಯನ್ನೂ ನೋಡಿ ಆಶ್ಚರ್ಯಪಟ್ಟು, ಭಕ್ತಿಪರವಶನಾಗಿ ನಾನು ಅದೇ ಕಾಲಲ್ಲಿ ಎದ್ದು ಹಾಗೆಯೇ ಹೊರಟು ಬಂದು ಬಿಟ್ಟೆನು. ಮಂದಾಕಿನೀ, ಏನು ಆಶ್ಚರ್ಯವೋ ತಿಳಿಯದು; ನಾನು ದುರ್ಗದ ಯಾವ ಬಾಗಿಲಿಗೆ ಹೋದರೂ, ನೀನು ಕೊಟ್ಟಿದ್ದ ಈ ಖುಸ್ರುವಿನ ಉಂಗುರದ ಮೂಲಕ ನನಗೆ ಯಾವ ಬಗೆಯ ಪ್ರತಿಬಂಧವೂ ಇಲ್ಲದೆ ನಾನು ದುರ್ಗದ ಹೊರಗೆ ಬಂದುಬಿಟ್ಟೆನು. ನಾನು ಬರುವಾಗ ಕಾರಾಗೃಹದ ಒಂದು ಮಾಡದಲ್ಲಿ ಇಟ್ಟಿದ್ದ ನಿನ್ನ ವಿವಾಹದ ಕಾಲದ ಉಂಗುರವನ್ನು ಮರೆತುಬಂದೆನು.

ಮಂದಾಕಿನೀ, ನೀನು ಫತ್ತೇಪುರ ಸಿಕ್ರಿಯಲ್ಲಿ ಇದ್ದೀ ಎಂಬದರ ಗಂಧ ವಾದರೂ ನನಗೆ ಹತ್ತುವ ಸಂಭವವಿರುವದೆಯೋ? ಆದರೆ ನಾನು ಕೇವಲ ಗುರ್ವಾಜ್ಞೆಯೆಂದು ತಿಳಿದು ಫಕೀರನ ವೇಷದಿಂದ ಫತ್ತೇಪುರದೊಳಗಿನ ಖುಸ್ರುವಿನ ಮಂದಿರವನ್ನು ಪ್ರವೇಶಿಸಿದೆನು. ಖುಸ್ರುವಿನ ಈ ಉಂಗುರವು ನನಗೆ ಬಹಳವಾಗಿ ಉಪಯೋಗಿಸಿತು. ಇದು ನನ್ನ ಬಳಿಯಲ್ಲಿ ಇದ್ದದ್ದರಿಂದ ಎಲ್ಲಿಯೂ, ಯಾವ ಬಗೆಯ ಪ್ರತಿಬಂಧವೂ ಆಗಲಿಲ್ಲ. ಖುಸ್ರುವಿನ ಮಂದಿರ ವನ್ನು ನಾನು ಪ್ರವೇಶಿಸಿ, ಆತನು ಕುಳಿತುಕೊಳ್ಳುತ್ತಿರುವ ಕೋಣೆಯೊಳಗೂ ಹೋದೆನು; ಆದರೆ ಆತನು ಆಗ ನಿನ್ನ ಬಳಿಗೆ ಬಂದಿರಲು, ನನಗೆ ಹೇಗೆ ಭೆಟ್ಟಿಯಾಗುವನು? ನಾನು ಅಲ್ಲಿ ಇರುವ ಕಾಗದಪತ್ರಗಳನ್ನು ಶೋಧಿಸು ತ್ತಿರುವಾಗ, ಖುಸ್ರುವಿನ ನಾಶಕ್ಕೆ ಕಾರಣವಾದ ಖುಸ್ರುವಿನ ಹಸ್ತಾಕ್ಷರದ ಒಂದು ಪತ್ರವು ನನಗೆ ಸಿಕ್ಕಿತು. ನಮ್ಮಿಬ್ಬರ ವಿಯೋಗಕ್ಕೆ ಕಾರಣನಾದ ಖುಸ್ರುವಿನ ನಾಶದ ಆ ಪತ್ರವು ಸಿಕ್ಕದ್ದರಿಂದ ನನಗೆ ಬಹಳ ಸಮಾಧಾನ ವಾಯಿತು. ಇದಕ್ಕಾಗಿಯೇ ಶ್ರೀ ಗುರುಗಳು ನನಗೆ ಇಲ್ಲಿಗೆ ಬರಹೇಳಿದ್ದ ರೆಂದು ತಿಳಿದು, ನನ್ನ ಬಂದ ಕೆಲಸವಾಯಿತೆಂದು ನಾನು ಇನ್ನು ಆ ಮಂದಿರ ದಿಂದ ಹೊರಟು ಹೋಗತಕ್ಕವನು; ಅಷ್ಟರಲ್ಲಿ ಆ ಮಂದಿರದ ಬಳಿಯಲ್ಲಿ ಏನೋ ಮನುಷ್ಯರ ಬಾಯಿಯಾದಂತೆ ನನಗೆ ಕೇಳಿತು. ಮಂದಾಕಿನೀ, ಶ್ರೀ ಗುರುಗಳ ಸಂಕೇತದ ನೆಲೆಯು ಯಾರಿಗೆ ಹತ್ತಬೇಕು? ಆ ಗುಲಾಬಿಯ ಉದ್ಯಾನಕ್ಕೆ ಹೋಗಲು ನನ್ನ ಮನಸ್ಸು ತವಕಿಸಹತ್ತಿದ್ದರಿಂದ, ನಾನು ತಟ್ಟನೆ ಎದ್ದು ಅಲ್ಲಿಗೆ ಬಂದೆನು. ಆಗ ನಿನ್ನ ದನಿಯು ಗುರುತು ಹತ್ತಿ ನನಗೆ ಬಹಳ ಆಶ್ಚರ್ಯವಾಯಿತು. ನಾನು ಇದೇನು ಆಶ್ಚರ್ಯವೆಂದು ಮೆಲ್ಲನೆ ಸಪ್ಪಳಾಗ ದಂತೆ ಹೆಜ್ಜೆಗಳನ್ನಿಡುತ್ತ ನಿಮ್ಮ ಸಮೀಪಕ್ಕೆ ಬಂದು ಗಿಡಗಳ ಮರೆಯಲ್ಲಿ ನಿಮ್ಮ ಮಾತುಗಳನ್ನು ಕೇಳುತ್ತ ನಿಂತುಕೊಂಡೆನು; ಆದರೆ ಪ್ರಿಯೆ ಮಂದಾ ಕಿನೀ, ನೀನು ಪರಮ ಧನ್ಯಳು. ಅಂಥ ವಿಪತ್ಕಾಲದಲ್ಲಿಯೂ ನೀನು ನಿನ್ನ ಪಾತಿವ್ರತ್ಯದ ತೇಜಸ್ಸನ್ನು ಪ್ರಕಟ ಮಾಡಿದೆ! ನಿನ್ನ ಆ ಸಾಧ್ವೀತ್ವವನ್ನು ನೋಡಿ ನಾನು ನನ್ನನ್ನು ಧನ್ಯನೆಂದು ಭಾವಿಸಿದೆನು. ಪ್ರಿಯೆ, ನಿಮ್ಮಂಥ ಕುಲಸ್ತ್ರೀಯರ ಕೈಹಿಡಿಯಬೇಕಾದರೆ ಅಪಾರವಾದ ಪ್ರಾಚೀನ ಪುಣ್ಯ- ರಾಶಿಯು ಬೇಕು ಕಂಡೆಯಾ? ಆಗಿನ ಕಾಲದ ಖುಸ್ರುವಿನ ನೀಚವೃತ್ತಿ

ಯನ್ನು ನೋಡಿ ನನಗೆ ಪರಮ ಸಂತಾಪವಾಯಿತು. ಆ ಸಂತಾಪದ ಭರದಿಂದಲೇ ನಾನು ಆತನನ್ನು ಭರದಿಂದ ಹಿಂದಕ್ಕೆ ದೂಡಿದೆನು. ಅಲ್ಲಿಂದ ಮುಂದೆ ನಡೆದ ಸಂಗತಿಯು ನಿನಗೆ ಗೊತ್ತೇ ಇರುವದು.

ತನ್ನ ಪತಿಯ ಈ ಮಾತುಗಳನ್ನು ಕೇಳಿ ಮಂದಾಕಿನಿಯು ಆಶ್ಚರ್ಯ ಪಡುತ್ತ ಸದ್ಗುರುವಿನ ಮಹಿಮೆಯನ್ನೂ, ತಮ್ಮ ಮೇಲಿನ ಆತನ ದಯಾ ವಿಶೇಷವನ್ನೂ ಮನಸ್ಸಿನಲ್ಲಿ ತಂದು, ಶ್ರೀಗುರು ಚರಣದಲ್ಲಿಯ ತನ್ನ ಭಕ್ತಿಯನ್ನು ಮತ್ತಿಷ್ಟು ಧೃಢೀಕರಿಸಿ ಸದ್ಗುರುವನ್ನು ಮನಸಾ ಶತಶಃ ವಂದಿಸಿದಳು. ಆಕೆಯು ತನ್ನ ಪತಿಯನ್ನು ಪ್ರೇಮದೃಷ್ಟಿಯಿಂದ ನೋಡುತ್ತ– "ಅಪ್ಪಯ್ಯಾ! ಈ ಸಂಸಾರದಲ್ಲಿ ತಾರಕವಾದದ್ದೇನಾದರೂ ಇದ್ದರೆ ಅದು ಸದ್ಗುರು ಚರಣ ದ್ವಯವೇ ಸರಿ! ಈ ಕಲಿಯುಗದಲ್ಲಿಯೂ ಇಂಥ ಸಾಕ್ಷಿಯು ಪ್ರತ್ಯಕ್ಷ ಅನುಭವಕ್ಕೆ ಬರುವದನ್ನು ನೋಡಿದರೆ, ಜಗತ್ತಿಗೆ ಆಧಾರವಾದದ್ದೊಂದು ಅಲೌಕಿಕ ಶಕ್ತಿಯು ಇದ್ದೇ ಇದ್ದು, ಜಗದ್ವ್ಯವಹಾರಕ್ಕೆಲ್ಲ ಒಂದಿಲ್ಲೊಂದು ಬಗೆಯಿಂದ ಅದೇ ಶಕ್ತಿಯು ಕಾರಣವಾಗಿರುತ್ತದೆಂದು ಹೇಳಬೇಕಾಗುವದು. ನಾವು ಅಂಥ ಆ ಅದ್ಭುತಶಕ್ತಿಯ ಸದ್ಗುರುರೂಪ ವಿಭೂತಿಯನ್ನು ದುರ್ಲಕ್ಷಿಸಿ, ಬಗೆಬಗೆಯ ಅಜ್ಞಾನದ ಯಾತನೆಗಳಿಗೆ ಗುರಿಯಾಗುತ್ತಿರುವೆವು; ಆದರೆ ಪತಿದೇವಾ, ನಡೆಯಿರಿ, ನಾವು ಮೊದಲು ಸದ್ಗುರುಚರಣ ದರ್ಶನವನ್ನು ಮಾಡಿಕೊಳ್ಳೋಣ. ಆ ಕರುಣಾಮಯನ ದಯವು ನಮ್ಮ ಮೇಲೆ ಆಗದಿದ್ದರೆ ಈ ವಿಪತ್ತಿನ ಪ್ರಸಂಗದಲ್ಲಿ ನಾವು ಏನಾಗಿ ಹೋಗುತ್ತಿದ್ದೆವೋ ಯಾರಿಗೆ ಗೊತ್ತು! ನಡೆಯಿರಿ, ಇದೇ ಕಾಲದಲ್ಲಿ ಹೀಗೆಯೇ ಹೋಗಿ ನಾವಿಬ್ಬರೂ ಶ್ರೀ ಗುರುಚರಣಗಳಲ್ಲಿ ಮಸ್ತಕವನ್ನಿಡೋಣ! ಎಂದು ಹೇಳಲು, ದುರ್ಜಯ ಸಿಂಹನು— ಮಂದಾಕಿನೀ, ನೀನಂದಂತೆಯೇ ಮಾಡೋಣ. ನಮ್ಮಂಥ ಸಂಸಾರಾಸಕ್ತರ ಸಂಸಾರಾಸಕ್ತಿಯು ಬಲವತ್ತರವಾದದ್ದರಿಂದ, ನಮ್ಮ ಮನಸ್ಸು ಶ್ರೀ ಗುರುಚರಣದ ನಿಷ್ಠೆಯನ್ನು ಆಗಾಗ್ಗೆ ಕಳೆದುಕೊಳ್ಳುತ್ತಿರುವದು; ಹೀಗಾಗಬಾರದೆಂತಲೇ ಭಯಕೃದ್ಭಯನಾಶಕನಾದ ಸದ್ಗುರುವು ನಮ್ಮ ಕರ್ಮವನ್ನು ನೆವಮಾಡಿ ಆಗಾಗ್ಗೆ ಭಯವನ್ನು ತೋರಿಸಿ, ಆ ಭಯವನ್ನು ತನ್ನ ಮಹಿಮೆಯಿಂದ ದೂರಮಾಡಿ ಪುನಃ ಪುನಃ ನಮ್ಮ ಮನಸ್ಸನ್ನು ತನ್ನ ಚರಣಗಳ ಕಡೆಗೆ ಎಳೆದುಕೊಳ್ಳುತ್ತಿರುವನು; ಈ ಅನುಭವವನ್ನು ಮನಸ್ಸಿನಲ್ಲಿ

ಸ್ಥಿರವಾಗಿ ಇಟ್ಟುಕೊಂಡು ಶ್ರೀ ಗುರುಚರಣದಲ್ಲಿ ನಿಷ್ಠೆಯನ್ನೂ, ಆತನ ಅಲೌಕಿಕ ಸಾಮರ್ಥ್ಯದಲ್ಲಿ ವಿಶ್ವಾಸವನ್ನೂ ಇಟ್ಟು ಎಚ್ಚರಗೇಡಿಗಳಾಗದೆ ನಾವು ನಡೆದುಕೊಳ್ಳತಕ್ಕದ್ದು. ನಡೆ, ನೀನು ಹೇಳಿದಂತೆ ಈಗಲೇ ಶ್ರೀಗುರುಗಳ ಸನ್ನಿಧಿಗೆ ಹೋಗುವಾ ನಡೆ, ಸದ್ಗುರು ಕೃಪಾರೂಪವಾದ ಭದ್ರ–ಕವಚಯನ್ನು ತೊಟ್ಟಿರುವ ನಮ್ಮನ್ನು ಯಾವ ವಿಪತ್ತು ಸೋಂಕಿ ಏನು ಮಾಡೀತು? ಬೆಳಕಿನ ಮುಂದೆ ಕತ್ತಲೆಯು ನಿಲ್ಲಬಹುದೇ ?" ಅನ್ನಲು, ಮಂದಾಕಿನಿಯು ತನ್ನ ಬೆರಳಲ್ಲಿ ಇಟ್ಟುಕೊಂಡಿದ್ದ ವಿವಾಹ ಕಾಲದ ಉಂಗುರವನ್ನು ತನ್ನ ಪತಿಯ ಕೈಯಲ್ಲಿ ಕೊಟ್ಟು, ಲಜಪತನ ನೀಚತನವನ್ನೂ, ಅಕಸ್ಮಾತ್ ತನಗೆ ಖುಸ್ರುವಿನಿಂದಾದ ಸಹಾಯವನ್ನೂ, ಇಸ್ತಾಂಬೂಲಿ, ಅಥವಾ ರೂಮಿ-ಬೇಗಮೆಯಿಂದ ತನಗಾದ ಸೌಜನ್ಯದ ಉಪಕೃತಿಯನ್ನೂ, ಕಾಮುಕನಾದ ಖುಸ್ರುವು ಕಡೆಗೆ ಪ್ರಕಟಗೊಳಿಸಿದ ಕ್ಷುದ್ರ ಹೃದಯದ ಕೃತಿಯನ್ನೂ ಸಾದ್ಯಂತವಾಗಿ ಹೇಳಿದಳು. ಬಳಿಕ ಅವರು ಎಲ್ಲಿಯೂ ನಿಲ್ಲದೆ ತಮ್ಮ ಗುರುಗಳ ಪವಿತ್ರವಾದ ಆಶ್ರಮವನ್ನು ಕುರಿತು ತೆರಳಿದರು; ಆದರೆ ಸದ್ಗುರುಗಳಾದ ಬೋಧಾನಂದರು ಆಶ್ರಮದಲ್ಲಿರದೆ, ಎಲ್ಲಿಯೋ ಹೋಗಿಬಿಟ್ಟಿದ್ದರು !



## ೧೬ನೆಯ ಪ್ರಕರಣ

# ತಾಯಿಯ ಕರಳು !



ಯಮುನಾನದಿಯ ಎರಡನೆಯ ದಂಡೆಯಮೇಲೆ ಸಲೀಮನದೊಂದು ಮನೋಹರವಾದ ಉದ್ಯಾನ ಪ್ರಾಸಾದವಿದ್ದಿತು. ಆ ಪ್ರಾಸಾದದ ಹೆಸರು "ಶಾಹಿಮಂಜಿಲ" ಎಂಬದಾಗಿತ್ತು. ಸಲೀಮನ ಪಟ್ಟದರಸಿಯಾದ ಶಾಹಿ-ಬೇಗಮೆಯು, ಅಥವಾ ಜೋಧಬಾಯಿಯ ಹೆಸರನ್ನು ಆ ಪ್ರಾಸಾದಕ್ಕೆ ಇಟ್ಟಿದ್ದರು. ಅಜ್ಜಿಯು ಮರಣಹೊಂದಿದಬಳಿಕ ತಂದೆಯ ಸಂಗಡ ಪ್ರೇಮ ದಿಂದ ನಡೆಯಹತ್ತಿದ್ದ ಸಲೀಮನು, ಹಲವು ತಿಂಗಳು ಆಗ್ರಾದ ರಾಜ-ಮಂದಿರದಲ್ಲಿಯೇ ಇರುತ್ತಿದ್ದನು; ಆದರೆ ಕೃಷ್ಣಕಾರಸ್ಥಾನದಿಂದ ತುಂಬಿ ಹೋಗಿದ್ದ ರಾಜಪ್ರಾಸಾದದಲ್ಲಿ ಹೀಗೆ ಹೆಚ್ಚು ದಿವಸ ನಿಃಸಹಾಯ ಸ್ಥಿತಿಯಲ್ಲಿ ರುವದು ಆತನಿಗೆ ಸಾಹಸದ ಕೆಲಸವಾಗಿ ತೋರಹತ್ತಿತು. ಇಂಥ ಸಾಹಸ ಮಾಡುವದು ಯೋಗ್ಯವಲ್ಲೆಂದು ಸಲೀಮನ ಮಿತ್ರರೂ ಆತನಿಗೆ ಆಗಾಗ್ಗೆ ಉಪದೇಶಿಸತೊಡಗಿದರು. ಮಾನಸಿಂಹ - ಅಜೀಮಖಾನರು ತನಗೆ ಯಾವ ಕಾಲದಲ್ಲಿ ಏನು ಮಾಡಿಯಾರೆಂಬ ನಂಬಿಗೆಯು ಸಲೀಮನಿಗೆ ಇದ್ದಿಲ್ಲ. ಅದರಲ್ಲಿ, ಅಕಬರಬಾದಶಹನು ತಾನು ಬೇನೆ ಬಿದ್ದಾಗಿನಿಂದ ತನ್ನ ಬಾಲ ಮಿತ್ರನಾದ ಅಜೀಮಖಾನನ ಕೈಯಲ್ಲಿಯೇ ಬಹುತರ ಯಾವತ್ತು ರಾಜ್ಯ ಸೂತ್ರಗಳನ್ನು ಕೊಟ್ಟಿದ್ದನು. ಇಂಥ ಹಲವು ಪ್ರತಿಕೂಲ ಸಂಗತಿಗಳನ್ನು ಮನಸ್ಸಿನಲ್ಲಿ ತಂದು ಸಲೀಮನು ಇತ್ತಿತ್ತ ಆಗ್ರಾದ ಅರಮನೆಯನ್ನು ಬಿಟ್ಟು ಮೇಲೆ ಹೇಳಿದ ಶಾಹೀಮಂಜಿಲಿನಲ್ಲಿ ಇರತೊಡಗಿದ್ದನು. ಆಗ್ರಾ ಪಟ್ಟಣ ದೊಳಗಿನ ದೊಡ್ಡ ದೊಡ್ಡ ಅಮೀರ ಉಮರಾವರು ಸಲೀಮನ ಪಕ್ಷದವ ರಾಗಿದ್ದರು. ಅವರೆಲ್ಲರ ಆಲೋಚನೆಯಿಂದಲೇ ಆತನು ಆಗ್ರಾದ ಅರಮನೆ ಯನ್ನು ಬಿಟ್ಟಿದ್ದನೆಂದು ಹೇಳಬಹುದು. ಆ ಶಾಹೀಮಂಜಿಲಿನಲ್ಲಿ ಇರುವದ ರಿಂದ ದಿನಾಲು ಬಾದಶಹರ ದರ್ಶನಕ್ಕೆ ಬರಲು ಸಲೀಮನಿಗೆ ತೊಂದರೆಯೂ ಆಗುತ್ತಿದ್ದಿಲ್ಲ. ಒಟ್ಟಿಗೆ, ಸಲೀಮನು ಶಾಹೀಮಂಜಿನಲ್ಲಿ ಇರಹತ್ತಿದಾಗಿನಿಂದ ಒಳಿತಾಗಿ ಮನಃಶಾಂತಿಯನ್ನು ಪಡೆದಿದ್ದನೆಂದು ಹೇಳಬಹುದು.

ಈ ಶಾಹೀಮಂಜಿಲಿನಲ್ಲಿ ಸೇಲೀಮನೂ, ಆತನ ಪ್ರೀಯತಮ ಪತ್ನಿಯಾದ ಜೋಧಬಾಯಿಯೂ ಇಬ್ಬರೇ ಇರುತ್ತಿದ್ದರು. ಇವರಿಬ್ಬರಿಂದ ಹೊರತಾದ ಜನರೆಂದರೆ, ಅವಶ್ಯದ ಗುಲಾಮರೂ, ದಾಸಿಯರೂ ಅವರ ಬಳಿಯಲ್ಲಿ ಇರುತ್ತಿದ್ದರು. ಆನೆಯ ಕಾಳಗವಾದಬಳಿಕ ಬಾದಶಹನ ಅಪ್ಪಣೆಯಂತೆ ಖುಸ್ರುವು ಕೂಡಲೆ ಫತ್ತೇಪುರಸಿಕಂಗೆ ಹೊರಟುಹೋದ ಸುದ್ದಿಯು ಸೇಲೀಮ-ಜೋಧ ಬಾಯಿಯರಿಬ್ಬರಿಗೂ ಗೊತ್ತಾಗಿತ್ತು. ಸುಲ್ತಾನ ಸೇಲೀಮನಿಗೆ ಅದಕ್ಕಾಗಿ ಸ್ವಲ್ಪವಾದರೂ ವಿಷಾದವಾಗಲಿಲ್ಲ; ಆದರೆ ಖುಸ್ರುವಿನ ತಾಯಿಯಾದ ಶಾಹಿ ಬೇಗಮೆಗೆ, ಅಥವಾ ಜೋಧಬಾಯಿಗೆ ಅಂತ್ಯಂತ ದುಃಖವಾಗಿ, ದುಸ್ಸಹ ಮರ್ಮವೇದನೆಯಿಂದ ಆಕೆಯು ತಳಮಳಿಸತೊಡಗಿದಳು; ಆನೆಯ ಕಾಳಗ ದಲ್ಲಿ ಮನಸ್ಸು ನೊಂದುಹೋಗಿದ್ದ ತನ್ನ ಪತಿಯು ತನ್ನ ಮಗನನ್ನು ಪುನಃ ಪ್ರೀತಿಸುವದು ಅಶಕ್ಯವೆಂದು ಆಕೆಯ ಭಾವನೆಯಾಗಿತ್ತು. ತನ್ನ ಅಣ್ಣನಾದ ಮಾನಸಿಂಹನ ಮೇಲೆ ಜೋಧಬಾಯಿಯ ನಿಜವಾದ ವಿಶ್ವಾಸವಿದ್ದಿಲ್ಲ. ತನ್ನ ಮಗನ ಮನಸ್ಸನ್ನು ಕೆಡಿಸಿದವನೇ ತನ್ನ ಅಣ್ಣನೆಂದು ಆಕೆಯು ತಿಳಿದಿದ್ದಳು. ಸೇಲೀಮನ ಹಲವು ಜನ ಬೇಗಮೆಯರಲ್ಲಿ ಇನ್ನೊಬ್ಬ "ಜಗತ್‌ಬಾಯಿ" ಎಂಬ ರಜಪೂತ ಬೇಗಮೆಯೊಬ್ಬಳಿದ್ದಳು. ಆಕೆಯು ಮಾರವಾಡದ ಅರಸನಾದ ಉದೇಸಿಂಗನ ಮಗಳಿದ್ದು, ಮುಂದೆ ಸೇಲೀಮನ ತರುವಾಯ ಪಟ್ಟಕ್ಕೆ ಬಂದು ಶಹಾಜಹಾನನೆಂದು ಕರೆಯಲ್ಪಟ್ಟ "ಖುರುಮ" ಎಂಬ ಶಹಾಜಾದನ ತಾಯಿಯಾಗಿದ್ದಳು; ಆದರೂ ಜೋಧಬಾಯಿಯಷ್ಟು ಪ್ರೀತಿಪಾತ್ರಳಾದ ಬೇಗಮೆಯು ಸೇಲೀಮನಿಗೆ ಮತ್ತೊಬ್ಬಳಿದ್ದಿಲ್ಲ. ಅಕಬರಬಾದಶಹನ ತರುವಾಯ ಜೋಧಬಾಯಿಯೇ ಹಿಂದುಸ್ಥಾನದ ಸಾಮ್ರಾಜ್ಞಿಯಾಗುವಳೆಂದು ಎಲ್ಲರ ನಂಬಿಗೆಯಾಗಿತ್ತು; ಆದರೆ ಮಗನಾದ ಖುಸ್ರುವಿನ ಉದ್ಧತ ಕೃತಿಗಳಿಂದ ಜೋಧಬಾಯಿಯು ಯಾವಾಗಲೂ ದುಃಖಿತಳಾಗಿಯೇ ಇರುತ್ತಿದ್ದಳು. ಆ ಸಾಧ್ವಿಯ ಸೌಂದರ್ಯ, ಸದ್ಗುಣ, ಪತಿಪ್ರೇಮ ಇವು ಅವರ್ಣನೀಯವಾದದ್ದರಿಂದ, ಎಲ್ಲ ಸೊಸೆಂದಿರಿಗಿಂತಲೂ ಈ ಜೋಧ ಬಾಯಿಯನ್ನೇ ಅಕಬರಬಾದಶಹನು ವಿಶೇಷವಾಗಿ ಪ್ರೀತಿಸುತ್ತಿದ್ದನು; ಆದರೆ ಏನಿದ್ದು ಏನು ಮಾಡಬೇಕು? ಅವ್ಯವಸ್ಥಿತ ಚಿತ್ತನಾದ ಮಗನ ಕಾಲಲ್ಲಿ ಜೋಧಬಾಯಿಯ ಜೀವನವು ಬಹು ದುಃಖಮಯವಾಯಿತು!

ಜೋಧಬಾಯಿಯು ಅತ್ಯಂತ ಪತಿನಿಷ್ಠಳಾಗಿದ್ದಳೆಂಬದನ್ನು ಆಗಾಗ್ಗೆ ನಾವು ಹೇಳಿರುವೆವು; ಆಕೆಯ ಈ ಅತ್ಯಂತ ನಿಷ್ಠೆಯ ಮೂಲಕವಾಗಿ ರಾಜಕಾರಣದ ಕುಟಿಲ ತಂತ್ರದಿಂದ ತನ್ನ ಪತಿಗೆ ಎಲ್ಲಿ ಅಪಾಯವಾಗುವದೋ ಎಂಬ ಚಿಂತೆಯೊಂದು ಆಕೆಯನ್ನು ಯಾವಾಗಲೂ ಬಾಧಿಸುತ್ತಲಿತ್ತು. ಪತಿಯು ಬೇಗನೆ ಮನೆಗೆ ಬಾರದಿದ್ದರೆ ಚಿಂತೆ, ಬೇಗನೆ ಬಂದರೆ ಚಿಂತೆ; ನಿತ್ಯದಲ್ಲಿ ಬಾದಶಹನ ಪ್ರಕೃತಿಯನ್ನು ನೋಡಲಿಕ್ಕೆ ಹೋಗುವ ಪತಿಯು ಎಂದಾದರೊಂದು ದಿನ ಹೋಗದಿದ್ದರೆ ಚಿಂತೆ, ನಡುವೆ ಮತ್ತೊಮ್ಮೆ ಹೋದಗೀದರೆ ಚಿಂತೆ! ಹೀಗೆ ಜೋಧಾಬಾಯಿಯು ಯಾವಾಗಲೂ ಸಣ್ಣಪುಟ್ಟ ಮಾತಿನಿಂದಲೂ ಚಿಂತೆಯಿಂದ ಕೊರಗುತ್ತಿದ್ದಳು. ಒಂದುದಿನ ಸೇಲೀಮನು ಬಾದಶಹರ ಪ್ರಕೃತಿಯನ್ನು ನೋಡಲಿಕ್ಕೆ ಹೋಗಿ ಬಹಳ ಹೊತ್ತಾದರೂ ಬರಲಿಲ್ಲ; ಆಗ ಜೋಧಬಾಯಿಯ ಮನಸ್ಸು ಅಸ್ವಸ್ಥವಾಗಿ ಆಕೆಗೆ ಏನೂ ತೋಚದಾಯಿತು. ಆಕೆಯ ಹೃದಯವು ಇಲ್ಲದ ಭಯಂಕರ ವಿಚಾರಗಳಿಂದ ತಳಮಳಿಸಹತ್ತಿತು. "ಮನಸ್ಸು ಚಿಂತಿಸುವಷ್ಟು ಕೆಡಕನ್ನು ವೈರಿಯೂ ಚಿಂತಿಸಲಿಕ್ಕಿಲ್ಲೆಂದು" ಹೇಳುವ ಮಾತು ಸುಳ್ಳಲ್ಲ. ಚಿಂತೆಯಿಂದ ಆಕೆಯ ಮುಖವು ಬಾಡಿತು. ಆಕೆಯ ಮುಖವನ್ನು ಪ್ರಫುಲ್ಲಿತವಾಗಿ ಮಾಡುವದಕ್ಕಾಗಿ ದಾಸಿಯು ವೀಣಾ–ಸಾರಂಗಿಗಳ ಮಧುರ ಸ್ವರದಲ್ಲಿ ಮಾಡಿದ ಸಂಗೀತದ ಮಧುರಾಲಾಪವು ವ್ಯರ್ಥವಾಯಿತು; ಯಮುನಾನದಿಯ ಮೇಲಿನ ಸೀತಲ ವಾಯುವಿನ ಸೋಂಕಿನಿಂದಲೂ ಆಕೆಯ ಹೃದಯವು ಶಾಂತವಾಗಲಿಲ್ಲ. ಆಕೆಯು ತನ್ನ ಮನಸ್ಸಿನಲ್ಲಿ— ಹಾಯ್! ನಾನು ಅಂಬರರಾಜವಂಶದಲ್ಲಿ ಯಾಕೆ ಉತ್ಪನ್ನವಾಗಿರಬಹುದು? ಅಕಬರಬಾದಶನ ಹಸೊಸೆಯಾಗಬೇಕೆಂದು ನನ್ನ ಹಣೆಬರಹದಲ್ಲಿ ವಿಧಿಯು ಯಾಕೆ ಬರೆದಿರಬಹುದು? ಏನೋ ಆದದ್ದಾಗಿ ಹೋಯಿತು, ಇಂಥ ಕುಲಕಲಂಕ ಮಗನು ಯಾಕೆ ಉತ್ಪನ್ನವಾಗಿರಬಹುದು? ಅದರಂತೆ ಈ ಕೃಷ್ಣ ಕಾರಸ್ಥಾನದ ಮಾನಸಿಂಹನ ತಂಗಿಯಾದರೂ ನಾನು ಯಾಕೆ ಆಗಿರಬಹುದು? ಹಾಯ! ಹಾಯ! ಈ ಎದುರಿಗೆ ದೀಪಜ್ಯೋತಿಗಳಿಂದ ಪ್ರಕಾಶಿಸುವ ಬಾದಶಹನ ಅರಮನೆ, ಆ ಅರಮನೆಯ ದೀಪಪ್ರಕಾಶಗಳು ಪ್ರತಿಬಿಂಬಿಸಿರುವ ಈ ಯಮುನೆಯ ಪ್ರವಾಹ ಇವುಗಳಾವವೂ ನನ್ನ ಹೃದಯದ ತಾಪವನ್ನು ಕಡಿಮೆ ಮಾಡಲೊಲ್ಲವಲ್ಲ! ಹೀಗೆ ಯಾಕಾಗುತ್ತಿರ

ಬಹುದು! ನನ್ನ ಸರ್ವಸ್ವದ ಘಾತವಾಯಿತೆಂದು ನಾನು ತಿಳಿದುಕೊಳ್ಳ ಬೇಕೇನು! ಕೃಷ್ಣ ಕಾರಸ್ಥಾನದ ನೀಚರ ಬಲೆಯಲ್ಲಿ ಸಿಕ್ಕು ಸುಲ್ತಾನ ಸೇಲೀಮರು ಸೆರೆಯಾಳಾಗಿರಲಿಕ್ಕಿಲ್ಲವಷ್ಟೆ? ಅಥವಾ ನನ್ನ ಅಡ್ಡಹಾದಿಯ ಎಟ್ಟ ಹುಡುಗನು—ಮೊಗಲ ರಾಜಕುಲಕಲಂಕ ಖುಸ್ರುವು ತನ್ನ ತಾಯಿಗೆ ಅಕಾಲದಲ್ಲಿ ವೈಧವ್ಯವನ್ನುಂಟುಮಾಡಬೇಕೆಂದು ರಕ್ತದಿಂದ ಕೆಂಪಾಗಿರುವ ತನ್ನ ಕೈಗಳಿಂದ ರಾಜಮುಕುಟವನ್ನು ತನ್ನ ಮಸ್ತಕದಲ್ಲಿ ಧರಿಸಿರಲಿಕ್ಕಿಲ್ಲವಷ್ಟೆ? ಹಾಯ! ಹತಭಾಗ್ಯನಾದ ಪೋರನೇ! ಘಾತ ಮಾಡಿದೆ! ಸರ್ವಸ್ವದ ಘಾತ ಮಾಡಿದೆ!!

ಈ ಮೇರೆಗೆ ನುಡಿಯುತ್ತಿರಲು, ಹಿಂಬದಿಯ ಕತ್ತಲದ ಖಂಬದ ಮರೆ ಯಿಂದ ಯಾರೊ—"ಹತಭಾಗ್ಯನಾದ ಖುಸ್ರೂ, ನಿಜವಾಗಿಯೇ ನೀನು ಸರ್ವಸ್ವದ ಘಾತ ಮಾಡಿದೆಯೇನು?" ಎಂದು ಉಚ್ಚರಿಸಿದ ಶಬ್ದಗಳು ಜೋಧಬಾಯಿಯ ಕಿವಿಗಳಿಗೆ ಬಿದ್ದವು. ಆಗ ಆಕೆಯು ಚಕಿತ ನೇತ್ರ ಗಳಿಂದಲೂ, ಕಂಪಿತ ಹೃದಯದಿಂದಲೂ ಹಿಂದಿರುಗಿ ನೋಡುತ್ತಿರಲು, ಹತ್ತರದ ಕೆಂಪು ಸಂಗಮರವರಿಯ ಕಲ್ಲಿನ ಖಂಬದ ಮರೆಯಿಂದ ಒಂದು ವ್ಯಕ್ತಿಯು ಮೆಲ್ಲಮೆಲ್ಲನೆ ಆಕೆಯ ಕಡೆಗೆ ಸಾಗಿ ಬರತೊಡಗಿತು. ಶಾಹಿಯು ಸಂಶಯಿತ ಮನಸ್ಸಿನಿಂದಲೂ, ಭಯಕಂಪಿತ ಸ್ವರದಿಂದಲೂ ಆ ವ್ಯಕ್ತಿಯನ್ನು ಕುರಿತು—"ಯಾರಿರುವಿರಿ ಮಾತಾಡಿರಿ" ಎಂದು ನುಡಿಯುತ್ತ ಸ್ವಲ್ಪ ಮುಂದಕ್ಕೆ ಹೋಗಲು, ಸ್ವತಃ ಸುಲ್ತಾನ ಸೇಲೀಮನೇ ಆಕೆಯ ಕಡೆಗೆ ಸಾಗಿ ಬರುತ್ತಲಿದ್ದನು. ಆತನು ಶಾಹಿಯ ಆ ಸ್ಥಿತಿಯನ್ನು ನೋಡಿ—"ಶಾಹೀ, ನೀನು ಅಂಜಿದೆಯೋ ಏನು?" ಎಂದು ಕೇಳಲು, ಶಾಹೀ-ಬೇಗಮೆಯು ಆನಂದದಿಂದ ಸೇಲೀಮನನ್ನು ಅಪ್ಪಿಕೊಂಡು ಪ್ರಸನ್ನ ಮುದ್ರೆಯಿಂದ—

ಶಾಹಿ— ಆಹಹ! ಈಗ ನನ್ನ ಹೃದಯವು ಶಾಂತವಾಯಿತು. ತಾವು ಬಂದದ್ದರಿಂದ ನನ್ನ ಅಂಜಿಕೆಯೆಲ್ಲ ದೂರವಾಯಿತು. ನೀವು ಬರುವದಕ್ಕೆ ವಿಲಂಬವಾಗಲು ಇಲ್ಲದ ಕುಕಲ್ಪನೆಗಳಿಂದ ನನ್ನ ಹೃದಯವು ಸುಡತೊಡ ಗಿತ್ತು. ಪ್ರಿಯತಮ! ನಿಜವಾಗಿಯೇ ನಾನು ಆ ಕಲ್ಪನಾಮಯ ವಾತಾ-ವರಣದಲ್ಲಿ ಸಿಕ್ಕು ಪೂರಾ ಅಂಜಿ ಹೋಗಿದ್ದೆನು.

ಸೇಲೀಮ— ಶಾಹೀ, ಕದಾಚಿತ್ ನೀನು ಹೀಗೆ ತಿಳಕೊಂಡಿರ-

ಬಹುದು.—“ಮಾನಸಿಂಹ ಅಜೀಮುಖಾನರ ಕಾರಸ್ಥಾನದಲ್ಲಿ ಸಿಕ್ಕು ನಾನು ಸೆರೆಯಾಳಾಗಿರಬಹುದು; ಇಲ್ಲವೆ ನಿನ್ನ ಹೊಟ್ಟೆಯು ಅಚ್ಛೆಯು ಮಗನಾದ ಖುಸ್ರುವು ತನ್ನ ತಂದೆಯು ರಕ್ತದಿಂದ ಕಲಂಕಿತವಾದ ಕೈಯಿಂದ ತನ್ನ ಮಸ್ತಕದ ಮೇಲೆ ರಾಜಮುಕುಟವನ್ನು ಧರಿಸಬಹುದು” ಯಾಕೆ ಶಾಹೀ, ಹೀಗೆಯೇ ಅಲ್ಲವೇ ನೀನು ಕಲ್ಪಿಸಿದ್ದು ?

ಶಾಹಿ—(ಏನೂ ಮುಚ್ಚಿ ಇಡದೆ) ಹೌದು ನಾಥ, ನನಗೆ ಅಕ್ಷರಶಃ ಹೀಗೆಯೇ ತೋರಿತ್ತು! ಹಾಯ! ಹೀಗೆ ನನ್ನ ಮನಸ್ಸಿನ ಸ್ಥಿತಿಯು ಯಾಕಾಗಿರಬಹುದು! ಖುದಾ, ನನ್ನನ್ನು ಈ ವೇದನೆಯಿಂದ ಮುಕ್ತಳಾಗ ಮಾಡು!! ನನ್ನಿಂದ ಈ ತಾಪವನ್ನು ಸಹಿಸುವದು ಇನ್ನು ಆಗದು.

ಸೇಲೀಮ (ಶಾಹಿಯ ಮನಸ್ಸಿಗೆ ಹತ್ತುವದಕ್ಕಾಗಿ ಕಠೋರ ಸ್ವರದಿಂದ)—ಇಲ್ಲ ಶಾಹೀ, ನಿನ್ನ ಈ ಅಂಜಿಕೆಯು ಇಷ್ಟರಲ್ಲಿ ಕಡಿಮೆಯಾಗುವದಿಲ್ಲ. ಮೊಗಲ ಸಿಂಹಾಸನದ ಸಲುವಾಗಿ ನನಗೂ, ಖುಸ್ರುವಿಗೂ ಉಂಟಾಗಿರುವ ವಿತುಷ್ಟತೆಯು ಕಡೆಯ ನಿರ್ಣಯವಾಗುವವರೆಗೆ ನೀನು ಹೀಗೆಯೇ ತಳಮಳಿಸುತ್ತಿರುವದೇ ಸರಿ. ಖುಸ್ರುವನ್ನು ಸೆರೆಹಿಡಿದು ಗ್ವಾಲ್ಹೇರಿಯ ಕೋಟೆಗೆ ಕಳಹುವವರೆಗೆ ನಿನ್ನ ಈ ಅಂಜಿಕೆಯು ಕಡಿಮೆಯಾಗಲಾರದು. ಕದಾಚಿತ್ ಅಕಬರಬಾದಶಹರ ಮರಣದವರೆಗೆ ನೀನು ಭಯಭೀತವಾದ ಅಂತಃಕರಣದಿಂದ ಪ್ರತಿಒಂದು ದಿವಸವನ್ನು ಕಳೆಯಬೇಕಾದೀತು. ಒಳ್ಳೆಯದು, ಅದೆಲ್ಲ ಒತ್ತಟ್ಟಿಗಿರಲಿ; ಆದರೆ ಜೋಧಾ, ನಿಜವಾಗಿ ಹೇಳು, ಸಾಮ್ರಾಟ್-ಪತ್ನಿಯಾಗುವದರಲ್ಲಿ ನಿನಗೆ ಹೆಚ್ಚು ಆನಂದವೂ, ಸುಖವೂ, ಜೀವನ ಸಾರ್ಥಕತೆಯೂ ಇರುವದೋ ? ಅಥವಾ ರಾಜಮಾತೆಯಾಗುವದರಲ್ಲಿ ಹೆಚ್ಚು ಆನಂದವಿರುವದೋ ?

ಶಾಹೀಬೇಗಮ (ಕಂಪಿತ ಸ್ವರದಿಂದ)—ಇಲ್ಲ, ನನಗೆ ಯಾರು ಆಗುವ ಮನಸ್ಸೂ ಇಲ್ಲ. ನನಗೆ ಕೇವಲ ತಮ್ಮ ಶಾಂತಿಮಯ-ವಿಪತ್ಶೂನ್ಯ,-ಉತ್ಸಾಹಯುಕ್ತ ಜೀವನವು ಬೇಕಾಗಿರುವದು. ಅಕಬರಬಾದಶಹನ ಸೊಸೆಯಾಗಿ, ತಮ್ಮ ಶಾಹೀಬೇಗಮಳಾಗಿ ಯಾವ ಸುಖ, ಯಾವ ಸನ್ಮಾನ, ಯಾವ ಐಶ್ವರ್ಯಗಳನ್ನು ನಾನು ಭೋಗಿಸುತ್ತ ಬಂದಿರುವೆನೋ, ಅದೇ ಸುಖ, ಅದೇ ಸನ್ಮಾನ, ಅದೇ ಐಶ್ವರ್ಯಗಳು ನನ್ನ ಜನ್ಮವಿರುವತನಕ

ನನಗೆ ಬೇಕಾಗಿರುವವು; ನನಗೆ ಬೇರೆ ಯಾತರ ಅಪೇಕ್ಷೆಯೂ ಇರುವದಿಲ್ಲ. ನಾಥ, ಖುದಾನು ತಮ್ಮ ಜೀವನವನ್ನು ನಿಷ್ಕಂಟಕವಾಗಿ ಮಾಡಲಿ. ಇದನ್ನೇ ಆತನ ಬಳಿಯಲ್ಲಿ ನಾನು ನಿತ್ಯದಲ್ಲಿ ಪ್ರಾರ್ಥಿಸುತ್ತಿರುವೆನು.

ತನ್ನ ಪ್ರೀಯಳ ಈ ಮಾತುಗಳನ್ನು ಕೇಳಿ ಸೇಲೀಮನು ಮೇಘಾವೃತವಾದ ಚಂದ್ರ ಪ್ರಕಾಶಯುಕ್ತ ವಿಸ್ತೀರ್ಣ ಆಕಾಶದಕಡೆಗೂ, ಶ್ಯಾಮಸಲೀಲೆಯೂ, ಮೃದುತರಂಗಯುಕ್ತಳೂ ಆದ ಯಮುನೆಯ ಕಡೆಗೂ ನೋಡಿ ಒಮ್ಮೆ ನಿಟ್ಟುಸಿರು ಬಿಟ್ಟು—

ಸೇಲೀಮ—ಇಲ್ಲ ಶಾಹೀಬೇಗಮ ಖುದಾನು ನಿನಗೆ ಭವಿಷ್ಯಕಾಲದಲ್ಲಿ ಇಷ್ಟು ಸುಖವನ್ನು ಕೊಡುವನೋ ಇಲ್ಲವೋ ಎಂಬ ಬಗ್ಗೆ ನನಗೆ ಸಂಶಯವೇ ಉಂಟಾಗುತ್ತಲಿದೆ. ನನ್ನ ಎಟ್ಟೆ ಮಗನು ಎಲ್ಲರ ಕಣ್ಣೆದುರಿಗೆ ನನ್ನನ್ನು ಅವಮಾನಗೊಳಿಸಿ ಹೆಚ್ಚು ಗರ್ವಿಷ್ಠನಾಗಿರುವನೆಂದು ನೀನು ಕೇಳಿರಬಹುದು. ಆತನು ತನ್ನ ಈ ಅಪರಾಧಕ್ಕಾಗಿ ನನ್ನ ಬಳಿಗೆ ಕ್ಷಮೆ ಬೇಡಿಕೊಳ್ಳಲಿಕ್ಕೆ ಬಾರದಿರುವದರಿಂದ, ಆತನು ರಾಜಾ ಮಾನಸಿಂಗನನ್ನೂ, ಅಜೀಮಖಾನನನ್ನೂ ಕೂಡಿಕೊಂಡಿರಬಹುದೆಂದು ನಾನು ತರ್ಕಿಸುತ್ತಿರುವೆನು. ಅಜೀಮಖಾನ ಕೋಕೋನೇ ಈಗ ರಾಜಭಾಂಡಾರದ ಮಾಲಕನಾಗಿದ್ದು, ಆದರ ಕೀಲೀಯ ಕೈಯೂ ಅವನ ಕೈಸೇರಿರುತ್ತದೆ. ತಂದೆಮಕ್ಕಳೊಳಗಿನ ನಮ್ಮ ಈ ತಿಕ್ಕಾಟದ ಕಟ್ಟಕಡೆಯ ಪರಿಣಾಮದ ಸುದಿವಸದ ಹಾದಿಯನ್ನೇ ನಾನು ನೋಡುತ್ತಿರುವೆನು. ಪ್ರೀಯೇ ನಾನು ನನ್ನ ಪಿತೃದ್ರೋಹದ ಪಾಪಕೃತ್ಯದ ಫಲವನ್ನು ಭೋಗಿಸುತ್ತಿರುವನೆಂಬದರಲ್ಲಿ ಸಂಶಯವಿಲ್ಲ; ಆದರೆ ನನ್ನ ಆ ಉದಾರ ಹೃದಯದ ಪ್ರೇಮಲ ಸ್ವಭಾವದ ತಂದೆಯ ಚರಣಗಳಿಗೆರಗಿ ಕೃತಾಪರಾಧಕ್ಕಾಗಿ ನಾನು ಕ್ಷಮೆಯನ್ನು ಬೇಡಿಕೊಂಡದ್ದರಿಂದ ಈಗ ಆತನು ನನ್ನನ್ನು ಸಂಪೂರ್ಣವಾಗಿ ಕ್ಷಮಿಸಿರುವನು; ಆದರೆ ಶಾಹೀ, ಬಾದಶಹರ ಅಂತಃಕರಣದಲ್ಲಿರುವಷ್ಟು ಕ್ಷಮಾಗುಣವು ನನ್ನ ಹೃದಯದಲ್ಲಿ ಸರ್ವಥಾ ಇರುವದಿಲ್ಲವೆಂಬದನ್ನು ನೀನು ಚನ್ನಾಗಿ ಲಕ್ಷದಲ್ಲಿಡು.

ತನ್ನ ಪ್ರೀಯಕರನ ಮುಖದಿಂದ ಹೊರಟ ಈ ಯಾವತ್ತು ಭಯಾನಕ ಮಾತುಗಳನ್ನು ಕೇಳಿ ಶಾಹೀಬೇಗಮೆಯ ಅಂತಃಕರಣವು ಖುಸ್ರುವಿನ ಸಲುವಾಗಿ ಕಳವಳಗೊಂಡಿತು. ಆಕೆಯು ಕೆಲಹೊತ್ತು ಸುಮ್ಮನೆಯಿದ್ದು,

ಬಳಿಕ ತನ್ನ ಪತಿಯನ್ನು ಕುರಿತು— "ನಾಥ, ಹಾಗಾದರೆ ಅಪರಾಧಿಯಾದ ನನ್ನ ಹುಚ್ಚ ಖುಸರುವು ತಮ್ಮ ಚರಣಗಳಿಗೆರಗಿ ಕ್ಷಮೆಯನ್ನು ಬೇಡಿಕೊಂಡರೆ ತಾವು ಕ್ಷಮಿಸುವದಿಲ್ಲವೆ ?" ಎಂದು ಕೇಳಲು, ಸೇಲೀಮನು ಒಮ್ಮೆ ನಿಟ್ಟು ಸಿರು ಬಿಟ್ಟು— "ಇಲ್ಲ ಪ್ರೀಯೇ, ನನ್ನ ಮನಸ್ಸಿನಲ್ಲಿ ಕ್ಷಮಿಸುವದಿದ್ದರೂ ನಾನು ಆತನನ್ನು ಕ್ಷಮಿಸುವದು ಶಕ್ಯವಿಲ್ಲವು," ಎಂದು ಹೇಳಿದನು. ಭಾಗ್ಯಹೀನ ಳಾದ ಬೇಗಮೆಯು ತನ್ನ ಪ್ರೀಯಕರನ ಮುಖದಿಂದ ಹೊರಟ ಈ ವಾಕ್ಯ ಗಳನ್ನು ಕೇಳಿ ಬಹಳವಾಗಿ ಅಂಜಿದಳು. ತನ್ನ ಆಚ್ಛೆಯ ಖುಸ್ರುವು ಈಗ ತೀರ ನಿರಾಧಾರನಾದನೆಂದು ಆಕೆಯು ತಿಳಿದಳು. ಸ್ವಲ್ಪ ಹೊತ್ತಿನ ಮೊದಲು ತನ್ನ ಪತಿಯ ಸುರಕ್ಷಿತತೆಯ ಸಲುವಾಗಿ ಚಿಂತಿಸುತ್ತಿದ್ದ ಜೋಧಬಾಯಿಯು, ಈಗ ಮಗನ ಸುರಕ್ಷಿತತೆಯ ಸಲುವಾಗಿ ಚಿಂತಿಸತೊಡಗಿದಳು. ಆಕೆಯ ಮನಸ್ಸಿನಲ್ಲಿ ಇಲ್ಲದ ಕೆಟ್ಟ ವಿಚಾರಗಳು ಬರತೊಡಗಿದವು. ಅದನ್ನು ಹೇಳ ಲಿಕ್ಕೆ ವಿಲಂಬವಾದರೂ, ಕ್ಷಣಮಾತ್ರದಲ್ಲಿ ಅವು ಆಕೆಯ ಮನಸ್ಸಿನಲ್ಲಿ ಹೊಳೆದು ಹೋಗುತ್ತಿದ್ದವು. ಆಕೆಯು ಭಯದಿಂದ ಕಣ್ಣು ಮುಚ್ಚಿಕೊಂಡು ಹೀಗೆ ಭಯಂಕರ ಕಲ್ಪನೆಗಳನ್ನು ಕಲ್ಪಿಸುತ್ತಿರುವಾಗ ಆಕೆಯ ಮನಸ್ಸಿನಲ್ಲಿ— "ತನ್ನ ಪತಿಯು ದಿಲ್ಲಿಯ ಸಿಂಹಾಸನದ ಮೇಲೆ ಕುಳಿತಂತೆಯೂ, ತನ್ನ ಅಪರಾಧಿಯಾದ ಮಗನು ಆತನ ಮುಂದುಗಡೆಯಲ್ಲಿ ನಿಲ್ಲಿಸಲ್ಪಟ್ಟಂತೆಯೂ, ಆ ಅಪರಾಧಿಯಾದ ಮಗನ ಸುತ್ತುಮುತ್ತು ಆತನ ಶಿರಚ್ಛೇದ ಮಾಡುವದ ಕ್ಕಾಗಿ ತೀಕ್ಷ್ಣಧಾರೆಯ ಚಪ್ಪಕೊಡಲಿಗಳನ್ನು ಹಿಡಕೊಂಡು ಕ್ರೂರರಾದ ಸೇವಕರು ಅಪ್ಪಣೆಯ ಹಾದಿಯನ್ನು ನೋಡುತ್ತ ನಿಂತಂತೆಯೂ, ಎಲ್ಲ ಸಭಾಸದರು ಭಯವಿಹ್ವಲರಾಗಿರಲು, ಸೇಲೀಮನ ಅಪ್ಪಣೆಯಿಂದ ಖುಸ್ರು ವಿನ ರಕ್ತಮಯ ಶಿರಸ್ಸು ದಿವಾಣ ಆಮದ ದರ್ಬಾರದ ಶಿಲಾತಲದಲ್ಲಿ ತುಂಡರಿಸಿ ಬಿದ್ದಂತೆಯೂ ಕಲ್ಪನೆಯಾಗಲು, ಆಕೆಯು ತನ್ನ ಕೈಗಳಿಂದ ಕಣ್ಣುಗಳನ್ನು ಮತ್ತಿಷ್ಟು ಗಟ್ಟಿಯಾಗಿ ಮುಚ್ಚಿಕೊಂಡು ತನ್ನ ಪತಿಯನ್ನು ಕುರಿತು ಕನಿಕರದಿಂದ ಕೂಗಿ— ಹಾ ! ನಾಥ, ತಾವು ಪ್ರಭುಗಳಿರುವಿರಿ, ಸಾಮರ್ಥ್ಯಸಂಪನ್ನರೂ ಇರುವಿರಿ. ತಮ್ಮ ಮುಂದೆ ಯಃಕಶ್ಚಿತ ಸ್ತ್ರೀಯಾದ ನಾನು ಏನು ಮಾಡಲಿ ? ಆದರೆ ನನಗೆ ಸುಖವನ್ನಾಗಲಿ—ದುಃಖವನ್ನಾಗಲಿ ಕೊಡುವದು ನಿಮ್ಮ ಕೈಯಲ್ಲಿಯೇ ಇರುತ್ತದೆ. ನಾನು ಸಂಕಟದಲ್ಲಿರುವಾಗ ಶಾಂತಿಯನ್ನುಂಟುಮಾಡುವವರು ನೀವೇ ಇರುತ್ತೀರಿ. ಸ್ವಾಮಿನ್, ದಯಾಲು

ಪ್ರೀಯಕರಾ, ನನ್ನನ್ನು ರಕ್ಷಿಸಿರಿ ರಕ್ಷಿಸಿರಿ !! ನನ್ನಿಂದ ಈ ದುಃಖವನ್ನು ಸಹಿಸುವದು ಆಗುವದಿಲ್ಲ. ನನ್ನ ಹೃದಯವು ತೀರ ಛಿನ್ನವಿಛಿನ್ನವಾಗಿ ಹೋಗಿರುವದು. ನನ್ನ ಸರ್ವಾಂಗದಲ್ಲಿ ಪ್ರಖರವಾದ ಜ್ವಾಲಾಮಯ ವಿದ್ಯುಜ್ಜ್ಯೋತಿಯು ಸಂಚರಿಸತೊಡಗಿದ್ದು, ನಾನು ಅದರ ಉಷ್ಣತೆಯಿಂದ ಕ್ಷಣಕ್ಷಣಕ್ಕೆ ಹೆಚ್ಚು ಹೆಚ್ಚು ಕ್ಷೀಣವಾಗತೊಡಗಿರುವೆನು. ಪ್ರೀಯಕರ, ನನ್ನ ಈ ಅಂಜಿಕೆಯನ್ನು ದೂರಮಾಡಿ ನನ್ನನ್ನು ರಕ್ಷಿಸಿರಿ !

ಈ ಮೇರೆಗೆ ನುಡಿದು ಶಾಹೀಬೇಗಮೆಯು ಕಣ್ಣುತೆರೆದು ಸುತ್ತು ಮುತ್ತು ನೋಡಲು, ಆಕೆಗೆ ಶೇಲೀಮನು ಎಲ್ಲಿಯೂ ಕಾಣಲಿಲ್ಲ. ಆತನು ಕಾಲಸಪ್ಪಳವೂ ಆಗದಂತೆ ಯಾವಾಗ ಹೊರಟು ಹೋಗಿದ್ದನೆಂಬದು ಬೇಗಮೆಗೆ ಗೊತ್ತಾಗಿದ್ದಿಲ್ಲ ಸಹ ! ಆಕೆಯು ಒಮ್ಮೆ ಮರ್ಮಭೇದಕವಾದ ನಿಟ್ಟು-ಸಿರು ಬಿಟ್ಟು—"ಹಾ ನಾಥ, ನನ್ನ ವಿಷಯದಲ್ಲಿ ಅತ್ಯಂತ ಕರುಣಾಮಯರಾಗಿದ್ದ ನೀವು ಇಂದು ಇಷ್ಟು ನಿಷ್ಠುರರು ಯಾಕೆ ಆದಿರಿ ? ನಿಮ್ಮ ಪ್ರೇಮವನ್ನೂ, ಆದರವನ್ನೂ, ಗೌರವವನ್ನೂ ನೋಡಿ ನಾನು ರಜಪೂತ ಸ್ತ್ರೀಯರಲ್ಲಿಯ ತೇಜಸ್ಸನ್ನೂ, ಅಕಬರಬಾದಶಹರ ಸೊಸೆಯಾದ ಹೀನತನವನ್ನೂ ಮರೆತಿದ್ದೆನು; ಆದರೆ ಪ್ರೀಯಾ, ಇಂಥ ನೀವು ಹೀಗೆ ಶೋಕಜರ್ಜರಳಾದ ನನ್ನನ್ನು ಬಿಟ್ಟು ಹೋಗುವ ಕಠಿಣ ಹೃದಯದವರು ಆಗಬಹುದೇ ? ನಾನು ನಿಮ್ಮನ್ನು ಹೆಚ್ಚಿಗೆಯೇನು ಬೇಡಿಕೊಳ್ಳುತ್ತಿದ್ದಿಲ್ಲ, ಈಗಾದರೂ ಬೇಡಿಕೊಳ್ಳುವದಿಲ್ಲ ! ನೀವೇ ಮೊಗಲಬಾದಶಹರಾಗಿರಿ; ಹಿಂದುಸ್ಥಾನವು ನಿಮ್ಮದೇ ಆಗಲಿ; ಸುವರ್ಣ ವೃಷ್ಟಿಯು ನಿಮ್ಮ ರಾಜ್ಯದ ಮೇಲೆಯೇ ಆಗಲಿ; ಆದರೆ ಅವುಗಳಲ್ಲಿಯ ಯಾತರ ಆಶೆಯನ್ನೂ ನಾನು ಮಾಡದೆ, ನನ್ನ ಖುಸ್ರುವನ್ನು ಗ್ವಾಲ್ಹೇರಿಯ ಕೋಟೆಯಲ್ಲಿ ಪ್ರತಿಬಂಧದಲ್ಲಿರಿಸದೆ ನನ್ನ ವಶಕ್ಕೆ ಒಪ್ಪಿಸಿರೆಂದು ಬೇಡಿಕೊಳ್ಳುವೆನು. ತನ್ನ ಮರಿಯ ಸಲುವಾಗಿ ಬೇಡನಿಗೆ ಬೆದರಿ ಬೆಂಡಾಗಿದ್ದ ಹೆಣ್ಣು ಚಿಗರೆಯಂತೆ ಪ್ರಾಣನಾಥ, ನಾನು ಬೇಕಾದರೆ ಈ ಉಟ್ಟ ವಸ್ತ್ರದಿಂದಲೇ ಮಗನನ್ನು ಕಟ್ಟಿಕೊಂಡು ಎಲ್ಲಿಗಾದರೂ ಹೋಗುವೆನು. ನನ್ನ ಮಗನ ಹೊಟ್ಟೆಯನ್ನು ನಾನು ಭಿಕ್ಷೆಬೇಡಿ ತುಂಬುವೆನು ನಾಥ ! ಆದರೆ ನಿಷ್ಠುರರಾಗಿ ಆತನನ್ನು ಗ್ವಾಲ್ಹೇರದ ಕೋಟೆಯಲ್ಲಿ ಪ್ರತಿಬಂಧಿಸಿ ಇಡಬೇಡಿರಿ; ಒಂದು ಪಕ್ಷದಲ್ಲಿ ಪ್ರತಿಬಂಧಿಸಿ ಇಟ್ಟರೂ ಇಡಿರಿ, ಆದರೆ ಆತನ

ಶಿರಚ್ಛೇದವನ್ನಂತು ಸರ್ವಥಾ ಮಾಡಬೇಡಿರಿ. ನಮ್ಮಿಬ್ಬರನ್ನು ಒಮ್ಮೆ ಹೊರಗೆ ಹಾಕಿಬಿಡಿರಿ, ತಿರುಗಿ ನಾವು ನಿಮ್ಮ ಕೃಪೆಯ ಯಾಚನೆ ಮಾಡುವದಕ್ಕಾಗಿ ನಿಮ್ಮ ರಾಜ್ಯದಲ್ಲಿ ಕಾಲು ಹಾಕುವದಿಲ್ಲ !

ಹೀಗೆ ಶಾಹೀಬೇಗಮೆಯು ಹಂಬಲಿಸಿ ಹಂಬಲಿಸಿ ಹಣ್ಣಾಗಿ ಮನಸ್ಸಿನಲ್ಲಿ— "ಇನ್ನು ಈ ರಾತ್ರಿ ಪ್ರಾಣೇಶ್ವರನ ದರ್ಶನವಾಗುವ ಸಂಭವವಿಲ್ಲ; ಯಾಕಂದರೆ, ಏಕಾಂತ ಗೃಹದಲ್ಲಿ ಮಿತ್ರರ ಹಾಗು ಗುಪ್ತಚಾರರ ಸಮ್ಮೇಲನದಿಂದ ಗುಪ್ತ ಆಲೋಚನೆ ಮಾಡುವ ಕೆಲಸವು ಮುಗಿದ ಬಳಿಕ ಮದ್ಯಪಾನ, ರಮಣೀಯರ ವಿಲಾಸಗಳ ಸಹಾಯದಿಂದ ನಿದ್ದೆಹೋಗುವ ಪ್ರಾಣೇಶ್ವರನ ಪರಿಪಾಠದಂತೆ ಇಂದಿನ ಅವರ ಕಾರ್ಯಕ್ರಮವಿರಬಹುದು. ಇಲ್ಲದಿದ್ದರೆ ಹೀಗೆ ಅವರು ಅಕಸ್ಮಾತ್ ಹೊರಟುಹೋಗುವ ಸಂಭವವಿದ್ದಿಲ್ಲ; ಆದ್ದರಿಂದ ಹೀಗೆ ನಿದ್ದೆಗೆಟ್ಟು ಕುಳಿತುಕೊಳ್ಳುವದಾದರೂ ಏಕೆ ? " ಎಂದು ಆಲೋಚಿಸಿ ಒಳಗೆ ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡಳು; ಆದರೆ ಏನು ಮಾಡಿದರೂ ನಿದ್ದೆ ಬಾರದಾಗಲು, ಮತ್ತೆ ಎದ್ದುಬಂದು ಗವಾಕ್ಷದ ಬಳಿಯಲ್ಲಿ ನಿಂತುಕೊಂಡಳು. ಆಕೆಯು ಯಮುನಾ ನದಿಯನ್ನು ನೋಡಿ ಮತ್ತೆ ಮನಸ್ಸಿನಲ್ಲಿ— ನಾನು ದುಃಸಹ ದುಃಖವನ್ನು ಅನುಭವಿಸುವದಕ್ಕಿಂತ ಈ ಯಮುನಾ ನದಿಯಲ್ಲಿ ದುಡುಮ್ಮನೆ ಹಾರಿಕೊಂಡು ಬಿಡಲಾ ! ಈ ಹೃದಯಶೂನ್ಯ ಪತಿಯು, ಆ ಸ್ವಚ್ಛಂದ ವೃತ್ತಿಯ ಮಗನು, ಇಂಥವರ ಮೋಹದಲ್ಲಿ ಸಿಕ್ಕು ಒದ್ದಾಡುವದರಿಂದ ನನಗೆ ಆಗುವ ಲಾಭವಾದರೂ ಏನು ? ಛೀ ಛೀ ! ಮೃತ್ಯುವು ಇಷ್ಟು ಸಮೀಪದಲ್ಲಿ ಸುಲಭ ಸಾಧ್ಯವಾಗಿ ಇರುತ್ತಿರಲು, ನಾನು ತಳಮಳಿಸುವದು ವ್ಯರ್ಥವೇ ಸರಿ ! ನಾನು ಈ ಜಗತ್ತಿನಲ್ಲಿ ಬಂದು ಸಂಸಾರ ಮಾಡಿದೆನು. ಉಂಡೆನು–ತಿಂದೆನು–ವೈಭವವನ್ನು ಭೋಗಿಸಿದೆನು–ಅಧಿಕಾರ ನಡಿಸಿದೆನು; ಆದರೆ ಕಡೆಗೆ ಈ ದುಃಸಹ ದುಃಖವನ್ನು ಭೋಗಿಸುವದು ನನ್ನ ಪಾಲಿಗೆ ಬಂದಿತು; ಆದ್ದರಿಂದ ಈಗ ದುಃಖವ ಅನುಭವಿಸುವದಕ್ಕಿಂತ ದೇಹತ್ಯಾಗ ಮಾಡುವದೇ ಲೇಸು. ದೇವರೇ, ಇಂಥ ವಿಪತ್ಕಾಲದಲ್ಲಿ ಮರಣವೇ ಒಳ್ಳೆಯದಲ್ಲವೆ ?

ಹೀಗೆ ವಿಚಾರಮಾಡುತ್ತಿರಲು, ಪುನಃ ಆಕೆಯ ಮನಸ್ಸು ತಿರುಗಿತು. ಆಕೆಯು ತನ್ನ ವಿಚಾರದ ದಿಶೆಯನ್ನು ತಿರುಗಿಸಿ ಮತ್ತೆ ಮನಸ್ಸಿನಲ್ಲಿ—

ಛೀ ಛೀ ! ಹೀಗೆ ನಾನು ಹೊಳೆ ಮುಣುಗಿ ಸತ್ತರೆ ನನ್ನ ಪ್ರೀಯ ಖುಸ್ರುವಿನ ಗತಿಯೇನು ? ಆತನು ಹೇಗಿದ್ದರೂ, ಎಷ್ಟು ಎಟ್ಟೆಯಿದ್ದರೂ ನನ್ನ ಮಗ ನಲ್ಲವೇ ? ನಾನು ಮರಣ ಹೊಂದುವದರಿಂದ ಆತನು ಪರದೇಶಿಯಾಗಿ ತೀರ ನಿರಾಧಾರನಾಗಿ ಹೋಗುವನಲ್ಲ ! ನಾನಿರುವದೊಂದು ಆತನಿಗೆ ದೊಡ್ಡ ಆಧಾರವಾಗಿರುವದು. ಹೊತ್ತು ಬಿದ್ದರೆ ಏನಾದರೂ ಮಾಡಿ ಆತನ ವಿಪತ್ತನ್ನು ನಾನು ದೂರ ಮಾಡಬಹುದು. ನಾನೇ ಇಲ್ಲದಿದ್ದರೆ ಆತನ ಗ್ವಾಲ್ಹೇರಿಯ ಕಾರಾಗೃಹವಾಸವನ್ನಾಗಲಿ, ವಿಷಪಾನದಿಂದುಂಟಾಗುವ ಆತನ ಮರಣವನ್ನಾಗಲಿ ಗುಪ್ತ ಕೊಲೆಗಡಕರಿಂದ ಆಗಬಹುದಾದ ಆತನ ಕೊಲೆ ಯನ್ನಾಗಲಿ ಯಾರು ತಪ್ಪಿಸುವರು ? ನಾನು ಸತ್ತು ನನ್ನ ಮಗನನ್ನು ಹೀಗೆ ಗತಿಗೇಡಾಗಿ ಮಾಡುವದು ಯೋಗ್ಯವಾಗಬಹುದೆ ? ನನ್ನ ಮೇಲೆ ಈಗ ಬಂದಿರುವ ಅಂಥ ಪ್ರಸಂಗವಾದರೂ ಏನು ? ನಾನು ಯಃಕಶ್ಚಿತ ಮನುಷ್ಯ ಳಲ್ಲ; ಅಕಬರಬಾದಶಹನ ಸೊಸೆಯು; ನಾಳೆ ಸುಲ್ತಾನ ಸೇಲೀಮರವರು ದಿಲ್ಲಿಯ ಸಿಂಹಾಸನವನ್ನೇರಲು, ನಾನು ರಾಜರಾಜೇಶ್ವರಿಯಾಗತಕ್ಕವಳು ! ಇಂಥ ನಾನು ಒಬ್ಬ ಸಾಮಾನ್ಯಳಾದ ಗ್ರಾಮ್ಯ ಸ್ತ್ರೀಯಂತೆ ಹೊಳೆಮುಣುಗಿ ಸಾಯಬಹುದೇ ? ನಾನು ಸಾಮ್ರಾಜ್ಞಿಯೆಂಬ ಹಕ್ಕಿನಿಂದ ಖುಸ್ರುವನ್ನು ಸಹಜವಾಗಿ ಸಂರಕ್ಷಿಸಬಹುದು." ಎಂದು ಆಲೋಚಿಸಿದಳು. ಹೀಗೆ ಸುಷ್ಟ ದುಷ್ಟ ವಿಚಾರಗಳಿಂದ ಹಣ್ಣಾಗಿದ್ದ ಜೋಧಬಾಯಿಯು ಮತ್ತೆ ಹೋಗಿ ಹಾಸಿಗೆಯ ಮೇಲೆ ಮಲಗಿಕೊಳ್ಳಲು, ಕೆಲ ಹೊತ್ತಿನಮೇಲೆ ಆಕೆಗೆ ಗಾಢ ವಾದ ನಿದ್ರೆಯು ಹತ್ತಿ, ಆಕೆಯ ತಪ್ತ ಹೃದಯವು ಶಾಂತವಾಯಿತು. ಮರುದಿವಸ ಆಕೆಯು ಎದ್ದ ಕೂಡಲೆ ಮಗನಿಗೊಂದು ಪತ್ರಬರೆದು ಸೇಲೀಮ ನಿಗೆ ಗೊತ್ತಾಗದಂತೆ ಅದನ್ನು ಒಬ್ಬ ನಂಬಿಗೆಯ ರಜಪೂತ ಸೈನಿಕನ ಸಂಗಡ ಫತ್ತೇಪುರ ಸಿಕರಿಯ ಕಡೆಗೆ ಕಳಿಸಿದಳು. ಆ ಪತ್ರದಲ್ಲಿ ಆಕೆಯು ಖುಸ್ರು ವಿಗೆ—"ಪ್ರೀಯ ಖುಸ್ರೂ, ನಿನ್ನ ಅಜ್ಜನು ಬೇನೆಯಿಂದ ತೀರ ಹಣ್ಣಾ-ಗಿರುವನು. ನೀನು ಕೂಡಲೆ ಹೊರಟು ಬಾರದಿದ್ದರೆ ಆತನ ಮೋರೆಯನ್ನು ಕಾಣಲಿಕ್ಕಿಲ್ಲ. ಆದ್ದರಿಂದ ಈ ಪತ್ರವನ್ನು ಓದಿದ ಕೂಡಲೆ ಆಗ್ರಾಕ್ಕೆ ಹೊರಟು ಬಾ. ತಾಯಿಯ ಅಪ್ಪಣೆಯನ್ನು ಮೀರಬೇಡ. ಪಟ್ಟಣದಲ್ಲಿ ಬಂದಬಳಿಕ ನನ್ನ ಮಂದಿರಕ್ಕೆ ಬಾ. ಅಲ್ಲಿ ನಾನು ನಿನ್ನನ್ನು ಕಾಣುವೆನು."

ಎಂದು ಬರೆದಿದ್ದಳು. ಪತ್ರವನ್ನು ಕಳಿಸಿದ್ದರಿಂದ ಆಕೆಗೆ ಬಹುಮಟ್ಟಿಗೆ ಸಮಾಧಾನವಾಯಿತು. ಪಾಪ! ಎಷ್ಟಾದರೂ ತಾಯಿಯ ಕರಳು; ಮಗನು ಎಷ್ಟು ಅಯೋಗ್ಯನಾದರೂ ಆ ಕರಳು ಕರಗದೆ ಹೇಗೆ ಹೋದೀತು? ಆದರೆ ಜೋಧಬಾಯಿಯ ಈ ಕರೆಸೋಣವೇ ಅನರ್ಥಕ್ಕೆ ಹೇಗೆ ಕಾರಣವಾಯಿತೆಂಬದನ್ನು ಮುಂದಿನ ಪ್ರಕರಣಗಳಿಂದ ವಾಚಕರಿಗೆ ತಿಳಿಯಬಹುದು.



೧೭ನೆಯ ಪ್ರಕರಣ

# ಮರಣೋನ್ಮುಖ ಬಾದಶಹನು.



ಫಕೀರನ ದೂಡುವಿಕೆಯಿಂದ ಹಿಂದಕ್ಕೆ ಬಿದ್ದು ಮೂರ್ಛಿತನಾಗಿದ್ದ ಖುಸರುವು, ಕೆಲ ಹೊತ್ತಿನಮೇಲೆ ಚೇತರಿಸಿ ದಿಗಿಲುಬಿದ್ದು ತನ್ನ ಮಂದಿರಕ್ಕೆ ಹೋಗಿ ಆಶ್ಚರ್ಯಚಕಿತನಾಗಿ ವಿಚಾರಮಾಡತೊಡಗಿದನು. ಫಕೀರನು ಯಾರು? ಆತನು ಅಲ್ಲಿಗೆ ಹೇಗೆ ಬಂದನು? ತನ್ನನ್ನು ಆತನು ಹೀಗೆ ದೂಡಿದ ಕಾರಣವೇನು? ಮಂದಾಕಿನಿಯು ಎಲ್ಲಿಗೆ ಹೋಗಿರಬಹುದು? ಅವರನ್ನು ಕಾವಲುಗಾರರು ಹೇಗೆ ಬಿಟ್ಟಿರಬಹುದು? ಎಂಬಿವೇ ಮೊದಲಾದ ಸಂಗತಿಗಳನ್ನು ಕುರಿತು ಎಷ್ಟು ವಿಚಾರಮಾಡಿದರೂ ಆತನಿಗೆ ಏನೂ ತಿಳಿಯ ದಾಯಿತು. ಆತನು ಕೋಟೆಯ ದ್ವಾರಗಳ ಕಾವಲುಗಾರರನ್ನು ಕರೆಸಿ ಕೇಳಲು, ಅವರು ಖುಸರುವಿಗೆ--ಖಾವಿಂದ, ಹುಜೂರಿನ ಹೆಸರಿನ ಉಂಗುರ ವನ್ನು ತೋರಿಸಿ ಒಬ್ಬ ಫಕೀರನೂ, ಒಬ್ಬ ಗೋಷೆಯ ಹೆಣ್ಣುಮಗಳೂ ಹೋದರೆಂದು ಹೇಳಿದರು. ತಾನು ಕೊಟ್ಟಿದ್ದ ಉಂಗುರವೇ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಯಿತೆಂದು ತಿಳಿದು ಖುಸರುವು ಸಂತಾಪಗೊಂಡನು. ಇದೆಲ್ಲ ಮಂದಾಕಿನಿಯ ತಂತ್ರವಿದ್ದು, ಆ ದುಷ್ಟಳನ್ನು ಹಿಡತಂದು ಜನಾನ ಖಾನೆಯಲ್ಲಿ ದಾಸಿಯರ ದಾಸಿಯನ್ನಾಗಿ ಮಾಡಿದ ಹೊರತು ತನ್ನ ಸಮಾ ಧಾನವಾಗದೆಂದು ಚಡಪಡಿಸಿದನು. ಈ ಪ್ರಸಂಗದಿಂದ ಅಭಿಮಾನಿಯಾದ ಆ ರಾಜಪುತ್ರನು ಬಹಳವಾಗಿ ನೊಂದುಕೊಂಡನು. ಆಗಿನ ಮಟ್ಟಿಗಾದರೂ ಮಂದಾಕಿನಿಯ ಮೇಲಿನ ಆತನ ಮೋಹ ಪಟಲವು ದೂರವಾಯಿತು. ಆತನು ಈಗಲೆ ರಾವುತರನ್ನು ನಾಲ್ಕೂ ಕಡೆಗೆ ಕಳಿಸಿ ಓಡಿಹೋಗಿದ್ದ ಅವರಿಬ್ಬರನ್ನು ಹಿಡತರಿಸಬೇಕೆಂದು ನಿಶ್ಚಯಿಸಿದನು; ಆದರೆ ಅಷ್ಟರಲ್ಲಿ ಒಬ್ಬ ದಾಸಿಯು ಅಲ್ಲಿಗೆ ಬಂದು ಜೋಧಬಾಯಿಯು ಆಗ್ರಾದಿಂದ ಬರೆದಿದ ಪತ್ರವನ್ನು ತಂದು ಆತನ ಕೈಯಲ್ಲಿ ಕೊಟ್ಟಳು. ಖುಸರುವು ಆ ಪತ್ರವನ್ನು ಆತುರತೆಯಿಂದ ಒಡೆದು ನೋಡಲು, ಆದರಲ್ಲಿ ಆತನ ತಾಯಿಯು—

"ಕೂಡಲೆ ನೀನು ಆಗ್ರಾಕ್ಕೆ ಹೊರಟು ಬರಬೇಕೆಂ"ದು ಆತನನ್ನು ಆಜ್ಞಾಪಿಸಿದ್ದಳು. ತನ್ನ ಅಜ್ಜನು ಮರಣೋನ್ಮುಖನಾಗಿರುವನೆಂಬದನ್ನು ಓದಿದ ಕೂಡಲೆ ಆತನ ಚಿತ್ತವು ಅಸ್ವಸ್ಥವಾಯಿತು. ಬಾದಶಹನು ತನ್ನನ್ನು ಕುರಿತು— "ನೀನು ನನ್ನ ಅಪ್ಪಣೆಯ ಹೊರತು ಸಿಕರಿಯನ್ನು ಬಿಟ್ಟು ಬರಬೇಡವೆಂ"ದು ತನ್ನನ್ನು ಆಜ್ಞಾಪಿಸಿದ್ದು, ಈಗ ತನ್ನ ತಾಯಿಯು ತನ್ನನ್ನು ಕುರಿತು— "ಖುಸರೂ, ನೀನು ನನ್ನ ಅಪ್ಪಣೆಯನ್ನು ಮೀರದೆ ಕೂಡಲೆ ಆಗ್ರಾಕ್ಕೆ ಹೊರಟು ಬಾರೆಂ"ದು ಆಜ್ಞಾಪಿಸಿರುವದರಿಂದ ಈಗ ಏನು ಮಾಡಲೆಂಬ ಗಹನ ವಿಚಾರವು ಆತನಲ್ಲಿ ಉತ್ಪನ್ನವಾಯಿತು. ಈ ವಿಚಾರದ ತೊಡಕು ಬಿಡಿಸುವ ಅವಸರದಲ್ಲಿ ಆತನು ಮಂದಾಕಿನಿಯ ವಿಚಾರವನ್ನು ಪೂರಾ ಮರೆತುಬಿಟ್ಟನು.

ಇತ್ತ ಆಗ್ರಾದಲ್ಲಿ ಅಕಬರಬಾದಶಹನ ಬೇನೆಯ ಸ್ಥಿತಿಯು ಅತ್ಯಂತ ಚಿಂತಾಜನಕವಾಗಿತ್ತು; ಆದರೆ ಹೇಳಿಕೊಳ್ಳುವಷ್ಟು ಆತನ ಶಕ್ತಿಪಾತವಾಗದ್ದರಿಂದ ಹಕೀಮರ ನಿರಾಶೆಯಲ್ಲಿ ಆಶೆಯ ಅಂಕುರವು ತೋರಿದಂತಾಗುತ್ತಿತ್ತು. ಬಾದಶಹರ ಪ್ರಕೃತಿಯನ್ನು ನೋಡುವ ಮುಖ್ಯ ಹಕೀಮನಾದ ಅಲ್ಲಿ ಮಿರ್ಝಾನು ತೀರ ನಿರಾಶೆಪಟ್ಟಿದ್ದರೂ, ತನ್ನ ಜವಾಬು ದಾರಿಯನ್ನು ಅರಿತು ಆತನು ಬಗೆಬಗೆಯ ಉಪಾಯುಗಳನ್ನು ಯೋಚಿಸುವಲ್ಲಿ ತೊಡಗಿ ಹೋಗಿದ್ದನು. ಆತನು ಬಾದಶಹರನ್ನು ಕುರಿತು— "ಜಹಾಪನಾಹ! ತಾವು ಒಪ್ಪಿಗೆಯನ್ನಿತ್ತರೆ ವಿಶೇಷತರದ ಉಪಚಾರ ಮಾಡಬೇಕೆಂದು ಮಾಡಿದ್ದೇನೆ. ಮುಪ್ಪಿನ ಕಾಲದಲ್ಲಿ ಕ್ರಮವಾಗಿ ಹೆಚ್ಚುತ್ತಿರುವ ಬೇನೆಯನ್ನು ದುರ್ಲಕ್ಷಿಸುವದು ಹಿತಕರವಲ್ಲ" ಎಂದು ಹೇಳಿದನು. ಹಕೀಮನ ಈ ಆಲೋಚನೆಯು ಬಾದಶಹನಿಗೆ ಒಪ್ಪಿಗೆಯಾಯಿತು. ತನ್ನ ಶಕ್ತಿಯು ದಿನದಿನಕ್ಕೆ ಕ್ಷೀಣವಾಗುತ್ತಿರುವದು ಬಾದಶಹನ ಅನುಭವಕ್ಕೆ ಬರತೊಡಗಿತ್ತು; ಆದ್ದರಿಂದ ಆತನು ಹಕೀಮನ ಅಭಿಪ್ರಾಯಕ್ಕೆ ಪ್ರತಿಕೂಲನಾಗದ್ದರಿಂದ ಅಲ್ಲಿ ಮಿರ್ಝಾನು ಹೊಸ ಔಷಧದ ಯೋಜನೆಯನ್ನು ಮಾಡಿದನು; ಅದರಿಂದ ಬಾದಶಹನ ಆಮಾಶಯವು ಗುಣವಾಯಿತು. ಆದರೆ ಭಯಂಕರವಾದ ಜ್ವರದಿಂದ ಬಾದಶಹನ ಸರ್ವಾಂಗವು ತಪ್ತವಾಯಿತು; ಇದನ್ನು ನೋಡಿ ಹಕೀಮನು ಬಹಳ ಖಿನ್ನನಾದನು. ಇನ್ನು ಬಾದಶಹರು ಈ ಜ್ವರದಿಂದ ಮುಕ್ತರಾಗುವ

ದಿಲ್ಲವೆಂದು ಅಲ್ಲಿಯು ನಿಶ್ಚಯಿಸಿದನು. ತನ್ನ ಜವಾಬದಾರಿಯನ್ನು ಅರಿತು ಆತನು ಈ ಸಂಗತಿಯನ್ನು ಬಾದಶಹರ ಅತ್ಯಂತ ವಿಶ್ವಾಸದ ಇಬ್ಬರಿಗೆ ತಿಳಿಸಿದನು. ಅವರಲ್ಲಿ ಒಬ್ಬನು ಅಜೀಮಖಾನ ಕೋಕೋ ಎಂಬವನು ಇದ್ದದ್ದರಿಂದ ಆತನ ಮುಖಾಂತರವಾಗಿ ಮಾನಸಿಂಗನಿಗೆ ಈ ಸಂಗತಿಯು ಗೊತ್ತಾಯಿತು. ಖುಸರುವನ್ನು ಪಟ್ಟಕ್ಕೆ ಕುಳ್ಳಿರಿಸುವ ಸಂಬಂಧದಲ್ಲಿ ಇವರಿಬ್ಬರು ಮಿತ್ರರಾಗಿದ್ದದ್ದನ್ನು ವಾಚಕರು ಅರಿತಿರುವರು.

ಬಾದಶಹರ ಈ ಅತ್ಯವಸ್ಥೆಯನ್ನರಿತು ಅಜೀಮಖಾನನೂ, ಮಾನಸಿಂಹನೂ ತಮ್ಮ ಉದ್ಯೋಗವನ್ನು ಒತ್ತರದಿಂದ ನಡೆಸಿದರು. ಅವರ ವರ್ಚಸ್ಸು ರಾಜಕಾರಣದಲ್ಲಿ ವಿಶೇಷವಾಗಿ ಇದ್ದದ್ದರಿಂದ, ಒಂದು ಗುಪ್ತಸಭೆ ನೆರೆಸುವದನ್ನು ನಿಶ್ಚಯಿಸಿ ಅವರು ಮುಖ್ಯ ಮುಖ್ಯ ಅಮೀರ ಉಮರಾ- ವರನ್ನೂ, ಅಕಬರನ ಮಾಂಡಲಿಕರಾದ ರಾಜರು–ಮಹಾರಾಜರನ್ನೂ ಸಭೆಗೆ ಕರಿಸಿದರು. ಸಭಾಸದರು ತಮ್ಮ ತಮ್ಮ ಮಾನಮರ್ಯಾದೆಯಂತೆ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿರಲು, ಮಾನಸಿಂಗನೂ, ಅಜೀಮಖಾನನೂ ಸೇಲೀಮನ ದುರ್ಗುಣಗಳನ್ನು ವರ್ಣಿಸಿ, ಮಹಾವಿದ್ವಾಂಸನಾದ ಅಬುಲ ಫಜಲನ ಕೊಲೆಯ ನೆನಪು ಮಾಡಿಕೊಟ್ಟು, ಸೇಲೀಮನ ಕ್ರೂರತನವನ್ನು ಬೈಲಿಗಿಟ್ಟರು. ಇಂಥ ದುರ್ವ್ಯಸನಿಯೂ, ಕ್ರೂರನೂ ಆದವನು ಬಾದಶಾಹಿಯ ಪಟ್ಟವೇರಲು ಯೋಗ್ಯನಲ್ಲದ್ದರಿಂದ, ಬಾದಶಹರ ತರುವಾಯದಲ್ಲಿ ಖುಸರುವನ್ನು ಪಟ್ಟಕ್ಕೆ ಕುಳ್ಳಿರಿಸುವದು ಯೋಗ್ಯವೆಂದು ಪ್ರತಿಪಾದಿಸಿದರು. ಇವರ ಈ ಪ್ರತಿಪಾದನದಿಂದ ಸಭೆಯಲ್ಲಿ ಸ್ವಾಭಾವಿಕವಾಗಿಯೇ ಇಬ್ಬಣಗಳಾದವು. ಕೆಲವರು–ಖುಸರುವನ್ನು ಪಟ್ಟಕ್ಕೆ ಕುಳ್ಳಿರಿಸುವದು ಹಿತಕರವೆಂದು ಭಾವಿಸಿದರು. ಕೆಲವರು–ಸೇಲೀಮನು ಪಟ್ಟವೇರುವದು ನ್ಯಾಯವೆಂದು ಅಭಿಪ್ರಾಯಪಟ್ಟರು. ಆದರೆ ಬಹು ಸೂಕ್ಷ್ಮವಾದ ಈ ಸಂಗತಿಗಳನ್ನು ಒಡನುಡಿಯುವ ಧೈರ್ಯವು ಯಾರಿಗೂ ಆಗಲೊಲ್ಲದು. ಅಜೀಮಖಾನನು ಖುಸರುವಿನ ಹೆಣ್ಣುಕೊಟ್ಟ ಮಾವನೂ, ಮಾನಸಿಂಹನು ಖುಸರುವಿನ ಸೋದರಮಾವನೂ ಆಗಿದ್ದು, ಇವರಿಬ್ಬರೂ ಖುಸರುವನ್ನು ಮುಂದೆ ಮಾಡಿ ತಮ್ಮ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಯತ್ನಿಸುತ್ತಿರುವದು ಬಹುತರ ಎಲ್ಲರ ಮನಸ್ಸಿನಲ್ಲಿಯೂ ಬಂದುಹೋದ ಸಂಗತಿಯಾಗಿತ್ತು; ಆದ್ದರಿಂದಲೇ ಸ್ವಾರ್ಥಮೂಲ

ವಾದ ಇವರ ವಿಚಾರವು ನಿಸ್ಪೃಹಿಗಳ ಮನಸ್ಸಿಗೆ ಬರುತ್ತಿದ್ದಿಲ್ಲ. ಈ ಇಬ್ಬರು ಮಾವಂದಿರ ಕಾರಸ್ಥಾನಗಳು ಬಹುದಿವಸಗಳಿಂದ ನಡೆದದ್ದನ್ನು ಬಾದಶಹನೇ ಮೊದಲಾಗಿ ಎಲ್ಲರೂ ಅರಿತಿದ್ದರು; ಆದ್ದರಿಂದ ಈಗ ನೆರೆದ ಸಭೆಯಲ್ಲಿ ಯಾವದೊಂದು ಮಾತಿನ ನಿಷ್ಕರ್ಷವಾಗುವದು ಅತ್ಯಗತ್ಯವಾಗಿತ್ತು. ಆದರೆ, ತಮ್ಮ ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ನೆರೆದ ಸಭೆಯಲ್ಲಿ ಆಡಿ ತೋರಿಸಲಿಕ್ಕೆ ಯಾರೂ ಮುಂದುವರಿಯದ್ದರಿಂದ ಸಭೆಯು ಸ್ತಬ್ಧ ವಾಯಿತು.

ಹೀಗಿರುವಾಗ ಮಾನಸಿಂಹನು ಮತ್ತೆ ಸಭಿಕರನ್ನು ಕುರಿತು— " ಘನ ವಂತರೇ, ನಾವೆಲ್ಲರೂ ಮೊಗಲ ಸಾಮ್ರಾಜ್ಯದ ಅಭಿಮಾನಿಗಳೂ, ಹಿತಕರ್ತೃ ಗಳೂ ಒಟ್ಟುಗೂಡಿರುವಾಗ, ಈ ಮಹತ್ವದ ಸಂಗತಿಯ ವಿಷಯವಾಗಿ ಹೀಗೆ ಮೌನಧಾರಣ ಮಾಡುವದು ಯೋಗ್ಯವಲ್ಲ. ಅಯೋಗ್ಯರಾದ ರಾಜರಿಂದ ರಾಜ್ಯಕ್ಕೊದಗುವ ಕೇಡನ್ನು ವರ್ಣಿಸಿ ಹೇಳುವ ಕಾರಣವಿಲ್ಲ. ಸುಲ್ತಾನ ಸೇಲೀಮರು ಸಿಂಹಾಸನವೇರಲು ಹಕ್ಕುದಾರರೆಂಬದೇನೋ ನಿಜ; ಆದರೆ, ಸಿಂಹಾಸನವೇರಲು ಅವರು ಯೋಗ್ಯರಿರುವರೋ ಎಂಬದನ್ನು ನೀವು ವಿಚಾರ ಮಾಡತಕ್ಕದ್ದು. ಪ್ರತ್ಯಕ್ಷ ಬಾದಶಹರ ಮೇಲೆ ತಿರುಗಿ ಬೀಳಲಿಕ್ಕೂ ಹಿಂದೆಮುಂದೆ ನೋಡದಿರುವವರ ಸಂಬಂಧದಿಂದ ಹೆಚ್ಚಿಗೆ ನಾವು ಏಕೆ ಹೇಳಬೇಕು ? ಸಾಮ್ರಾಜ್ಯದ ಹಿತವನ್ನು ಲಕ್ಷಿಸಿದರೆ, ಅಜೀಮಖಾನರ ಅಭಿಪ್ರಾಯದಂತೆ ಖುಸರುವನ್ನೇ ಸಿಂಹಾಸನದಲ್ಲಿ ಕುಳ್ಳಿರಿಸುವದು ನನಗೆ ಯೋಗ್ಯವಾಗಿ ತೋರುತ್ತದೆ. ಈ ಸೂಕ್ಷ್ಮ ಮಾತನ್ನು ಸಭೆಯಲ್ಲಿ ಸ್ಪಷ್ಟ ಆಡಲು ಬಹುಜನರಿಗೆ ಸಂಕೋಚವಾಗುವದು ಸ್ವಾಭಾವಿಕವು; ಒಂದು ರೀತಿಯಿಂದ ಹೀಗೆ ಸ್ಪಷ್ಟ ಹೇಳುವದು ಭಯಪ್ರದವೂ ಆಗಿರುವದು; ಆದರೆ ನಿಮ್ಮ ಈ ಮೌನವನ್ನೇ ನಿಮ್ಮ ಸಮ್ಮತಿಯೆಂದು ತಿಳಿದು ನಾವಿಬ್ಬರು ನಮ್ಮ ಅಭಿಪ್ರಾಯದಂತೆ ಕಾರ್ಯಸಿದ್ಧಿಯನ್ನು ಮಾಡುವಾಗ ನೀವು ನಮಗೆ ಸಹಾಯಕರಾಗುವಿರೆಂದು ನಂಬುವೆವು. ಸ್ವತಃ ನಾನು ಸೇಲೀಮನ ಬೀಗ ನಾಗಿರಲು, ನನ್ನ ತಂಗಿಯ ಅಹಿತ ಚಿಂತನ ಮಾಡತೊಡಗಿರುವದು ವಿಲಕ್ಷಣ ವಾಗಿಯೇ ಇರುವದು; ಆದರೆ ತಂಗಿಯ ಹಿತಕ್ಕಿಂತ ಮೊಗಲ ಸಾಮ್ರಾಜ್ಯದ ಹಿತವು ನನಗೆ ಮಹತ್ವದ್ದಾಗಿರುವದು; ಅಂದಬಳಿಕ ಮೊಗಲ ಸಾಮ್ರಾಜ್ಯದ

ಆಧಾರಸ್ತಂಭವಾಗಿರುವ ನೀವು ನನ್ನ ಮಾತಿಗೆ ಒಪ್ಪಿಕೊಳ್ಳುವದರಲ್ಲಿ ಆಶ್ಚರ್ಯವೇನು ?

ಈ ಮೇರೆಗೆ ನುಡಿದು ಮಾನಸಿಂಹನು ಕುಳಿತುಕೊಳ್ಳಲು, ವೀರ ಸಯ್ಯದಖಾನನು ಎದ್ದುನಿಂತು ಚಾತುರ್ಯದ ಯುಕ್ತಿಯಿಂದ ಆತನನ್ನೂ, ಅಜೀಮುಖಾನನನ್ನೂ ಕುರಿತು— "ರಾಜೇಸಾಹೇಬ, ಖಾನಸಾಹೇಬ, ನಿಮ್ಮ ಪ್ರತಿಪಾದನವನ್ನು ಅಲ್ಲಗಳೆಯುವದಿಲ್ಲ. ಇರಬಹುದು, ಸುಲ್ತಾನ ಸಲೀಮರು ಸ್ವೇಚ್ಛಾಚಾರಿಗಳಿರಬಹುದು, ಉಚ್ಛೃಖಲರ – ಉದ್ಧತರೂ ಇರಬಹುದು; ಆದರೆ ಬಾದಶಹರನ್ನಾಗಿ ಮಾಡುವವರು ನಾವಲ್ಲ. ಅವರು ಅಕಬರ ಬಾದಶಹರ ಹಿರಿಯ ಮಕ್ಕಳಾದದ್ದರಿಂದ ಅವರೇ ನಮ್ಮೆಲ್ಲರ ಭಾವೀ ಬಾದಶಹರಾಗಿರುವರು. ಅವರ ಹೊರತು ಬೇರೆ ಯಾರಿಗೂ ನಾವು ಬಾದಶಹ ರೆನ್ನತಕ್ಕದ್ದಲ್ಲ. ನ್ಯಾಯ, ಧರ್ಮ, ಕರ್ತವ್ಯಗಳನ್ನನುಸರಿಸಿ, ಅಕಬರ ಬಾದಶಹರಿಗೆ ದ್ರೋಹಿಗಳಾಗದೆ ಅವರ ಹಿರಿಯ ಮಕ್ಕಳಿಗೇ ನಾವು ಅನು ಕೂಲರಾಗಿ ಸಹಾಯ ಮಾಡತಕ್ಕದ್ದು. ನಾನು ಬಾದಶಹರ ಸೇವಕನಿದ್ದು ಸೇನಾಪತಿಯಿರುವೆನು. ನನ್ನ ಮಾತು ನಿಮಗೆ ಒಪ್ಪಿಗೆಯಿಲ್ಲದ ಪಕ್ಷದಲ್ಲಿ, ಉಪೇಕ್ಷೆ ಮಾಡದೆ ನಾನು ಕೂಡಲೆ ಬಾದಶಹರಿಗೆ ಅದನ್ನು ತಿಳಿಸಬೇಕಾಗು ವದು. ಹಾಗೆ ನಾನು ತಿಳಿಸಿದಪಕ್ಷದಲ್ಲಿ ನೀವೆಲ್ಲರೂ ರಾಜದ್ರೋಹಿಗಳಾಗಿ ಭಯಂಕರ ಶಿಕ್ಷೆಗೆ ಗುರಿಯಾಗಬೇಕಾದೀತೆಂಬದನ್ನು ನಾನು ಮೊದಲೇ ಹೇಳಿರುವೆನು. ಈ ಮಾತನ್ನು ಯಾವತ್ತು ಸಭಾಸದರಿಗೂ ಹೇಳುವೆನಲ್ಲದೆ, ರಾಜಾ ಮಾನಸಿಂಹರವರಿಗೂ, ಅಜೀಮುಖಾನರಿಗೂ ಸ್ಪಷ್ಟವಾಗಿ ಹೇಳುವೆನು. ನೀವಿಬ್ಬರೂ ನನ್ನ ವಿರುದ್ಧವಾಗಿ ಅನ್ಯಾಯ ಮಾಡುವ ಸಾಹಸಕ್ಕೆ ಹೋದರೆ, ನಾನು ಯಾವತ್ತು ಅಮೀರಉಮರಾವರ ಸಹಾಯದಿಂದ ಪ್ರಾಣವಿರುವ ತನಕ ನಿಮ್ಮ ಸಂಗಡ ಯುದ್ಧ ಮಾಡುವೆನು. ಒಟ್ಟಿಗೆ, ಬಾದಶಹನ ಮಗನು ಗಾದಿಯ ಒಡೆಯನಾಗಬೇಕು, ಮಗನಿರುವಾಗ ಮೊಮ್ಮಗನಿಗೆ ಸಿಂಹಾಸನವು ದೊರೆಯಲಾರದು" ಎಂದು ಹೇಳಲು, ಸೈಯ್ಯದಖಾನನ ಈ ನಿಸ್ಪೃಹ ಮಾತುಗಳಿಗಾಗಿ ಅಂಜಿ ಬಹುಜನ ಅಮೀರಉಮರಾವರು ಮಾನಸಿಂಹನು ಕೂಡಿಸಿದ ಆ ಗುಪ್ತ ಸಭೆಯಿಂದ ಹೊರಟು ಹೋದರು. ಅದರಿಂದ ಮಾನ ಸಿಂಹನ ಪಕ್ಷವು ದುರ್ಬಲವಾಗಿ ಆತನು ಸುಮ್ಮನಾಗಬೇಕಾಯಿತು. ಸೈಯದ

ಖಾನನ ಅಪ್ಪಣೆಯಿಂದ ರಾಜಾರಾಮದಾಸ ಕಚ್ಛವಹಾ ಎಂಬವನು ಕೂಡಲೆ ತನ್ನ ಸೈನ್ಯದೊಡನೆ ರಾಜಭಾಂಡಾರವನ್ನು ರಕ್ಷಿಸುವದಕ್ಕಾಗಿ ಹೊರಟು ಹೋದನು.

ಈ ಯಾವತ್ತು ವರ್ತಮಾನವು ಹೇಗೆ ಹೇಗೋ ಜೋಧಬಾಯಿಗೆ ಗೊತ್ತಾಗಲು, ತನ್ನ ಮಗನ ಸುರಕ್ಷಿತತೆಯ ಸಲುವಾಗಿ ಆಕೆಯು ತೀರ ಶಂಕಿತಳಾದಳು. ತನ್ನ ಪತಿಯು ಮಗನನ್ನು ಕ್ಷಮಿಸದಿದ್ದರೆ ಮುಂದೆ ಗತಿ ಯೇನೆಂದು ಆಕೆಯು ಚಿಂತಿಸತೊಡಗಿದಳು. ಏನು ಮಾಡಿದರೂ ಆಕೆಗೆ ಸಮಾಧಾನವಾಗಲೊಲ್ಲದು. ಬಾದಶಹನು ತೀರ ಮರಣೋನ್ಮುಖನಾದದ್ದ ರಿಂದ ತಾನೂ, ತನ್ನ ಮಗ ಖುಸರುವೂ ಕೇವಲ ನಿರಾಧಾರರಾದೆವೆಂದು ಆಕೆಯು ತಿಳಿದಳು. ಈಗಲೇ ಬಾದಶಹರಬಳಿಗೆ ಹೋಗಿ ತನ್ನ ಮಗನ ಪ್ರಾಣರಕ್ಷಣದ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕೆಂದು ಆಕೆಯು ಆಲೋಚಿ ಸಿದಳು. ಹೇಗೂ ಬಾದಶಹನ ದರ್ಶನಕ್ಕೆ ಆಕೆಯು ಹೋಗಲೇಬೇಕಾಗಿತ್ತು. ಆಕೆಯು ತನ್ನ ಸದ್ಗುಣಸಮುಚ್ಚಯದಿಂದ ಎಲ್ಲ ಸೊಸೆಂದಿರಲ್ಲಿ ಬಾದಶಹರಿಗೆ ಕೇವಲ ಪ್ರೀಯಳಾಗಿದ್ದಳೆಂಬದನ್ನು ವಾಚಕರು ಅರಿತಿರುವರು. ಈ ವಿಚಾರವು ಮನಸ್ಸಿನಲ್ಲಿ ಬಂದಕೂಡಲೆ ಆಕೆಗೆ ಒಂದುಬಗೆಯ ಸಮಾಧಾನವಾದಂತಾಗಿ, ತಡಮಾಡನೆ ಬಾದಶಹರಬಳಿಗೆ ಹೋಗುವದಕ್ಕಾಗಿ ಆಕೆಯು ಹೊರಟಳು. ಆಕೆಯು ಬಾದಶಹರು ಮಲಗಿರುವ ಕೋಣೆಯ ಬಾಗಿಲಿಗೆ ಹೋದಾಗ ಬಾದಶಹರು ಬೇನೆಯ ವ್ಯಥೆಯಿಂದ ತಳಮಳಿಸುತ್ತಿದ್ದರು. ಅವರ ಜ್ವರದ ಮಾನವು ಲೇಶವಾದರೂ ಕಡಿಮೆಯಾಗಿದ್ದಿಲ್ಲ. ಹಕೀಮನು ಅತ್ಯಂತ ಚಿಂತಾತುರನಾಗಿದ್ದನು. ರಾಜಕಾರಣದ ಹಲವು ತೊಡಕುಗಳು ಮನಸ್ಸಿನಲ್ಲಿ ಬಂದದ್ದರಿಂದಂತು ಬಾದಶಹರ ಜೀವಕ್ಕೆ ಏನೂ ಬೇಡಾಗಿತ್ತು. ಎರಡನೆ ಯವರ ಸಂಗಡ ಮಾತು ಬೇಡ–ಕಥೆ ಬೇಡ, ಒಬ್ಬರೇ ಏಕಾಂತದಲ್ಲಿ ಮಲಗಿ ಕೊಳ್ಳಲು ಅವರು ಇಚ್ಛಿಸಿದರು. ಆದ್ದರಿಂದ ಕಾವಲುಗಾರರಾದ ತಾರ್ತರಿ ದಾಸಿಯರ ಹೊರತು ಬೇರೆ ಯಾರೂ ಒಳಗೆ ಇರಲಾಗದೆಂದು ಎಲ್ಲರನ್ನು ಹೊರಗೆ ಕಳಿಸಿದ್ದರು. ಇಂಥ ಅಸಮಾಧಾನದ ಸ್ಥಿತಿಯಲ್ಲಿ ದುರ್ದೈವಿಯಾದ ಜೋಧಬಾಯಿಯು ಬಾದಶಹರನ್ನು ಕಾಣಲಿಕ್ಕೆ ಬಂದಿದ್ದಳು. ಆಕೆಯು ಕಾಣಲಿಕ್ಕೆ ಬಂದ ವರ್ತಮಾನವನ್ನು ದಾಸಿಯು ಅಂಜುತ್ತಂಜುತ್ತ

ಹೇಳಲು, ಬಾದಶಹರು ಆ ಶಾಹೀಬೇಗಮೆಯನ್ನು ಕರತರಲು ದಾಸಿಯನ್ನು ಆಜ್ಞಾಪಿಸಿದರು.

ಜೋಧಬಾಯಿಯ ಹೊರತು ಮತ್ತೊಬ್ಬರಾರಾದರೂ ಬಂದಿದ್ದರೆ ಬಾದಶಹರು ಸರ್ವಥಾ ಅವರನ್ನು ಕಾಣುತ್ತಿದ್ದಿಲ್ಲ. ಅವರು ನಿಜವಾಗಿಯೇ ಶಾಹೀಬೇಗಮೆಯ ಮೇಲೆ ಅಷ್ಟು ಲೋಭವನ್ನು ಮಾಡುತ್ತಿದ್ದರು. ರತ್ನಾಲಂಕಾರಗಳಿಂದ ಅಲಂಕೃತಳಾದ ಅಪೂರ್ವ ಲಾವಣ್ಯಮಯೀ ಜೋಧ ಬಾಯಿಯು ಒಳಗೆ ಬಂದು ದಾಸಿಗೆ ಹೊರಗೆ ಹೋಗಲು ಸನ್ನೆಮಾಡಿದಳು. ಪರಿಜನರಾರೂ ಇಲ್ಲದ್ದನ್ನು ನೋಡಿ ಶಾಹೀಬೇಗಮೆಯು ಯಥಾಯೋಗ್ಯ ವಾಗಿ ಬಾದಶಹರಿಗೆ ಕುರ್ನಿಸಮಾಡಿ ಖಿನ್ನ ಸ್ವರದಿಂದ—"ದಯಾಮಯ ನಾದ ಖುದಾ, ಹಿಂದುಸ್ಥಾನದ ಬಾದಶಹನನ್ನು ಚಿರಂಜೀವಿಯಾಗ ಮಾಡು" ಎಂದು ಪ್ರಾರ್ಥಿಸಿದಳು. ತನ್ನ ಸೊಸೆಯ ಖಿನ್ನವಾದ ಮುಖಮುದ್ರೆಯನ್ನು ನೋಡಿ ಬಾದಶಹನು ಸ್ನೇಹಪೂರ್ಣ ಸ್ವರದಿಂದ—"ಬಂದೆಯಾ ತಂಗೀ, ಒಳಿತಾಯಿತು ಕುಳಿತುಕೋ ನಿನ್ನೊಡನೆ ಒಂದು ಮಹತ್ವದ ಮಾತಿನ ಸಲು ವಾಗಿ ಮಾತಾಡಲು ನಾನು ಅತ್ಯಂತ ಉತ್ಸುಕನಾಗಿದ್ದೆನು. ನನ್ನ ಸಲುವಾಗಿ ನೀನು ಖುದಾನನ್ನು ಕುರಿತು ಪ್ರಾರ್ಥಿಸಿದ್ದು ಬಹಳಮಾಡಿ ಖುದಾನಿಗೆ ಸಮ್ಮತವಾಗಲಿಕ್ಕಿಲ್ಲ. ತಂಗೀ ಜೋಧಾ, ಈ ಜಗತ್ತಿನಲ್ಲಿ ಎಷ್ಟು ದಿನ ಬಾಳಿದರೂ ಒಂದು ದಿನ ಪ್ರಾಣಿಗಳು ಇದನ್ನು ಬಿಟ್ಟು ಹೋಗಲೇಬೇಕಾ ಗಿರುವದು ಖುದಾನ ವಿಶಾಲವಾದ ಈ ವಿಶ್ವರೂಪಮಂದಿರದಲ್ಲಿ ನಮ್ಮ ನಮ್ಮ ಕರ್ಮದಂತೆ ಖುದಾನ ತಂತ್ರಕ್ಕೊಳಗಾಗಿ ಕೆಲದಿನ ಸುಖದುಃಖಗಳನ್ನು ಭೋಗಿಸುತ್ತ ನಾವು ಇರುವೆವು. ಆತನ ಈ ವಿಶ್ವರೂಪ ಮಂದಿರದೊಳಗಿನ ಎಲ್ಲ ವ್ಯವಹಾರಗಳು ಖುದಾನ ಆ ತಂತ್ರಕ್ಕೊಳಗಾಗಿ ಆಗುವವಲ್ಲದೆ, ನಿಜ ವಾದ ಸ್ವಾತಂತ್ರ್ಯವು ಎಳ್ಳಷ್ಟಾದರೂ ಯಾರಿಗೂ ಇರುವದಿಲ್ಲ. ಈ ಮಾತನ್ನು ಮರೆತು ತಮತಮಗೆ ಪ್ರಾಪ್ತವಾಗಿದ್ದ ಸುಖದುಃಖಾದಿಗಳಿಗೆ ತಾವೇ ಕಾರಣ ರೆಂತಲೂ, ಖುದಾನದಾಗಿರುವ ಸೊತ್ತು ತಮ್ಮದೇ ಎಂತಲೂ ತಿಳಿದು ನಾವು ಸುಖ ಬಂದಾಗ ಹಿಗ್ಗುತ್ತಲೂ, ದುಃಖ ಬಂದಾಗ ಕುಗ್ಗುತ್ತಲೂ ಇರುವೆವು; ಆದರೆ ಇದು ನ್ಯಾಯವಲ್ಲ. ಕಡೆಗೆ ದೇವರ ಸಂಕೇತದಂತೆ ಆತನ ಮನೆ ಯನ್ನು ಬಿಟ್ಟು ಹೋಗುವಾಗ ಅದರ ವಿಷಯವಾಗಿ ಯಾವ ವಾಸನೆಯನ್ನೂ

ಇಡದೆ ಶಾಂತಿಯನ್ನು ತಾಳುವದು ಜ್ಞಾನಿಗಳ ರೀತಿಯು. ಅಂಥವರು ಮರಣದ ಸಲುವಾಗಿಯಾಗಲಿ-ಹಿಂದುಮುಂದಿನ ವ್ಯವಸ್ಥೆಯ ಸಲುವಾಗಿ ಯಾಗಲಿ ಯಾವ ಚಿಂತೆಯನ್ನೂ ತಾಳುವದಿಲ್ಲ; ಯಾಕಂದರೆ ಈ ಸೃಷ್ಟಿಯ ಚಾಲಕತ್ವದ ಅಗಾಧ ಜ್ಞಾನವು ದೇವರಲ್ಲಿ ಮಾತ್ರ ಇರುವದೆಂದು ಅವರು ಸಂಪೂರ್ಣವಾಗಿ ಅರಿತಿರುವರು. ಪ್ರಿಯ ಜೋಧಾ, ನಿನ್ನ ಮಾವನು ನಾನು ಮುಪ್ಪಿನವನಾಗಿರುವೆನು; ಖುದಾನ ಕೃಪೆಯಿಂದ ಈ ವರೆಗೆ ನಾನು ಮಹದ್ವೈಭವವನ್ನೂ, ಕೀರ್ತಿಯನ್ನೂ ಪಡೆದು ಅಪೂರ್ವ ಸುಖವನ್ನು ಭೋಗಿಸಿದೆನು. ಅಂದಬಳಿಕ ಹಳಬನಾದ ನಾನು ಇನ್ನು ಹೊಸಬರ ಸಲುವಾಗಿ ನನ್ನ ಸ್ಥಳವನ್ನು ಬಿಟ್ಟು ಹೋಗುವದು ಯೋಗ್ಯವಲ್ಲವೆ ? ಅದು ಯೋಗ್ಯವಿರಲಿ, ಅಯೋಗ್ಯವಿರಲಿ ಹೀಗೆ ಹಳಬರು ಹೊಸಬರ ಸಲುವಾಗಿ ತಮ್ಮದೆಂದು ತಿಳಿದುಕೊಂಡದ್ದನ್ನು ಬಿಟ್ಟು ಹೋಗಲೇಬೇಕಾಗುವದೆಂಬದು ಖುದಾನ ಸಂಕೇತವಾಗಿರುವದು. ಆದ್ದರಿಂದ ಇನ್ನು ನಾನು ಬದುಕಲು ಇಚ್ಛಿಸುವದಿಲ್ಲ. ಖುದಾನು ತನ್ನ ಮನಸ್ಸಿಗೆ ಬಂದಂತೆ ಮಾಡಲಿ. ಈ ವರೆಗೆ ರಾಜ್ಯಮಂದಿರದಿಂದ ಮತ್ತನಾಗಿ ನಾನು ಖುದಾನನ್ನು ಲೆಕ್ಕಿಸದಿರುವ ಅಪರಾಧಕ್ಕಾಗಿ ಆತನಲ್ಲಿ ಕ್ಷಮೆಯನ್ನು ಯಾಚಿಸುವೆನು; ಆದರೆ ಪ್ರಿಯ ಜೋಧಾ, ನೀನೂ ಅದರಂತೆ ಖುದಾನನ್ನು ಮನಸ್ಸಿನಿಂದ ಪ್ರಾರ್ಥಿಸು. ನೀನು ಇನ್ನು ನಿಃಸಂಶಯವಾಗಿ ಹಿಂದುಸ್ಥಾನದ ರಾಜರಾಜೇಶ್ವರಿಯಾಗುವೆ. ನಿನ್ನ ಪತಿಯಾದ ಸೇಲೀಮನು ಹಿಂದುಸ್ಥಾನದ ಸಾರ್ವಭೌಮನಾಗುವನು. ಬಹಳ ಹೇಳುವದೇನು, ಇದೇ ವಾರದಲ್ಲಿ ಈ ಪರಿವರ್ತನವು ಆಗುವ ಸಂಭವ ವಿರುವದು. ಪ್ರಿಯ ಜೋಧಾ, ಗೌರವದ ಅಂಬರ ರಾಜಕುಮಾರಿ ಯಾದ ನಿನ್ನನ್ನು ರಾಜರಾಜೇಶ್ವರಿಯಾಗಮಾಡಬೇಕೆಂತಲೇ ನಾನು ಸುಲ್ತಾನ ಸೇಲೀಮನೊಡನೆ ನಿನ್ನ ಲಗ್ನಮಾಡಿರುವೆನು. ನನ್ನ ಆ ಮನೋದಯವು ಈಗ ಪೂರ್ಣವಾಗುವದರಿಂದ ನನಗೆ ಬಹಳ ಸಂತೋಷವಾಗಿರುತ್ತದೆ.

ಬಾದಶಹನ ಪ್ರೇಮದ ಈ ಅನುಕೂಲ ಭಾಷಣದಿಂದ ಜೋಧ ಬಾಯಿಯು ಸಂತುಷ್ಟಳಾಗಿ ಸುಮ್ಮನಿದ್ದರೆ, ಬಹಳ ನೆಟ್ಟಗಾಗುತ್ತಿತ್ತು; ಆದರೆ ಆಕೆಯ ದುರ್ದೈವವು ಹಾಗೆ ಸುಮ್ಮನಿರಗೊಡಲಿಲ್ಲ. ತನ್ನ ಪತಿಯು ಬಾದಶಹನಾದರೂ ತನ್ನ ಮಗನ ಜೀವವು ಸುರಕ್ಷಿತವಾಗದೆಂಬ ದುಃಖವು

ಆಕೆಯ ಹೊಟ್ಟೆಯಲ್ಲಿ ತುಂಬಿತ್ತು. ಆ ದುಃಖವು ಬಾದಶಹನ ಪ್ರೇಮದ ಮಾತುಗಳಿಂದ ಉಕ್ಕಿಬಂದು ಹೊಟ್ಟೆಯಲ್ಲಿ ಹಿಡಿಸಲಾರದೆ ಅಶ್ರುರೂಪದಿಂದ ಹೊರಬಿದ್ದು, ಆ ಅಶ್ರುವಿನದೊಂದು ಬಿಸಿ ಹನಿಯು ಬಾದಶಹನ ಕೈಮೇಲೆ ಬಿದ್ದಿತು. ಆಗ ಬಾದಶಹನು ಆಕೆಯ ಕಡೆಗೆ ನೋಡಿ— ತಂಗೀ, ನೀನು ಅಳುವೆಯೇಕೆ? ನೀನು ಸಮಗ್ರ ಹಿಂದುಸ್ಥಾನದ ರಾಜರಾಜೇಶ್ವರಿಯಾಗಿ ರುವೆ. ಅಂದಬಳಿಕ ನಿನ್ನ ಕಣ್ಣುಗಳಲ್ಲಿ ಅಶ್ರುಗಳುದುರಬಹುದೆ? ಜೋಧಾ, ಅಳಬೇಡ, ನನ್ನನ್ನು ಸಮಾಧಾನದಿಂದ ಸಾಯಗೊಡು! ನಿನ್ನ ಈ ಅಶ್ರು-ಪೂರ್ಣ ನೇತ್ರಗಳನ್ನು ನೋಡುವ ನಾನು, ಸ್ವರ್ಗದಲ್ಲಿ ಹೋದರೂ ಸುಖಿಯಾಗಲಾರೆನು. ಮೊಗಲ ವಂಶದ ಐಶ್ವರ್ಯಕ್ಕೆ ನೀನು ದೀಪಪ್ರಾಯಳಾಗಿರುವೆ. ನಾನು ಆಗಲೆ ಹೇಳಿದಂತೆ ಈ ಜಗತ್ತಿನ ಸಂಸಾರವು ನಶ್ವರವಾಗಿದ್ದು, ಇದರಲ್ಲಿ ಸಂಯೋಗವಿಯೋಗಗಳು ಆಗಾಗ್ಗೆ ಆಗುತ್ತಲೇ ಇರುವವು. ಆದ್ದರಿಂದ ನೀನು ನನ್ನ ಸಲುವಾಗಿ ದುಃಖವನ್ನಾಗಲಿ – ಚಿಂತೆಯನ್ನಾಗಲಿ ಮಾಡಬೇಡ. ನಿನ್ನ ಮನಸ್ಸನ್ನು ಸಮರ್ಥವಾಗಮಾಡು. ರಜಪೂತರ ಚಿರಸಹಚಾರಣಿಯಾದ ದೃಢತೆಯನ್ನು ತಾಳಲು ನೀನು ಪ್ರಯತ್ನ ಮಾಡು." ಎಂದು ಹೇಳಿದನು. ಆಗ ಜೋಧಬಾಯಿಯು ಒಮ್ಮೆ ನಿಟ್ಟುಸಿರುಬಿಟ್ಟು ಕರುಣಾ ವಾಣಿಯಿಂದ—

ಜೋಧಬಾಯಿ— ಭಾರತೇಶ್ವರ! ಶಹಾನಶಹಾ!! ತಾವು ಹಿಂದುಸ್ಥಾನದ ದಯಾಳು ಬಾದಶಹರಿರುವದರಿಂದ ನನ್ನದೊಂದು ಸಣ್ಣ ಪ್ರಾರ್ಥನೆಯನ್ನು ನಡೆಸಿಕೊಡುವಿರಾ?

ಅಕಬರ (ಆಶ್ಚರ್ಯದಿಂದ ನೋಡುತ್ತ)— ತಂಗೀ, ನನ್ನ ಬಳಿಯಲ್ಲಿ ನಿನ್ನ ಪ್ರಾರ್ಥನೆಯೇನಿರುವದು? ಕೋಟ್ಯವಧಿ ರೂಪಾಯಿಗಳ ವಸ್ತ್ರ-ಒಡವೆಗಳನ್ನು ನಿಮ್ಮಿಬ್ಬರಿಗೆ ನಾನು ಕೊಟ್ಟಿರುವೆನು. ಈಗ ಈ ದಿಲ್ಲಿಯ ಸಿಂಹಾಸನವನ್ನು ನಾನು ಸೇಲೀಮನಿಗೆ ಕೊಡಬೇಕೆಂದಿರುವೆನು; ಅಂದಬಳಿಕ ಜೋಧಾ, ನಾನು ಇನ್ನೇನು ಕೊಡಲಿ! ಆದರೆ ಹೌದು, ಇನ್ನೊಂದು ಅಮೂಲ್ಯ ವಸ್ತುವನ್ನು ಇನ್ನೂ ನಾನು ನಿನಗೆ ಕೊಟ್ಟಿರುವದಿಲ್ಲ.

ಈ ಮೇರೆಗೆ ನುಡಿದು ಅಕಬರಬಾದಶಹನು ತನ್ನ ಹಾಸಿಗೆಯಿಂದ ಅರ್ಧ ಎದ್ದು, ತನ್ನ ಗಾದಿಯ ಬುಡದಲ್ಲಿರುವ ಸಣ್ಣದೊಂದು ಕೀಲಿಯ

ಕೈಯನ್ನು ಹೊರಗೆ ತೆಗೆದು ಜೋಧಬಾಯಿಯ ಕೈಯಲ್ಲಿ ಕೊಟ್ಟು– "ಹಿಂದಿನ ಖಾಸಮಹಾಲಿನಲ್ಲಿ ಆನೆಯ ಜಂತದ್ದೊಂದು ಪೆಟ್ಟಿಗೆಯಿರುವದು, ಅದನ್ನು ಈ ಕೀಲಿಯಕೈಯಿಂದ ತೆಗೆದಕೂಡಲೆ ಅದರೊಳಗೊಂದು ಸಣ್ಣ ಪೆಟ್ಟಿಗೆ ಇದ್ದದ್ದು ನಿನಗೆ ಕಾಣಬಹುದು. ಆ ಸಣ್ಣ ಪೆಟ್ಟಿಗೆಯನ್ನು ನನ್ನ ಕಡೆಗೆ ತಕ್ಕೊಂಡು ಬಾ ಹೋಗು, ಎಂದು ಹೇಳಲು, ಕೂಡಲೆ ಶಾಹೀಬೇಗಮೆಯು ಎದ್ದು ಸಮೀಪದಲ್ಲಿರುವ ಕೋಣೆಯೊಳಗೆ ಹೋಗಿ ಆ ಪೆಟ್ಟಿಗೆಯನ್ನು ತಕ್ಕೊಂಡುಬಂದು ಬಾದಶಹನ ಕೈಯಲ್ಲಿ ಕೊಟ್ಟಳು. ಬಾದಶಹನು ಅದರೊಳಗಿಂದ ಒಂದು ರತ್ನಹಾರವನ್ನೂ, ಒಂದು ಮುತ್ತಿನ ಹಾರವನ್ನೂ ತೆಗೆದು ಅವನ್ನು ಶಾಹೀಬೇಗಮೆಯ ಕೈಯಲ್ಲಿ ಕೊಟ್ಟು— "ನೀನು ಭಾರತ ವರ್ಷದ ಭಾವೀ ಸಾಮ್ರಾಜ್ಞಿಯಿರುತ್ತೀ. ನೀನು ಪ್ರಥಮದಲ್ಲಿ ಸಿಂಹಾಸನ ವೇರುವಾಗ ಈ ನನ್ನ ಆಶೀರ್ವಾದಮಯವಾದ ಮಂಗಲ ಹಾರವನ್ನು ಕೊರಳಲ್ಲಿ ಹಾಕಿಕೋ. ಗೋವಳಕೊಂಡವನ್ನು ಗೆದ್ದಬಳಿಕ ಅಲ್ಲಿಯ ಬೆಲೆಯುಳ್ಳ ರತ್ನಗಳ ಈ ಹಾರವನ್ನು ನಿನ್ನ ಸಲುವಾಗಿ ಮಾಡಿಸಿ ಇಟ್ಟಿದ್ದೆನು. ಇದರ ಬೆಲೆಯು ಒಂದು ಕೋಟಿ ರೂಪಾಯಿ ಇರುವದು. ಅದರಂತೆ, ಈ ಮುತ್ತಿನ ಹಾರನಾದರೂ ಕಡಿಮೆ ಬೆಲೆಯದಿರುವದಿಲ್ಲ. ಇದನ್ನು ನಿನ್ನ ಸೊಸೆಯಾದ ಪ್ಯಾರೀಬಾನುವಿಗೆ ಕೊಡು; ಯಾಕಂದರೆ ಆಕೆಗೆ ಮುತ್ತಿನ ಹಾರಗಳು ಬಹಳ ಸೇರುವವು" ಎಂದು ಹೇಳಿದನು. ಶಾಹೀಬೇಗಮೆಗೆ ಆ ಹಾರಗಳ ಇಚ್ಛೆಯಿಲ್ಲದಿದ್ದರೂ ಬಾದಶಹನ ಅಪ್ಪಣೆಯನ್ನು ಮೀರಲಾರದೆ ಆದರಪೂರ್ವಕವಾಗಿ ಅವನ್ನು ಇಸಕೊಂಡಳು. ಆ ಮೇಲೆ ದೃಢ ಸ್ವರದಿಂದ ಆಕೆಯು ಮತ್ತೆ ಬಾದಶಹನನ್ನು ಕುರಿತು—

ಜೋಧಬಾಯಿ— ಪ್ರಿಯ ಮಾವನವರೆ, ನಾನು ಈ ರತ್ನಹಾರದ ಆಶೆಯಿಂದ ತಮ್ಮ ಚರಣಸನ್ನಿಧಿಗೆ ಬಂದಿದ್ದಿಲ್ಲ. ಸ್ತ್ರೀ ಜನ್ಮದ ಸಾರ್ಥಕತೆಯ ಲಕ್ಷಣವಾಗಿರುವದೊಂದು ಅಮೂಲ್ಯ ರತ್ನವು ಭಿಕ್ಷಾರೂಪವಾಗಿ ನನಗೆ ಬೇಕಾಗಿರುವದು. ಅದು ತಮ್ಮ ಕಡೆಯಿಂದ ದೊರೆಯುವದೆಂಬ ನಂಬಿಗೆ ಇದ್ದದ್ದರಿಂದ ನಾನು ಧಾವಿಸಿ ಬಂದಿರುವೆನು, ಅನ್ನಲು, ಅಕಬರಬಾದಶಹನು ಒಳ್ಳೇ ಗೂಢ ವಿಚಾರಕ್ಕೊಳಗಾಗಿ ಜೋಧಬಾಯಿಯನ್ನು ಕುರಿತು ಮತ್ತೆ— ತಂಗೀ, ಇಷ್ಟು ದೊಡ್ಡ ಹಿಂದುಸ್ಥಾನವನ್ನು ನಿನಗೆ ಕೊಟ್ಟಿದ್ದು, ನೀನು

ಮತ್ತೆ ಏನನ್ನು ಅಪೇಕ್ಷಿಸುವೆಯೋ ನನಗೆ ತಿಳಿಯದು! ಆದರೆ ಹೇಳು, ಏನು ಬೇಕೆಂಬುದನ್ನು ಸ್ಪಷ್ಟವಾಗಿ ಹೇಳು. ಮಾನವ ಪ್ರಾಣಿಗೆ ಕೊಡಲು ಶಕ್ಯವಾಗಿರುವ ಎಂತಹ ಉಚ್ಚ ಫಲವನ್ನಾದರೂ ಕೊಡಲು, ಹಿಂದುಸ್ಥಾನದ ಬಾದಶಹನು ನಾನು ಇನ್ನೂ ಸಮರ್ಥನಿರುವೆನು, ಎಂದು ಹೇಳಿದನು. ಬಾದಶಹನ ಈ ಪ್ರೇಮಲ ಮಾತುಗಳನ್ನು ಕೇಳಿಯಾದರೂ ಜೋಧ-ಬಾಯಿಯು ಸಂತುಷ್ಟಳಾಗಿ ಬಾದಶಹನ ಮನಸ್ಸನ್ನು ನೋಯಿಸುವ ಗೊಡವಿಗೆ ಹೋಗಬಾರದಾಗಿತ್ತು. ಯಾಕಂದರೆ, ತಾನು ಹಿಂದುಸ್ಥಾನದ ರಾಜರಾಜೇಶ್ವರಿಯಾದಬಳಿಕ ತನ್ನ ಪತಿಯಾದ ಸುಲ್ತಾನ ಸೇಲೀಮನ ಮನಸ್ಸನ್ನು ಪ್ರೇಮದ ಬಲದಿಂದ ತನ್ನ ಕಡೆಗೆ ಎಳೆದುಕೊಂಡು, ತನ್ನ ಮಗನ ಅಪರಾಧವನ್ನು ಕ್ಷಮಿಸುವಂತೆ ಮಾಡಿಕೊಳ್ಳುವದು ಆಕೆಗೆ ಅಶಕ್ಯವಾಗಿದ್ದಿಲ್ಲ. ಆಕೆಯು ಹಿಂದಕ್ಕೆ ಒಂದು ಪ್ರಸಂಗದಲ್ಲಿ ಯಮುನೆಯಲ್ಲಿ ಹಾರಿಕೊಳ್ಳುವದನ್ನು ನಿಷೇಧಿಸಿ, ತಾನು ಬದುಕಿ ಇದ್ದು ರಾಜರಾಜೇಶ್ವರಿಯಾಗಿ ಹೀಗೆ ಮಗನನ್ನು ಉಳಿಸಿಕೊಳ್ಳಬಹುದೆಂದು ಯೋಚಿಸಿದ್ದು ವಾಚಕರ ಲಕ್ಷದಲ್ಲಿರಬಹುದು. ಆದರೆ "ವಿನಾಶಕಾಲೇ ವಿಪರೀತಬುದ್ಧಿಃ" ಎಂಬಂತೆ, ಆ ಬೇಗಮೆಯ ಮನಸ್ಸಿನಲ್ಲಿ ತನ್ನ ಪತಿಯು ಏನು ಮಾಡಿದರೂ ತನ್ನ ಮಗನನ್ನು ಕ್ಷಮಿಸಲಾರನೆಂಬ ಹುಚ್ಚು ಹೊಕ್ಕುಬಿಟ್ಟಿತು. "ಭವಿತವ್ಯಂ ಭವತೇವ ನಾರಿಕೇಲ ಫಲಾಂಬುವತ್" ಎಂಬಂತೆ, ಅವರವರ ಪ್ರಾಚೀನ ಕರ್ಮಕ್ಕನುಸರಿಸಿ ಅಕಸ್ಮಾತ್ ಆಗುವದು ಆಗಿಯೇ ಹೋಗುತ್ತಿರುತ್ತದೆ. ಅದರಂತೆ ಜೋಧಬಾಯಿಯ ಪ್ರಾರಬ್ಧದಲ್ಲಿ ರಾಜರಾಜೇಶ್ವರಿಯಾಗುವ ಯೋಗವು ಇಲ್ಲದ್ದರಿಂದ, ಆಕೆಗೆ ತನ್ನ ಪತಿಯ ವಿಷಯವಾಗಿ ಈ ಬಗೆಯು ಕೆಟ್ಟ ಕಲ್ಪನೆಯು ಆಗಿಹೋಯಿತು. ಹೀಗೆ ಕಲ್ಪನೆಯಾಗಲಿಕ್ಕೆ ಬೇರೊಂದು ಕಾರಣವೂ ಇತ್ತೆಂಬದನ್ನು ಮಾತ್ರ ನಾವು ಇಲ್ಲಿ ಹೇಳದೆ ಇರಲಾರೆವು. ಇತ್ತಿತ್ತ ಸೇಲೀಮನು ನೂರಜಹಾನಳಿಗೆ ಮನಸೋತು ಆಕೆಯ ಪ್ರಾಪ್ತಿಗಾಗಿ ವಿಶ್ವಪ್ರಯತ್ನ ಮಾಡತೊಡಗಿದ್ದನು; ಆದರೆ ಜೋಧಬಾಯಿಯಂಥ ಅಭಿ-ಮಾನದ ಪತಿವ್ರತಾ ಸ್ತ್ರೀಯರಿಗೆ ಈ ಮಾತು ವಿಷಾದಕಾರಕವಾಗಿದ್ದರೆ ಆಶ್ಚರ್ಯವಲ್ಲ. ತನ್ನ ಪತಿಯು, ನೂತನ ರಾಣಿಯಾಗಬೇಕೆಂದಿರುವ ನೂರಜಹಾನಳ ಅಧೀನನಾದರೆ, ನನ್ನ ಮಾತು ಯಾಕೆ ಕೇಳುವನೆಂಬ

ಮಾತ್ಸರ್ಯವೂ, ಅಪನಂಬಿಗೆಯೂ ಆಕೆಯಲ್ಲಿ ಉತ್ಪನ್ನವಾಗತೊಡಗಿದ್ದವು. ಈ ಎಲ್ಲ ಕಾರಣಗಳಿಂದ ಆಕೆಯು ಒಂದು ಬಗೆಯ ವೈರಾಗ್ಯವನ್ನು ತಾಳಿ, ತನ್ನ ಮಗನ ಜೀವವಷ್ಟು ಉಳಿದರೆ ಸಾಕೆಂಬ ಔದಾಸೀನ್ಯದಿಂದ ಬಾದಶಹ ನನ್ನು ಕುರಿತು— "ಯಾವತ್ತು ಹಿಂದುಸ್ಥಾನದ ಅಧಿಕಾರದ ಅವಶ್ಯಕತೆಯು ನನಗೆ ಇಲ್ಲವೇ ಇಲ್ಲ ಜಹಾಪನಾ! ದಕ್ಷಿಣದಲ್ಲಾಗಲಿ, ಬಂಗಾಲದಲ್ಲಾಗಲಿ ಎಲ್ಲಿಯೇ ಆಗಲಿ ನನಗೊಂದು ಸಣ್ಣ ಜಹಗೀರು ಹಾಕಿಕೊಡುವ ವ್ಯವಸ್ಥೆ ಮಾಡಿರಿ; ಅಂದರೆ ನಾನು ಖುಸರುವನ್ನು ಕರಕೊಂಡು ಅಲ್ಲಿ ಹೋಗಿ ಇದ್ದು ಬಿಡುವೆನು." ಎಂದು ಕೇಳಿಬಿಟ್ಟಳು.

ಜೋಧಬಾಯಿಯು ಈ ಮಾತುಗಳನ್ನು ಕೇಳಿ ಬಾದಶಹನ ನಿಸ್ತೇಜ ಮುಖದೊಳಗಿನ ಹುಬ್ಬುಗಳು ವಕ್ರವಾದವು. ಜೋಧಬಾಯಿಯು ಹೀಗೆ ಕೇಳಿಕೊಳ್ಳುವದರ ಕಾರಣವನ್ನು ಶಾಂತರೀತಿಯಿಂದ ವಿಚಾರಿಸುವದು ಮರ-ಣೋನ್ಮುಖ ಬಾದಶಹನಿಗೆ ಶಕ್ಯವೂ ಇದ್ದಿಲ್ಲ. ತನ್ನ ಮಗ ಸೇಲೀಮನಿಗೆ ಪಟ್ಟವಾಗುವದು ಜೋಧಬಾಯಿಯ ಮಾತ್ಸರ್ಯಕ್ಕೆ ಕಾರಣವಾಗಿರುವದೆಂಬ ಭಾವನೆಯು ಬಾದಶಹನದಾಗಿ ಬಿಟ್ಟಿತು. ಅಷ್ಟಕ್ಕೇ ಬಾದಶಹನ ರೋಗ ತ್ರಸ್ತಹೃದಯವು ಕ್ಷುಬ್ಧವಾಗಿ ಆತನು ಜೋಧಬಾಯಿಯನ್ನು ಕುರಿತು ತೀವ್ರ ಸ್ವರದಿಂದ— "ಏನಂದಿ ಜೋಧಾ, ನಿನಗೊಂದು ಸಣ್ಣ ಜಹಗೀರು ಬೇಕೆ? ಶಾಹೀಬೇಗಮು! ಇಷ್ಟು ಹೊತ್ತಿನ ಮೇಲೆ ನಿನ್ನ ಮನಸ್ಸಿನೊಳಗಿನ ಮಾತು ನನಗೆ ಗೊತ್ತಾಯಿತು? ಮಾನಸಿಂಹನ ಕಾಪಟ್ಯದ ನಡತೆಯ ಬಲೆಯಲ್ಲಿ ನೀನೂ ಸಿಕ್ಕಿರುವಂತೆ ತೋರುತ್ತದೆ. ಮಾನಸಿಂಹನ ಬಲವು ತನಗಿರುವ ದೆಂಬ ಹೆಮ್ಮೆಯಿಂದಲೇ ನಿನ್ನ ಮಗನಾದ ಖುಸ್ರುವು ತನಗೆ ಜನ್ಮಕೊಟ್ಟ ತಂದೆಯ ಅಪಮಾನವನ್ನು ಮೊನ್ನೆ ನನ್ನ ಕಣ್ಣೆದುರಿಗೆ ಮಾಡಿದನು. ಆನೆಯ ಕಾಳಗವೆಂದರೇನು, ಎಲ್ಲರ ಸಮಕ್ಷ ತನ್ನ ತಂದೆಗೆ ಬಾಯಿಗೆ ಬಂದ ಹಾಗೆ ಅನ್ನುವದೆಂದರೇನು? ಆಡಬಾರದು; ಆದರೆ ನಿನ್ನ ಮುಂದೆ ಇಂದು ಸ್ಪಷ್ಟವಾಗಿ ಆಡಿಬಿಡುತ್ತೇನೆ. ನನ್ನ ರೋಗವು ಇಷ್ಟು ವಿಕೋಪಕ್ಕೆ ಹೋಗ ಲಿಕ್ಕೆ ನಿಮ್ಮ ಈ ಬಗೆಯ ಗೃಹಕಲಹಗಳೇ ಮುಖ್ಯ ಕಾರಣಗಳಾಗಿರುತ್ತವೆ. ಶಾಹೀ, ಕೇವಲ ನಿನ್ನ ಮೋರೆಯನ್ನು ನೋಡಿಯೇ ನಾನು ಖುಸ್ರುವಿನ ಅಪರಾಧವನ್ನು ಕ್ಷಮಿಸಿದೆನು. ಈಗಾದರೂ ನಾನು ಹಿಂದುಸ್ಥಾನದ ಬಾದ

ಶಹನಾಗಿರುವದರಿಂದ ಬೇಕಾದವರನ್ನು ಶಿಕ್ಷಿಸುವ, ಅಥವಾ ಕ್ಷಮಿಸುವ ಅಧಿಕಾರವು ನನಗಿರುತ್ತದೆ. ನೀನು ಸೆರಗಿಗೆ ಗಂಟುಹೊಡೆದುಕೊಳ್ಳು; ಮೊಗಲ ಸಿಂಹಾಸನವು ನನ್ನ ಪಶ್ಚಾತ್ ನನ್ನ ಹಿರಿಯ ಮಗ ಸೇಲೀಮನಿಗೇ ದೊರೆಯುವದು. ಖುಸ್ರುವಿಗಂತು ಅದು ಸಿಗುವದೇ ಇಲ್ಲ; ಮತ್ತು ಮಾನಸಿಂಹನಂಥ ರಾಜದ್ರೋಹಿಯ ಸ್ಪರ್ಶವೂ ಆ ಸಿಂಹಾಸನಕ್ಕೆ ಆಗಲಾರದು." ಎಂದು ನುಡಿದು ಬಾದಶಹನು ಅತ್ಯಂತ ತ್ರಸ್ತನಾಗಿ ಉಸುರ್ಗಳೆಯುತ್ತಿರಲು, ಅಷ್ಟರಲ್ಲಿ ಖುಸ್ರುವು ತಾಯಿಯ ಪತ್ರದಂತೆ ಫತ್ತೆಪುರಸಿಕರಿಯಿಂದ ಅಲ್ಲಿಗೆ ಬಂದು ಬಿಟ್ಟನು. ಅಭಿಮಾನಿಗಳಾದ ರಜಪೂತರ ರಕ್ತವು ಮಿಶ್ರವಾಗಿದ್ದ ಆ ತರುಣ ಖುಸ್ರುವು ಮರೆಗೆ ನಿಂತು ತನ್ನ ತಾಯಿಯ, ಹಾಗು ಅಜ್ಜನ ಸಂವಾದವನ್ನು ಈ ಮೊದಲೆ ಕೇಳಿದ್ದನು; ಆದ್ದರಿಂದ ಪ್ರತಿಕೂಲಕಾಲಕ್ಕನುಸರಿಸಿ ಆತನು ಕ್ಷುಬ್ಧನಾಗಿ ಬಾದಶಹನನ್ನು ಕುರಿತು— "ಭಾರತೇಶ್ವರ, ತಮ್ಮ ಮಾತೇ ನಿಜವಾಗಿರುವದು; ಆದರೆ ಸಾಮ್ರಾಟ, ಈ ಅಧಮನಾದ ಖುಸ್ರುವು ಹಿಂದುಸ್ಥಾನದ ಸಿಂಹಾಸನವನ್ನು ಇಚ್ಛಿಸುವದಿಲ್ಲ. ನನ್ನ ಅಧಿಕಾರದೊಳಗಿಲ್ಲದ ಮಾತಿನ ಸಲುವಾಗಿ ನಾನು ಎಂದೂ ಮುಂದುವರಿಯಲಾರೆನು; ಆದರೆ ನನ್ನನ್ನು ಹಿಂದುಸ್ಥಾನದ ಬಾದಶಹನಾಗ ಮಾಡಬೇಕೆಂದು ರಾಜದ್ರೋಹಿಯಾದ ಮಾನಸಿಂಹನು ಯತ್ನಿಸುತ್ತಿರಬಹುದು; ಅದರಂತೆ ಜಹಾಪನಾಹ, ತಮ್ಮಂತೆ ಬೇರೆಯವರೂ ನನ್ನನ್ನು ಪಿತೃದ್ರೋಹಿಯೆಂದು ತಿಳಿಯುತ್ತಿರಬಹುದು; ಆದರೆ ನನ್ನ ತಾಯಿಯ ಸದುಪದೇಶವಾದಂದಿನಿಂದ ನಾನು ತಂದೆಯ ದ್ರೋಹವನ್ನು ಎಂದೂ ಚಿಂತಿಸಿರುವದಿಲ್ಲ. ನನ್ನ ಹೃದಯವು ಪಿತೃ ಭಕ್ತಿಯಿಂದ ಪೂರ್ಣವಾಗಿರುವದೆಂಬದನ್ನು ಖುದಾನು ಅರಿತಿರುವನು; ಆದರೆ ಜಹಾಪನ್ನಾಹ! ನನ್ನ ಮೇಲಿನ ಪ್ರೇಮದಿಂದ ಕಣ್ಣೀರು ಸುರಿಸುತ್ತಿರುವ ನನ್ನ ಈ ತಾಯಿಯ ಕಣ್ಣೀರು ಒರಿಸಿ, ಆಕೆಯನ್ನು ಶಾಂತಳಾಗಮಾಡಿರೆಂದಿಷ್ಟೇ ನಾನು ಬೇಡಿಕೊಳ್ಳುವೆನು. ಆಕೆಯ ಖಿನ್ನವಾದ ಮುಖಮುದ್ರೆಯು ಪ್ರಫುಲ್ಲಿತವಾಗಬೇಕೆಂಬದನ್ನಲ್ಲದೆ ಬೇರೆ ಯಾವದನ್ನು ನಾನು ಇಚ್ಛಿಸುವದಿಲ್ಲ.

ಈ ಮೇರೆಗೆ ಬಾದಶಹನ ಹಾಸಿಗೆಯ ಬಳಿಯಲ್ಲಿ ಮೊಣಕಾಲೂರಿ ಕುಳಿತುಕೊಂಡು ಮಾತಾಡುವ ಖುಸ್ರುವನ್ನು ಬಾದಶಹನು ನೋಡಿದನು;

ಆದರೆ ಆ ಅಚ್ಚಿಯ ಸುಂದರನಾದ ಮೊಮ್ಮಗನನ್ನು ನೋಡಿ ಎಂದಿನಂತೆ ಬಾಶಹನು ಅಂದು ಹರ್ಷಿತನಾಗಲಿಲ್ಲ; ಆತನ ಕಳವಳಿಕೆಯ ಮಾತುಗಳನ್ನು ಕೇಳಿ ಆತನು ಕನಿಕರ ಪಡಲೂ ಇಲ್ಲ. ಖುಸ್ರುವಿನ ದುರ್ದೈವದಿಂದಲೋ, ಅಥವಾ ರಾಜಕಾರಣದ ಬೇರೆ ಯಾವದೊಂದು ಗೂಢ ತಂತ್ರದಿಂದಲೋ ಬಾದಶಹನು ಖುಸ್ರುವಿನ ಮೇಲೆ ಕ್ಷೋಭಿಸಿ ಸಿಟ್ಟಿನಿಂದ ಆತನನ್ನು ಕುರಿತು ಕ್ರುದ್ಧ ಸ್ವರದಿಂದ—

ಬಾದಶಹ— ಖುಸ್ರೂ, ಯಾರ ಅಪ್ಪಣೆಯಿಂದ ಫತ್ತೇಪುರ ಸಿಕರಿ ಯನ್ನು ಬಿಟ್ಟು ನೀನು ಇಲ್ಲಿಗೆ ಬಂದೆ? ಮಾತಾಡು.

ಖುಸ್ರು— (ಸ್ವಾಭಿಮಾನಪೂರ್ಣ ಸ್ವರದಿಂದ) ಈ ನನ್ನ ಜನ್ಮದಾತೃ ವಾದ ತಾಯಿಯ ಅಪ್ಪಣೆಯಿಂದ ನಾನು ಇಲ್ಲಿಗೆ ಬಂದೆನು ಹುಜೂರ! ಯಾವಾಕೆಯ ಸ್ತನಪಾನದಿಂದ ಈ ದೇಹವು ಬೆಳೆದಿರುವದೋ, ಯಾವಾ ಕೆಯ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ಇಂದು ನಾನು ಮೊಗಲ ಚಕ್ರವರ್ತಿಯ ಅಕಬರರವರ ಮೊಮ್ಮಗನಾಗಿರುವೆನೋ, ಯಾವಾಕೆಯ ಉಪದೇಶದಿಂದ ನಾನು ಅಮಾರ್ಗದಿಂದ ಹೋಗಲಿಕ್ಕೆ ಅಂಜುತ್ತಿರುವೆನೋ ಇಂಥ ನನ್ನ ಗುರುಸ್ವರೂಪಳಾದ ಈ ನನ್ನ ತಾಯಿಯ ಅಪ್ಪಣೆಯನ್ನು ನಾನು ಹೇಗೆ ಮೀರಲಿ?

ಬಾದಶಹ— ( ಮತ್ತಿಷ್ಟು ಸಿಟ್ಟಾಗಿ ) ರಾಜಕಾರಣದಲ್ಲಿ ವ್ಯಕ್ತಿಯ ಸಂಬಂಧದ ಯಾವ ಸಂಗತಿಯನ್ನೂ ಲಕ್ಷಿಸಲಾಗುವದಿಲ್ಲ. ರಾಜಕಾರಣದ ಗೂಢವಾದ ಉದ್ದೇಶದಿಂದಲೇ ನಾನು ನಿನ್ನನ್ನು ಫತ್ತೇಪುರ ಸಿಕರಿಗೆ ಕಳಿಸಿ ದ್ದೆನು. ಹೋಗುವಾಗ ನಿನ್ನನ್ನು ಕುರಿತು ಬುದ್ಧಿಪೂರ್ವಕವಾಗಿ— "ನನ್ನ ಎರಡನೆಯ ಅಪ್ಪಣೆಯಾಗುವವರೆಗೆ ನೀನು ಫತ್ತೇಪುರದ ರಾಜಮಂದಿರವನ್ನು ಸರ್ವಥಾ ಬಿಟ್ಟು ಬರಲಾಗದೆಂ"ದು ನಾನು ಆಜ್ಞಾಪಿಸಿದ್ದಿಲ್ಲವೆ? ಭಾರತ ಸಾಮ್ರಾಟನ ಆಜ್ಞೆಯನ್ನುಲ್ಲಂಘಿಸಿದವರಿಗೆ ಯಾವ ಶಿಕ್ಷೆಯಾಗುವದೆಂಬದು ನಿನಗೆ ಗೊತ್ತಿರುವದೇನು ಖುಸ್ರೂ!

ಖುಸ್ರು— (ಉತ್ತೇಜಿತ ಸ್ವರದಿಂದ) ಈ ಆಜ್ಞಾಭಂಗಕ್ಕೆ ಮೃತ್ಯುವಿನ, ಅಥವಾ ಕಾರಾಗೃಹವಾಸದ ಶಿಕ್ಷೆಯಾಗುವದೆಂಬ ಮಾತು ನನಗೆ ಗೊತ್ತಿರು

ವದು ಹುಜೂರ! ಈ ಮಾತು ನನಗೆ ಗೊತ್ತಿದ್ದದ್ದರಿಂದಲೇ ನಾನು ಫತ್ತೇಪುರ ಸಿಕರಿಯ ಅರಮನೆಯನ್ನು ಬಿಟ್ಟು ಇಲ್ಲಿ ನಿಮ್ಮ ಬಳಿಗೆ ಬರುವ ಸಾಹಸ ವನ್ನು ಮಾಡಿದ್ದೇನೆ; ಆದರೆ ರಾಜರಾಜೇಶ್ವರ, ತಾವೂ ಅತ್ಯಂತ ಮಾತೃ ಭಕ್ತರಿರುವಿರೆಂಬ ಮಾತು ಲೋಕವಿಖ್ಯಾತವಾಗಿರುವದು. ಬಂಡುಗಾರ ರಾದ ನನ್ನ ತಂದೆ ಸುಲ್ತಾನ ಸಲೀಮರವರನ್ನು ಶಿಕ್ಷಿಸುವದಕ್ಕಾಗಿ ಅವರ ಮೇಲೆ ತಾವು ಹಿಂದಕ್ಕೆ ಅಲಹಾಬಾದಕ್ಕೆ ದಂಡೆತ್ತಿ ಹೋಗುತ್ತಿದ್ದಿರಿ. ಅದೊಂದು ಆಗಿನ ದೊಡ್ಡ ರಾಜಕಾರಣವೇ ಆಗಿತ್ತು; ಆದರೆ "ನಿಮ್ಮ ತಾಯಿಯವರು ತೀರ ಮರಣೋನ್ಮುಖರಾಗಿರುವರೆ"ಂಬ ಸುದ್ದಿಯು ಹಾದಿ ಯಲ್ಲಿ ನಿಮಗೆ ಮುಟ್ಟಿದ ಕೂಡಲೆ, ಮುಂದಕ್ಕೆ ಸಾಗಿ ಹೋಗದೆ ಅವಸರ ದಿಂದ ಹಿಂದಿರುಗಿ ಆಗ್ರಾಕ್ಕೆ ಯಾಕೆ ಬಂದಿರಿ ಜಹಾಪನಾಹ! ರಾಜನೀತಿಯ ಕುಟಿಲ ಮಾರ್ಗವನ್ನು ಬಿಟ್ಟು, ಕೌಟುಂಬಿಕವೂ, ವ್ಯಕ್ತಿವಿಷಯಕವೂ ಆದ ಸುದ್ದಿಯಿಂದ ಅಸ್ವಸ್ಥರಾಗಿ ಮಮತೆಯ ಸಮುಜ್ವಲ ರಾಜ್ಯದಲ್ಲಿ ಯಾಕೆ ಪ್ರವೇಸ ಮಾಡಿದಿರಿ ಖಾವಿಂದ! ಇಂಥ ಮುಪ್ಪಿನ ಕಾಲದಲ್ಲಿಯೂ ತಾಯಿಯ ಮರಣಕ್ಕಾಗಿ ಏಳುದಿನ ಏಕಾಂತ ವಾಸಮಾಡಿ ಕಣ್ಣೀರು ಸುರಿ ಸುವದರಲ್ಲಿ ಯಾವ ಗೂಢ ರಾಜಕಾರಣವ ಸಾಧಿಸುವದಿತ್ತು ಸರಕಾರ! ಇಂದಿಗೆ ತಮ್ಮ ಕೈಯಲ್ಲಿ ಅಧಿಕಾರವಿದ್ದು, ತಾವು ರಾಜರಾಜೇಶ್ವರರಿರು ವಿರೆಂಬಮಾತು ನನಗ ಒಪ್ಪಿಗೆಯಾಗಿರುವದು; ಅದರಂತೆ ನಾನೆಂದರೆ ತಮ್ಮ ಒಬ್ಬ ಬಡ ಪ್ರಜೆಯಿರುವೆನೆಂಬ ಮಾತನ್ನೂ ನಾನು ಮರೆತಿರುವದಿಲ್ಲ. ಇದರ ಮೇಲೆಯೂ ನಾನು ತಮಗೆ ಅಪರಾಧಿಯಾಗಿಯೇ ಆಗಿ ತೋರಿದರೆ ತಾವು ಕಾಯದೆಯಂತೆ ನನ್ನನ್ನು ಶಿಕ್ಷಿಸಬೇಕು. ಅದನ್ನು ಭೋಗಿಸಲು ನಾನು ಸಿದ್ಧನಿರುವೆನು.

ಬಾದಶಹನು ರೋಗದಿಂದ ತ್ರಸ್ತನಾಗಿರದಿದ್ದರೆ ತನ್ನ ಮೊಮ್ಮಗನ ಈ ಉದ್ಧತವೃತ್ತಿಯ ಮಾತುಗಳಲ್ಲಿಯೂ ಇರುವ ಸ್ವಾರಸ್ಯವನ್ನು ಹೀರಿಕೊಂಡು ಖುಸ್ರುವನ್ನು ಪ್ರೇಮಭರದಿಂದ ಆಲಿಂಗಿಸಬಹುದಾಗಿತ್ತು; ಆದರೆ ಇಂದಿನ ವೇಳೆಯು ವಿಷವೇಳೆಯಾದದ್ದರಿಂದ ಬಾದಶಹನ ಭಾವನೆಯು ಖುಸ್ರುವಿನ ದುರ್ದೈವದಿಂದ ವಿಪರೀತವಾಯಿತು. ರೋಗ ಪೀಡಿತನ ನಾಲಿಗೆಯ ರುಚಿ ಗ್ರಹಣ ಶಕ್ತಿಯು ನಷ್ಟವಾಗಿ ಎಲ್ಲ ಪದಾರ್ಥಗಳೂ ಆತನಿಗೆ ಕಹಿ ಹತ್ತು

ವಂತೆ, ಖುಸ್ರುವಿನ ಮಾತಿನೊಳಗಿನ ಸ್ವಾರಸ್ಯವು ಬಾದಶಹನ ಮನಸ್ಸಿನಲ್ಲಿ ಬಾರದೆ ಆತನ ಔಧತ್ಯವನ್ನಷ್ಟು ಬಾದಶಹನ ಮನಸ್ಸಿನಲ್ಲಿ ಬಂದಿತ್ತು. ಆಗ ಬಾದಶಹನು ತನ್ನ ಮನಸ್ಸಿನಲ್ಲಿ—"ನನ್ನ ಮೊಮ್ಮಗನು ಅತ್ಯಂತ ಉದ್ಧತನೂ, ವಾಚಾಲನೂ, ಉಚ್ಛೃಂಖಲನೂ ಆಗಿದ್ದು, ಆತನು ಇಂದು ಪ್ರತಿಶಬ್ದದಿಂದ ರಾಜಸತ್ತೆಯನ್ನು ವಿರೋಧಿಸಿ, ಅದನ್ನು ಅವಮಾನಗೊಳಿಸುತ್ತಿರುವನು; ಹಾಗಲ್ಲದಿದ್ದರೆ ಅಕಬರ ಬಾದಶಹನ ಮುಂದೆ ಇಷ್ಟು ಮಾತುಗಳಾಡುವ ಸಾಹಸವನ್ನು ಯಾವನು ಮಾಡಬಹುದು?" ಎಂದು ವಿಚಾರಿಸಿ ಬಾದಶಹನು ಅತ್ಯಂತ ಕ್ರುದ್ಧನಾಗಿ ಖುಸ್ರುವನ್ನು ಕುರಿತು— ಖುಸ್ರೂ, ನೀನು ಬಹಳ ಉದ್ಧತನೂ, ಗರ್ವಿಷ್ಠನೂ ಆಗಿರುವೆ. ನಿನಗೆ ಮಾನಮರ್ಯಾದೆಗಳ ಪರಿವೆಯಂತು ಇರುವದೇ ಇಲ್ಲ. ಸಿಕ್ಕವರ ಸಂಗಡ ಸಿಕ್ಕಹಾಗೆ ಮಾತಾಡುವದೊಂದು ಕೆಟ್ಟ ಚಾಳಿಯು ನಿನಗಿರುತ್ತದೆ. ನಿನ್ನ ಈ ಉದ್ಧಟತನಕ್ಕೆ ತಕ್ಕದ್ದಾದ ಉಚಿತವನ್ನು ನಾನು ಈಗಲೇ ಕೊಡುವೆನು, ಎಂದು ಹೇಳಿ ಅಜೀಮಖಾನನನ್ನು ಗಟ್ಟಿಯಾಗಿ ಕೂಗಿ ಕರೆದನು. ರಾಜಕಾರಣದ ಜವಾಬುದಾರಿಯು ಮೈಮೇಲೆ ಇದ್ದದ್ದರಿಂದ ಯಾವಾಗ ಏನು ಮಾಡಬೇಕಾದೀತೆಂಬದರ ನಿಯಮವಿಲ್ಲದಿರಲು, ಖುಸ್ರುವಿನ ಮಾವನಾದ ಅಜೀಮಖಾನನು ಖಾಸ ಮಹಾಲಿಗೆ ಹೊಂದಿಯೇ ಇರುವ ದೊಡ್ಡ ದಿವಾಣಖಾನೆಯಲ್ಲಿ ಹಗಲು ರಾತ್ರಿ ಕಾದು ಇರುತ್ತಿದ್ದನು. ಅಕಬರ ಬಾದಶಹನು ಹೀಗೆ ಗಟ್ಟಿಯಾಗಿ ಕೂಗಿ ಕರೆದದ್ದನ್ನು ಕೇಳಿ ಪಾಪ! ಅಜೀಮಖಾನನು ಬೆದರಿಬಿದ್ದು ಓಡುತ್ತಲೇ ಒಳಗೆ ಬಂದು ಆಶ್ಚರ್ಯಮಗ್ನನಾಗಿ ಅತ್ತಿತ್ತ ನೋಡುತ್ತ ಕುರ್ನಿಸು ಮಾಡಿ—"ಬಾಂದಾ ಹಾಜರ ಇರುವನು, ಅಪ್ಪಣೆಯಾಗಬೇಕು" ಎಂದು ಬೇಡಿಕೊಳ್ಳಲು, ಅಕಬರ ಬಾದಶಹನು ದೃಢ-ಸ್ವರದಿಂದ— ಈ ಎದುರಿಗೆ ನಿಂತಿರುವ ಶಹಾಜಾದಾ ಖುಸ್ರುವು ರಾಜಾಜ್ಞೆಯನ್ನು ಉಲ್ಲಂಘಿಸಿರುವದರಿಂದ ಅವನು ಅಪರಾಧಿಯೆಂದು ನಿರ್ಣಯಿಸಲ್ಪಟ್ಟಿರುವನು; ಆದ್ದರಿಂದ ಇವನ ಮಹಾಲಿನಲ್ಲಿಯೇ ಇವನಿಗೆ ಇವನ ಇತಮಾಮಿಗೆ ತಕ್ಕಂತೆ ನಡೆಯುವ ಪರವಾನಿಗೆ ಕೊಟ್ಟು ಇವನನ್ನು ನಜರ-ಬಂದಿಯಲ್ಲಿ ಇಡಿರಿ. ನನ್ನ ಅಪ್ಪಣೆಯಿಲ್ಲದೆ ಇವನು ಅರಮನೆಯನ್ನು ಬಿಟ್ಟು ಹೋಗಲಾಗದು; ಮತ್ತು ಖಾನ ಅಜೀಮ, ಈತನ ಸಂರಕ್ಷಣದ

ಸಂಬಂಧದಿಂದ ಎಲ್ಲ ಜವಾಬದಾರಿಯನ್ನು ನಾನು ನಿಮ್ಮ ತಲೆಯಮೇಲೆ ಹೊರಿಸಿರುವೆನು, ಎಂದು ಹೇಳಿದನು. ಆಗ ಅಜೀಮುಖಾನನು ಒಂದು ಶಬ್ದ ವನ್ನೂ ಉಚ್ಚರಿಸದೆ ತನ್ನೊಳಗೇ ಆಶ್ಚರ್ಯಮಗ್ನನಾಗಿ ಅಳಿಯನಾದ ಖುಸ್ರುವಿ ನೊಡನೆ ಅರಮನೆಯಿಂದ ಹೊರಬಿದ್ದನು. ಇತ್ತ ಶಾಹೀ ಬೇಗಮೆಯು ತನ್ನ ಮಗನ ಈ ಸೌಭಾಗ್ಯವನ್ನು ನೋಡಿ ಆನೆಯ ಜಂತದ ಆ ಪೆಟ್ಟಿಗೆ ಯನ್ನು ಅಲ್ಲಿಯೇ ಚಲ್ಲಿಕೊಟ್ಟು ಒತ್ತರಿಸುವ ದುಃಖದಿಂದ ಹೊರಟು ಹೋದಳು.



## ೧೮ನೆಯ ಪ್ರಕರಣ

# ಸಂಸಾರವು ಅಸಾರವು!



ಶಾಹೀ ಬೇಗಮೆಯು ನಿರಾಶೆಯಿಂದ ತನ್ನ ಶಾಹಿಮಂಜಿಲಿಗೆ ಬಂದು-ಬಿಟ್ಟಳು. ಆಕೆಯು ಕಟ್ಟಕಡೆಯ ಆಧಾರವೆಂದು ಬಾದಶಹನಿಗೆ ಶರಣು ಹೋಗಿದ್ದಳು; ಆದರೆ ಎಂದೂ ಆಕೆಯ ಮಾತನ್ನು ನಿರಾಕರಿಸದ ಬಾದಶಹನು ಇಂದು ಆಕೆಯನ್ನು ಸಂಪೂರ್ಣ ತಿರಸ್ಕರಿಸಿ, ತೀರಾ ನಿರಾಶೆಗೊಳಿಸಿದನು. ವಿಪರೀತ ಕಾಲ ಒದಗಲು ಅತ್ಯಂತ ಪ್ರೀತಿಯ ಜನರೂ ವಿರೋಧಿಗಳಾಗುವರೆಂಬ ಮಾತು ಸುಳ್ಳಲ್ಲ. ಇನ್ನು ಜೋಧಬಾಯಿಗೆ ಶರಣು ಹೋಗಲಿಕ್ಕೆ ಸ್ಥಳವೇ ಇಲ್ಲದಾಯಿತು. ಒಬ್ಬ ಸಾಮಾನ್ಯ ಮನುಷ್ಯನಂತೆ ಬಾದಶಹನು ತನ್ನ ಮಗನನ್ನು ನಜರಬಂದಿಯಲ್ಲಿ ಇಟ್ಟದ್ದು ಆಕೆಯ ಮನಸ್ಸಿಗೆ ಬಹಳವಾಗಿ ಹತ್ತಿತು. ತನ್ನ ಮಗನ ಅಪರಾಧವು ಕ್ಷಮಿಸಲಿಕ್ಕೆ ಯೋಗ್ಯವಾದದ್ದಿದ್ದು, ಬಾದಶಹನು ಕ್ಷಮಿಸದೆಯಿದ್ದದ್ದರಿಂದ ಆಕೆಯು ಬಹಳವಾಗಿ ನೊಂದುಕೊಂಡಳು. ಆಕೆಗೆ ಮರಣದ ಹೊರತು ಎರಡನೆಯ ಶಾಂತಿಯ ಉಪಾಯವು ತೋಚದಾಯಿತು. ಬದುಕುವ ಆಶೆಯು ಆಕೆಗೆ ಸರ್ವಥಾ ಉಳಿಯಲಿಲ್ಲ. ಪಾಪ! ಇತ್ತ ಗಂಡನು ನಿರ್ದಯನಾದನು; ಅತ್ತ ಮಾವನು ನಿರಾಕರಿಸಿ ದೂಡಿಬಿಟ್ಟನು; ಮಗನ ಉತ್ಕರ್ಷದ ಆಶೆಯಂತು ಉಳಿಯಲೇ ಇಲ್ಲ. ಅಂದಬಳಿಕ ಯಾವ ಆಶೆಯಿಂದ ಆಕೆಯು ಸಂಸಾರ ಮಾಡಬೇಕು? ಈ ಸಂಸಾರದಲ್ಲಿ ಸಂತತಿಯ ಸುಕ್ಷೇಮ-ಸುಸ್ಥಿತಿಗಳ ಸವಿಯ ಆಶೆಯಿಂದಲೇ ಮನುಷ್ಯನು ತೊಳಲಾಡುತ್ತಿರುವನು; ಆದರೆ ಜೋಧಬಾಯಿಗೆ ಆ ಆಶೆಯೇ ಕಡಿದುಹೋದದ್ದರಿಂದ, ಇನ್ನು ನಾನು ಯಾವ ಆಶೆಯಿಂದ ಬದುಕಿ ಇರಬೇಕೆಂದು ಆಕೆಯು ಜೀವಕ್ಕೆ ಬೇಸತ್ತಳು. ಆ ಪುತ್ರವತ್ಸಲ ಜನನಿಗೆ ಸಂಸಾರವು ಅಸಾರವಾಗಿಯೂ, ಭಯಪ್ರದವಾಗಿಯೂ ತೋರಹತ್ತಿತು. ಈ ಸಂಸಾರದಲ್ಲಿ ಉತ್ತಮ ಮಧ್ಯಮ ಅಧಮರೆಂಬ ಮೂರು ವರ್ಗದ ಜನರು ಇರುವರು. ಸಂಸಾರವು ಪರಮಾರ್ಥಸಾಧನವೆಂದು ತಿಳಿದು, ಎಲ್ಲ ಭಾರವನ್ನು

ದೇವರ ಮೇಲೆ ಹಾಕಿ ಯದೃಚ್ಛಾಲಾಭ ಸಂತುಷ್ಟತೆಯಿಂದ ಅನಾಸಕ್ತರಾಗಿ ಸಂಸಾರದಲ್ಲಿ ಇದ್ದೂ ಇಲ್ಲದಂತೆ ಧರ್ಮದಿಂದ ಆಚರಿಸುವವರೇ ಈಶ್ವರ ಪ್ರೀತಿಗೆ ಪಾತ್ರರಾಗುವರು; ಇವರನ್ನು ಉತ್ತಮ ವರ್ಗದವರೆಂದು ಕರೆಯ ಬೇಕು. ಹೊಲಮನೆ- ದುಡ್ಡುಕಾಸು ಮೊದಲಾದ ಜಡ ಪದಾರ್ಥಗಳಿಗಿಂತ ಚೇತನದ ಯೋಗ್ಯತೆಯು ಹೆಚ್ಚು ಎಂದು ತಿಳಿದು, ತನ್ನ ಆಪ್ತೇಷ್ಟರ, ಹಾಗು ಇಷ್ಟ ಮಿತ್ರರ ಉತ್ಕರ್ಷದ ಕಾಲಕ್ಕೆ ಸರ್ವಸ್ವವನ್ನೂ ಕಳೆದುಕೊಳ್ಳಲು ಸಿದ್ಧರಾಗುವ ಉತ್ಕರ್ಷ-ಕೀರ್ತಿಗಳ ಕಾಮುಕರು, ಧರ್ಮಕ್ಕೂ ದೇವರಿಗೂ ಔಪಚಾರಿಕ ಮಹತ್ವವನ್ನು ಕೊಡುತ್ತ, ತಮ್ಮ ಕರ್ಮಜಾಲದಲ್ಲಿ ಸಿಕ್ಕು ಅದರ ಗತಿಯನ್ನನುಸರಿಸಿ ಉತ್ಕರ್ಷಾಪಕರ್ಷಗಳನ್ನು ಹೊಂದುತ್ತ ಪುನಃ ಪುನಃ ಹುಟ್ಟುತ್ತಲೂ ಸಾಯುತ್ತಲೂ ಇರುವರು; ಇವರನ್ನು ಮಧ್ಯಮ ವರ್ಗದಲ್ಲಿ ಎಣಿಸತಕ್ಕದ್ದು. ಇನ್ನು ಮೂರನೆಯ ಅಧಮ ವರ್ಗದವರೆಂದರೆ, ಚೇತನಕ್ಕಿಂತಲೂ ಜಡಕ್ಕೇ ಮಹತ್ವ ಕೊಟ್ಟು, ಒಂದು ಸಗಣಿಯ ಹೊತಲ ಕ್ಕಾಗಿ ಪ್ರಾಣಕ್ಕೆ ಪ್ರಾಣ ಕೊಡುವ ಚಂದದಿಂದ ಹೊಲಮನೆ, ದುಡ್ಡುಕಾಸು ಮೊದಲಾದ ಜಡಪದಾರ್ಥಗಳ ಸಂಪಾದನದಲ್ಲಿಯೂ, ಸಂರಕ್ಷಣದಲ್ಲಿಯೂ ಸದಾ ತೊಡಗಿ, ಅದರ ಚಿಂತೆಯಲ್ಲಿಯೇ ಕೊರಗಿ ಪಿಶಾಚಿಗಳಂತೆ ಆಚರಿಸು ವವರು; ಇವರು ಅಧಃಪತನವನ್ನೇ ಹೊಂದುವರು. ಈ ಮೂರು ವರ್ಗಗಳಲ್ಲಿ ಜೋಧಬಾಯಿಯು ಒಂದನೆಯ ವರ್ಗದವಳಾಗಿರದಿದ್ದರೂ, ಎರಡನೆಯ ವರ್ಗದವಳಂತು ನಿಶ್ಚಯದಿಂದ ಆಗಿದ್ದಳು. ಅಂತೇ ಆಕೆಯು ಹಿಂದು ಸ್ಥಾನದ ರಾಜರಾಜೇಶ್ವರಿಯಾಗುವ ಆಶೆಯನ್ನು ಬಿಟ್ಟುಕೊಟ್ಟದ್ದಲ್ಲದೆ, ಬಾದಶಹನು ಕೊಟ್ಟಿರುವ ಕೋಟಿ ರೂಪಾಯಿ ಬೆಲೆಯ ಕಣ್ಣಾಮುಂದಿನ ರತ್ನಹಾರವನ್ನು ಕಾಡುಗಲ್ಲಿಗೆ ಸರಿಮಾಡಿ ಚಲ್ಲಿಕೊಟ್ಟು ಹೋದಳು; ಇಲ್ಲ ದಿದ್ದರೆ ಪತಿಯ ಮರಣಕ್ಕಾಗಿ ಚಂದಕಾಣಬೇಕೆಂದು ಅತ್ತು ರಂಬಾಟ ಮಾಡುತ್ತ, ಪತಿಯ ಆಸ್ತೆಯ ಕೀಲಿಯಕೈಯನ್ನು ಉಡಿಯಲ್ಲಿ ಸಿಕ್ಕಿಸಿ ಕೊಳ್ಳುವ, ಪತಿಯ ಕಿವಿಯೊಳಗಿನ ದೊಡ್ಡ ಮುತ್ತಿನ ಬಾವುಲಿಯನ್ನು ಮೇಲೆ ಬಿದ್ದು ಅಳಅಳುತ್ತ ಹಲ್ಲುಗಳಿಂದ ಕಡಿದುಕೊಳ್ಳುವ ಅಧರ್ಮ ವರ್ಗದ ಸ್ತ್ರೀಯರಂತೆ, ಅಧಿಕಾರ-ದ್ರವ್ಯಗಳ ಆಶೆಗೆ ಬಿದ್ದು ಆಕೆಯು ಮಗನ ವಿಷಯವಾಗಿ ಔದಾಸೀನ್ಯ ಭಾವವನ್ನು ತಾಳುತ್ತಿದ್ದಳು.

ದಾರುಣ ಮನಸ್ತಾಪದಲ್ಲಿಯೂ, ಪ್ರಚಂಡವಾದ ನಿರಾಶೆಯ ಅಗ್ನಿಯಲ್ಲಿಯೂ ಬೇಯುತ್ತಿರುವಾಗ, ಶಾಹೀ ಬೇಗಮೆಯು ಬಾಯಿಗೆಬಂದಂತೆ ಬಡಬಡಿಸಹತ್ತಿದಳು. ಪ್ರಾಣತ್ಯಾಗದ ಒಂದೊಂದೇ ಉಪಾಯಗಳು ಆಕೆಯ ಮನಸ್ಸಿನಲ್ಲಿ ಬರತೊಡಗಿದವು, ಆದಿನ ಜೋಧಬಾಯಿಯ ದೈವಕ್ಕನುಸರಿಸಿ ಕಾರ್ಮೋಡಗಳು ಕವಿದು ಭಯಂಕರವಾದ ಮಳೆಯು ಬರತೊಡಗಿತ್ತು. ಗುಡುಗು ಸಿಡಿಲುಗಳ ಅರ್ಬಾಟದಿಂದ ಭೂಮಂಡಲವು ಕಂಪಾಯಮಾನವಾಗತೊಡಗಿತ್ತು. ಹೀಗೆ ಪ್ರಚಂಡವಾದ ಗಾಳಿಯಿಂದಲೂ, ಕಟ್ಟಿಕರೆಯುವ ಮಳೆಯಿಂದಲೂ ಜಗತ್ತಿಗೆ ಒಂದು ಬಗೆಯ ಬಧಿರತ್ವವು, ಬಂದಿರುವಾಗ, ಜೋಧಬಾಯಿಯು ಇಹಲೋಕದ ಯಾತ್ರೆಯನ್ನು ಮುಗಿಸಬೇಕೆಂದು ನಿಶ್ಚಯಿಸಿದಳು. ಆಗ ಯಾವತ್ತು ದಾಸಿಯರೂ, ಗುಲಾಮರೂ ಗಾಢವಾದ ನಿದ್ರಾಸುಖವನ್ನು ಅನುಭವಿಸುತ್ತಿದ್ದರು. ಅಂದು ಬಾದಶಹನ ಬೇನೆಯು ವಿಕೋಪಕ್ಕೆ ಹೋದದ್ದರಿಂದ, ತನ್ನ ಪತಿಯು ತನ್ನ ಬಳಿಗೆ ಬರುವ ಸಂಭವವಿಲ್ಲವೆಂಬದು ಜೋಧಬಾಯಿಗೆ ಗೊತ್ತಿತ್ತು. ಮಗ ಖುಸ್ರುವಂತು ನಜರಬಂದಿಯಲ್ಲಿ ಇಡಲ್ಪಟ್ಟಿದ್ದನು. ಅಂದಿನ ದಿನವು ತಾನು ನಿರ್ಬಾಧವಾಗಿ ಪ್ರಾಣಬಿಡಲಿಕ್ಕೆ ಅನುಕೂಲವಾಗಿರುವದೆಂದು ಆಕೆಯು ಭಾವಿಸಿದಳು. ರಾತ್ರಿ ಆರುತಾಸು ಮೀರಿ ಏಳರ ಅಮಲು ಬಂದಿರಬಹುದು. ಆಗ ಜೋಧಬಾಯಿಯು ತಾನು ಹೇಗೆ ಜೀವ ಕೊಡಬೇಕೆಂದು ಯೋಚಿಸತೊಡಗಿದಳು. ಯಮುನೆಯಲ್ಲಿ ಹಾರಿಕೊಂಡು ಪ್ರಾಣಕೊಡುವದು ಅಪಮಾನಕರವೆಂತಲೂ, ತನ್ನಂಥ ಬುರುಕೆಯ ಬಾದಶಹನ ಸೊಸೆಯ ದೇಹವು ಸಿಕ್ಕವರ ಕಣ್ಣಿಗೆ ಬೀಳುವದು ಕೇವಲ ಲಜ್ಜೆಗೇಡಿತನವೆಂತಲೂ ತಿಳಿದು ಆ ಉಪಾಯವನ್ನು ನಿಷೇಧಿಸಿದಳು. ಅಷ್ಟರಲ್ಲಿ ತಾನು ಅಂಬರ ರಾಜಧಾನಿಯಿಂದ ಬರುವಾಗ ಆತ್ಮರಕ್ಷಣದ ಸಾಧನವೆಂದು ತಿಳಿದು ತಂದಿದ್ದ ತೀಕ್ಷ್ಣ ವಿಷದ ನೆನಪು ಆಕೆಗೆ ಆಯಿತು. ಆಕೆಯು ತನ್ನ ಹೊತ್ತಿಗೆ ಉಪಯೋಗವಾಗಬೇಕೆಂದು ಒಂದು ಸಣ್ಣ ಕುಪ್ಪಿಯಲ್ಲಿ ಹಾಕಿ ಅದನ್ನು ತನ್ನ ಪೆಟ್ಟಿಗೆಯಲ್ಲಿಯೇ ಇಟ್ಟಿದ್ದಳು. ಕೂಡಲೆ ಆಕೆಯು ಎದ್ದು ಆ ಸಣ್ಣ ಸಿಸೆಯನ್ನು ತಕ್ಕೊಂಡು ಅದರೊಳಗಿನ ತೀಕ್ಷ್ಣ ವಿಷವನ್ನು ಸ್ವಾದಿಷ್ಟವಾದ ಒಂದು ಸರಬತ್ತಿನಲ್ಲಿ ಹಾಕಿ ಕುಡಿಯಬೇಕೆಂದು ಸಿದ್ಧಮಾಡಿ ಇಟ್ಟಳು; ಆದರೆ "ಜೀವವು ಬೆಲ್ಲಕ್ಕಿಂತ ಸವಿಯೆಂ"ಬ ನಾಣ್ಣುಡಿ

ಯಂತೆ, ಒಮ್ಮೆಲೆ ಆ ವಿಷವನ್ನು ತಕ್ಕೊಳ್ಳಲಾರದೆ ಶಾಹಿಯು ಅಂಜಿ ದೂ ಸರಿದು ನಿಂತುಕೊಂಡಳು.

ಈ ಮೇರೆಗೆ ಶಾಹೀ ಬೇಗಮೆಯು ದೂರ ಸರಿದುನಿಂತು ಆ ವಿಷ ಮಿಶ್ರಿತವಾದ ಸರಬತ್ತಿನ ಸುವರ್ಣದ ಪಾತ್ರೆಯನ್ನು ನೋಡುತ್ತ ಖುಸ ವನ್ನು ನೆನಸಿ--"ಹಾಯ ಖುಸರು! ನನ್ನ ಮರಣದಿಂದ ನೀನು ತೀ ಪರದೇಶಿಯಾಗಿ ಹೋಗುವೆಯಲ್ಲ! ನಿನ್ನ ಗತಿಯೇನು? ಬದುಕಿ ಉಳಿದ ನಿನ್ನ ಕಷ್ಟವನ್ನು ಕಣ್ಣಿನಿಂದ ನೋಡುವದೂ ನನ್ನಿಂದಾಗುವದಿಲ್ಲ; ಸತ್ತು ನಿನ್ನನ್ನು ಪರದೇಶಿಯಾಗಮಾಡುವದೂ ನನ್ನಿಂದಾಗುವದಿಲ್ಲ; ಆದರೆ ಈ ಪ್ರಸಂಗದಲ್ಲಿ ನಾನೇನು ಮಾಡಲಿ? ಎಂದು ಯೋಚಿಸುತ್ತಿರುವಾಗ "ಸಾಯುವವರಿಗೆ ಸುಳಿದಾಡುವವರೇ ಜವನ ದೂತರೆಂ"ಬಂತೆ ಮರ ಣೋನ್ಮುಖಳಾದ ಮರಣಭೀತ ಜೋಧಬಾಯಿಗೆ ಖುಸ್ರುವಿನ ಅಸ್ಪಷ್ಟ ಮೂರ್ತಿಯು ದೂರದಲ್ಲಿ ನಿಂತುಕೊಂಡು ತನ್ನ ಕಡೆಗೆ ನೋಡುತ್ತಿರುವಂತೆ ಭಾಸವಾಯಿತು. ಬಿಳಿಯ ವಸ್ತ್ರದಿಂದ ಆಚ್ಛಾದಿತವಾದ ಆ ಅಸ್ಪಷ್ಟ ಮೂರ್ತಿಯ ಮೈಮೇಲೆ ರಕ್ತದ ಹನಿಗಳು ಸಿಡಿದಿದ್ದವು. ಆ ಮೂರ್ತಿಯ ಕಣ್ಣುಗಳು ಒಳನಟ್ಟಿದ್ದು, ಅದರ ಗಲ್ಲಗಳು ಪಚ್ಚ ಬಿದ್ದಿದ್ದವು. ಇಂಥ ವಿಕಾರ ಮುಖಮುದ್ರೆಯ ಆ ಕೃಶವಾದ ಮೂರ್ತಿಯನ್ನು ಜೋಧಬಾಯಿಯು ದುಃಖ ದಿಂದ ನೋಡುತ್ತಿರಲು, ಆ ಮೂರ್ತಿಯು ಆಕೆಯನ್ನು ಕುರಿತು--"ಅವ್ವಾ, ನನ್ನ ಇಹಲೋಕದ ಯಾತ್ರೆಯು ಮುಗಿದು ಹೋಗಿದ್ದು, ನಾನು ಇನ್ನು ಕಬರಸ್ಥಾನದಲ್ಲಿ ಶಾಂತರೀತಿಯಿಂದ ಶಯನಮಾಡುವದಕ್ಕಾಗಿ ಹೋಗುವೆನು. ಇನ್ನುಮೇಲೆ ನೀನಾದರೂ ಈ ದುಃಖಮಯ ಸಂಸಾರದಲ್ಲಿ ಯಾಕೆ ಇರುವೆ? ನಡೆ, ನನ್ನೊಡನೆ ನೀನೂ ಶಾಂತವಾದ ಕಬರಸ್ಥಾನಕ್ಕೆ ನಡೆ" ಎಂದು ನುಡಿದಂತೆ ಆಕೆಗೆ ಭಾಸವಾಯಿತು! ಆಗ ಆಕೆಯು ತನ್ನ ಪ್ರಿಯ ಖುಸ್ರುವು ಮರಣ ಹೊಂದಿದ್ದೇ ನಿಶ್ಚಯವೆಂದು ತಿಳಿದು, ಪುನಃ ಆ ವಿಷಮಿಶ್ರಿತ ಸರಬತ್ತು ತುಂಬಿದ್ದ ಪಾತ್ರೆಯ ಕಡೆಗೆ ನೋಡಿ—"ಎಲೈ ಮೃತ್ಯುದಾಯಕ ವಿಷವೇ, ಇನ್ನು ನೀನೇ ನನಗೆ ಶರಣ್ಯನು. ನಿನ್ನ ಹೊರತು ನನಗೆ ಎರಡನೇ ಗತಿಯೇ ಇಲ್ಲೆಂದು ನುಡಿದು, ಆ ವಿಷದ ಪಾತ್ರೆಯನ್ನು ಕೈಯಲ್ಲಿ ತಕ್ಕೊಂಡು ಅದರೊಳಗಿನ ವಿಷವನ್ನು ಗಟಗಟ ಕುಡಿದುಬಿಟ್ಟಳು! ಆಗ ತನ್ನ ಶುಭ್ರವಾದ

ಮೆತ್ತಗಿನ ಹಾಸಿಗೆಯಮೇಲೆ ಮಲಗಿಕೊಂಡ ಆವಳು ಮಲಗಿಯೇ ಬಿಟ್ಟಳು. ಬಾದಶಹನ ಜನಾನಖಾನೆಯಲ್ಲಿ ಹೀಗೆ ವಿಷಪಾನದಿಂದ ಪ್ರಾಣತ್ಯಾಗ ಮಾಡುವದು ಅಪರೂಪವಾಗಿದ್ದಿಲ್ಲ. ಮರುದಿವಸ ದಾಸಿಯರು ಎದ್ದು ನೋಡಲು, ಶಾಹೀ ಬೇಗಮೆಯು ಕಣ್ಣು ಮುಚ್ಚಿಕೊಂಡು ಹಾಸಿಗೆಯಮೇಲೆ ಮಲಗಿಯೇ ಇದ್ದಳು. ಬೇಗಮೆಯು ನಿದ್ದೆ ಹತ್ತಿ ಮಲಗಿರುವಳೆಂದು ತಿಳಿದು ದಾಸಿಯರು ಒಂದು ತಾಸು ಹಾದಿಯ ನೋಡಿದರು, ಎರಡು ತಾಸು ಹಾದಿಯ ನೋಡಿದರು, ಮೂರು ತಾಸು ಹೊತ್ತು ಏರಿದರೂ ಜೋಧಬಾಯಿಯು ಏಳಲಿಲ್ಲ. ಆಗ ಮುಖ್ಯ ದಾಸಿಯು ಬೇಗಮೆಯ ಬಳಿಗೆ ಹೋಗಿ ನಿಜವಾದ ಪ್ರಕಾರವನ್ನು ಅರಿತುಕೊಂಡು, ಕೂಡಲೆ ಬಾದಶಹನ ವಿಶ್ವಾಸದ ಸಹಚರನಾದ ಸೇನಾಪತಿ ಫರೀದಬೇಗನಿಗೆ ಈ ಸುದ್ದಿಯನ್ನು ಹೇಳಿದಳು. ಶಾಹೀ-ಬೇಗಮೆಯ ಈ ಆಕಸ್ಮಿಕ ಮರಣಕ್ಕಾಗಿ ಆತನಿಗೂ ಬಹಳ ದುಃಖವಾಯಿತು; ಆದರೂ ಸಂಕಟ ಸಮಯದಲ್ಲಿ ಧೈರ್ಯ ತಾಳುವವನೂ, ಸುಜ್ಞನೂ ಆದ ಫರೀದಬೇಗನು ಈ ಸುದ್ದಿಯನ್ನು ಬೇರೆ ಯಾರಿಗೂ ಹೇಳದಂತೆ ಸೂಚಿಸಿ, ತಾನು ಕೂಡಲೆ ಆಗ್ರಾದ ಅರಮನೆಗೆ ಬಂದು ಸೇಲೀಮನಿಗೆ ಈ ಸುದ್ದಿಯನ್ನು ಅತ್ಯಂತ ಗುಪ್ತವಾಗಿ ಹೇಳಿದನು. ಅದನ್ನು ಕೇಳಿದಕೂಡಲೆ ಸೇಲೀಮನಿಗೆ ವಜ್ರಾಘಾತವಾದಂತಾಗಿ, ಅವನು ಮೂಢನಾಗಿ ಹೋದನು. ಆತನ ಕಣ್ಣಿಗೆ ಜಗತ್ತು ಗರಗರ ತಿರುಗುತ್ತಿರುವಂತೆ ಭಾಸವಾಯಿತು. ಕೆಲಹೊತ್ತು ತಟಸ್ಥನಾಗಿ ಫರೀದಬೇಗನನ್ನು ನೋಡುತ್ತ ನಿಂತಿದ್ದ ಆತನು ಆ ಸೇನಾಪತಿಯನ್ನು ಕುರಿತು— ಏನನ್ನುವೆ ಫರೀತಬೇಗ ? ಹೀಗಾಗುವ ಸಂಭವವಾದರೂ ಇರುವದೋ ? ಆದರೆ ಹಾಗಾದ ಹೊರತು ನೀನು ನನಗೆ ಸುಳ್ಳಾದರೂ ಯಾಕೆ ಹೇಳಿ ? ಖುದಾ, ನನ್ನ ಹೃದಯಕ್ಕೆ ಇಂಥ ತೀಕ್ಷ್ಣ ಬಾಣ ಪ್ರಯೋಗವನ್ನು ಹೇಗೆ ಮಾಡಿದೆ ? ನನ್ನ ಪ್ರೀಯಳ ವಿಷಯವಾಗಿ ನಾನು ತಾಳಿದ ಉದಾಸೀನತೆಗಾಗಿಯೇ ನೀನು ಆಕೆಯನ್ನು ನಿನ್ನ ಬಳಿಗೆ ಕರೆದುಕೊಂಡು ಹೋಗಿಬಿಟ್ಟೆಯೋಯೇನು ?

ಈ ಮೇರೆಗೆ ಸೇಲೀಮನು ಶೋಕಿಸುತ್ತಿರುವಾಗ ಆತನನ್ನು ಸಮಾಧಾನಗೊಳಿಸುತ್ತ ಫರೀದಬೇಗನು— ಸುಲ್ತಾನ, ಇಂದು ಬಾದಶಹರ ಪ್ರಕೃತಿಯು ನೆಟ್ಟಗಿರುವದರಿಂದ ತಾವು ಈಗ ಶಾಹಿಮಹಾಲಿಗೆ ನಡೆಯಿರಿ. ಮನಸ್ಸನ್ನು

ಕಲ್ಲು ಮಾಡಿದಹೊರತು ಇಂಥ ಪ್ರಸಂಗದಲ್ಲಿ ಧೈರ್ಯವು ಬರಲಾರದು. ಈಗ ತಮಗೆ ದುಃಖಕಾರ ಪ್ರಸಂಗವು ಒದಗಿಬಿಟ್ಟಿದೆ, ಅದನ್ನು ಅನುಭವಿಸುವದಕ್ಕಾಗಿ ನೀವು ಸಿದ್ಧರಾಗಿರಲೇಬೇಕು. ಆದದ್ದು ಆಗಿ ಹೋಯಿತು; ಅದೇನು ತಿರುಗಿ ಬರುವಹಾಗಿಲ್ಲ; ಅಂದಬಳಿಕ ಶೋಕಗ್ರಸ್ತರಾಗಿ ಮನಸ್ಸಿನ ಯಾತನೆಯನ್ನಾದರೂ ಯಾಕೆ ಹೆಚ್ಚಿಸಬೇಕು ? ಇದಲ್ಲದೆ, ಈ ಸುದ್ದಿಯು ಆಗ್ರಾ ಪಟ್ಟಣದಲ್ಲಿ ಪಸರಿಸಿದರೆ ಅನರ್ಥವಾದೀತು. ನಿಮ್ಮ ಭಾವೀ ಪರಿಸ್ಥಿತಿಯು ಸಂಕಟಮಯವಾಗಿರುವಾಗ, ಈಗ ನೀವು ಶೋಕಮಗ್ನರಾಗಿ ಕಣ್ಣೀರು ಹಾಕುತ್ತ ಕುಳಿತುಕೊಳ್ಳುವದರಿಂದ ಹಿತವಾಗಬಹುದೆ ?" ಎಂದು ನುಡಿಯಲು, ಸೇಲೀಮನು ವಿವೇಕವನ್ನು ತಾಳಿ ದುರ್ನಿವಾರವಾದ ದುಃಖವೇಗವನ್ನು ಬಹು ಕಷ್ಟದಿಂದ ನುಂಗಿಕೊಂಡು ಖಿನ್ನನಾಗಿ ಶಾಹಿಮಂಜಿಲಿಗೆ ಬಂದನು. ಆಗ ಮಾತ್ರ ಆತನ ಮನಸ್ಸಿನ ಸ್ಥಿತಿಯು ಬಹು ಕನಿಕರದ್ದಾಗಿತ್ತು. ತನ್ನ ಕಣ್ಣಿಗೆ ಬೀಳುವ ಯಾವತ್ತು ಜಗತ್ತೇ ತಿರುವುಮುರುವಾಗಿ ಹೋಗಿರುವಂತೆ ಆತನಿಗೆ ತೋರಿತು; ಆದ್ದರಿಂದ ಶಾಹಿಯು ಶಯನ ಮಾಡಿರುವ ಖಾಸ ಮಹಾಲಿನೊಳಗೆ ಆಕೆಯ ಹಾಸಿಗೆಯ ಬಳಿಯಲ್ಲಿ ಹೋಗಲಿಕ್ಕೆ ಆತನ ಕಾಲುಗಳೇ ಏಳಲೊಲ್ಲವು. ಸೇಲೀಮನಿಗೆ ಹಲವು ಜನ ಬೇಗಮರಿದ್ದರೂ, ಶಾಹೀಬೇಗಮೆಯ ಮೇಲೆಯೇ ಆತನ ಪ್ರೇಮವು ವಿಶೇಷವಾಗಿ ಇದ್ದಿತು; ಯಾಕಂದರೆ ಆಕೆಯು ರೂಪದಿಂದ ಅಪ್ರತಿಮಳಾಗಿರುವಂತೆ, ಸದ್ಗುಣ ಖನಿಯೂ ಆಗಿದ್ದಳು. ರಜಪೂತರ ತೇಜಸ್ಸೂ, ಸ್ವಾಭಿಮಾನವೂ ಆಕೆಯ ಮುಖದಲ್ಲಿ ಮಿನುಗುತ್ತಿದ್ದವು. ಆಕೆಯ ಪ್ರತಿಬಂದು ರಕ್ತದ ಬಿಂದುವು ಪತಿ ಕಾರ್ಯಕ್ಕಾಗಿಯೂ, ಪತಿ ಸೇವೆಗಾಗಿಯೂ ಚಲನವಲನವನ್ನು ಹೊಂದುತ್ತಿತ್ತು. ಆಕೆಯು ಆರ್ಯ ಸ್ತ್ರೀಯಿದ್ದದ್ದರಿಂದ ಆತ್ಮಸಮರ್ಪಣಯುಕ್ತ ಪಾತಿವ್ರತ್ಯವು ಶ್ರೇಷ್ಠ ರೀತಿಯಿಂದ ಆಕೆಯಲ್ಲಿ ಕಂಡುಬರುತ್ತಿತ್ತು. ಬಹಳ ಹೇಳುವದೇನು ? ಪತಿಯಿಂದ ಹೊರತಾದ ಯಾವತ್ತು ಸುಖಗಳು ಆಕೆಗೆ ತುಚ್ಛವಾಗಿ ತೋರುತ್ತಿದ್ದವು. ಸೇಲೀಮನಿಗೆ ಇಂಥ ಅಮೂಲ್ಯ ರತ್ನವು ಎಂದೂ ದೊರೆತಿದ್ದಿಲ್ಲ; ಮುಂದೆಯೂ ದೊರೆಯಲಿಲ್ಲ. ನಿಜವಾಗಿಯೆಂದರೆ ಹೆಂಡಿರಸಂಬಂಧದಿಂದ ಶಾಹಿಯ ತರುವಾಯದಲ್ಲಿ ಸೇಲೀಮನು ಹತಭಾಗ್ಯನಾದನೆಂತಲೇ ಹೇಳಬೇಕಾಗುವದು. ಈ ಸಂಸಾರದಲ್ಲಿ ಒಟ್ಟುಗೂಡಿರುವ ಸಂಬಂಧಿಕರೆನಿಸಿ.

ಕೊಳ್ಳುವವರೆಗೆ, ಇರುವತನಕ ಒಬ್ಬರ ಮಹತ್ವವು ಒಬ್ಬರಿಗೆ ತೋರುತ್ತಿರುವದಿಲ್ಲ; ಸತ್ತಬಳಿಕ ಮಾತ್ರ ಅತ್ತು ಅತ್ತು ಕಣ್ಣು ಕೆಡಿಸಿಕೊಳ್ಳುವರು. ಸಂಸಾರದಲ್ಲಿ ಪರಸ್ಪರರು ಪರಸ್ಪರರ ದೋಷಗಳನ್ನು ದುರ್ಲಕ್ಷಿಸಿ, ಗುಣದೃಷ್ಟಿಯುವರಾಗಿ, ಒಬ್ಬರನ್ನೊಬ್ಬರು ಪ್ರೀತಿಸುತ್ತ, ಒಬ್ಬರನ್ನೊಬ್ಬರು ಆದರಿಸುತ್ತ-ಕ್ಷಮಾಶೀಲರೂ, ಉದಾರ ಹೃದಯುದವರೂ ಆಗಿ ಇದ್ದರೆಯೇ ಸಂಸಾರ ಸುಖದ ಮಾನವು ಹೆಚ್ಚುತ್ತಿರುತ್ತದೆ. ಹಾಗೆಮಾಡದೆ, ಸಾಂಸಾರಿಕರು ಕೇವಲ ದೋಷದೃಷ್ಟಿಯುವರಾಗಿ ತಮ್ಮಲ್ಲಿಯ ದೋಷಗಳನ್ನು ತಾವು ನೋಡದೆ ಪ್ರಸಂಗವಶಾತ್ ತಮ್ಮ ಮನಸ್ಸಿಗೆ ವಿರುದ್ಧವಾಗಿ ನಡೆದರೆಂಬ ಕಾರಣದಿಂದ ದುರಭಿಮಾನ ತಾಳಿ ಪರಸ್ಪರರು ಪರಸ್ಪರರ ಮನಸ್ಸು ನೋಯಿಸಿ ಹಿಂಸೆ ಪಡಿಸಹತ್ತಿದರೆ, ಸಂಸಾರದ ಸವಿಯೇ ಕೆಟ್ಟುಹೋಗಿ, ಸಂತಾಪ, ಚಿಂತೆ, ಕ್ರೋಧ ಮೊದಲಾದ ದುಃಖಮೂಲ ವಿಕಾರಗಳಿಗೆ ಆಸ್ಪದ ದೊರೆತು, ದುಃಖದ ಮಾನವು ಹೆಚ್ಚಾಗುವದು. ಮತ್ತು ಪ್ರಸಂಗವಶಾತ್ ಆ ಸಂಬಂಧಿಕರಲ್ಲಿ, ಯಾರೊಬ್ಬರ ವಿಶೇಷವಾಗಿ ಗುಣಿಜನರ ವಿಯೋಗವಾದಾಗ "ಸತ್ತ ಎಮ್ಮೆಗೆ ಸೇರು ತುಪ್ಪ"ವೆಂಬ ಗಾದೆಯಂತೆ ಗುಣದೃಷ್ಟಿಯುವರಾಗಿ, ಈ ಮೊದಲೇ ಅವರೊಡನೆ ಅಯೋಗ್ಯ ರೀತಿಯಿಂದ ನಡೆದುಕೊಂಡು ಅವರನ್ನು ಹಿಂಸೆ ಪಡಿಸಿದೆವೆಂಬ ಪಶ್ಚಾತ್ತಾಪದಿಂದ ಜನ್ಮವಿರುವತನಕ ಕುದಿಯುಬೇಕಾಗುವದು; ಆದ್ದರಿಂದ ಸಾಂಸಾರಿಕರಿಗೆ ಪ್ರಾಮುಖ್ಯವಾಗಿ ಸಂಯಮನಶಕ್ತಿ, ಕ್ಷಮಾಗುಣ, ಔದಾರ್ಯ, ಹಿಂಸೆಯು ಹೇಸಿಗೆ, ಸಂಸಾರದ ನಶ್ವರತ್ವದ ಸ್ಮರಣ ಇವು ಅವಶ್ಯವಾಗಿ ಬೇಕಾಗುವವೆಂಬದನ್ನು ಸಾಂಸಾರಿಕರಾದ ನಾವು ಮರೆಯ ತಕ್ಕದ್ದಲ್ಲ.

ಸೇಲೀಮನು ತನ್ನ ವೇದನಾಯುಕ್ತ ಹೃದಯವನ್ನು ಹೇಗಾದರೂ ಹತ್ತಿಕ್ಕಿಕೊಂಡು, ಮೃತ್ಯುಛಾಯೆಯಿಂದ ಮಬ್ಬಾಗಿರುವ ಶಾಹೀ ಬೇಗಮೆಯ ಮಹಾಲಿನಲ್ಲಿ ಹೊಕ್ಕನು. ಆಗ ಪುನಃ ಪುನಃ ಆತನ ಮೈಮೇಲಿನ ಕೂದಲುಗಳು ನೆಟ್ಟಗಾಗುತ್ತಿದ್ದವು; ಆತನ ಹೃದಯದಲ್ಲಿಯ ಶೋಕವು ಉಕ್ಕಿ ಬರತೊಡಗಿತ್ತು. ಪಲ್ಲಂಗದ ಮೇಲಿನ ಶುಭ್ರಶಯ್ಯೆಯ ಮೇಲೆ ರತ್ನಾಲಂಕಾರಗಳಿಂದ ಮಂಡಿತಳಾಗಿದ್ದ ಅಪೂರ್ವ ಸೌಂದರ್ಯದ ಜೋಧಬಾಯಿಯ ಮೃತಶರೀರವನ್ನು ನೋಡಿ ಸೇಲೀಮನ ಮನಸ್ಸಿನ ಸ್ಥಿತಿಯು ಹೇಗಾಗಿರ

ಬಹುದೆಂಬದರ ನಿಜವಾದ ಅನುಭವವು ಪತ್ನೀಪ್ರಾಣರಾದ ವಿಧುರರಿಗೆ ಮಾತ್ರ ಆಗಬಹುದಲ್ಲದೆ, ನಮ್ಮಂಥ ಕ್ಷುದ್ರ ಲೇಖಕರು ಬಿಳಿಯ ಕಾಗದದ ಮೇಲೆ ಕರಿಯ ಗೆರೆಗಳನ್ನು ಸಾಲು ಸಾಲಾಗಿ ಕೊರೆಯುವದರಿಂದ ಸರ್ವಥಾ ಆಗಲಾರದು! ಸೇಲೀಮನು ಆತುರದಿಂದ ಶಾಹಿಯ ಬಳಿಗೆ ಹೋದನು. ಆಕೆಯ ಮುಖದಲ್ಲಿ ಮೃತ್ಯುವಿನ ಛಾಯೆಯು ಏನೂ ತೋರುತ್ತಿದ್ದಿಲ್ಲ. ನಿದ್ದೆ ಹತ್ತಿ ಮಲಗಿದಂತೆ ಆಕೆಯು ಮಲಗಿಬಿಟ್ಟಿದ್ದಳು. ಆಗ ಸೇಲೀಮನು ಆಕೆಯು ಬದುಕಿಯೇ ಇರುವಳೆಂದು ತಿಳಿದು ಆಕೆಯನ್ನು ಕುರಿತು– "ಪ್ರೀಯೆ, ನೀನು ನನ್ನ ಮೇಲೆ ಸಿಟ್ಟಾಗಿರುವೆಯೇನು? ನಾನು ನಿನ್ನೆ ಬರಲಿಲ್ಲವೆಂದು ಮುನಿಸುಗೊಂಡಂತೆ ತೋರುತ್ತದೆ. ನಾನು ನಿನ್ನನ್ನು ಪೀಡಿಸಿದೆನೆಂತಲೂ, ನಿನ್ನ ವಿನಂತಿಯನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲವೆಂತಲೂ ನೀನು ನಿದ್ದೆಯ ಸೋಗಿನಿಂದ ನನ್ನನ್ನು ಮೋಸಗೊಳಿಸುತ್ತಿರುವೆಯಾ?" ಎಂದು ಮಾತಾಡುತ್ತಾಡುತ್ತ ಆತನು ಶಾಹಿಯ ಮೈಮೇಲೆ ಬಿದ್ದನು; ಆದರೆ ಆತನು ಅಂಜಿ ಕೂಡಲೆ ಎದ್ದು ದೂರಸರಿದು ನಿಂತು ನಿರಾಶೆಯಿಂದ ಹುಚ್ಚನಹಾಗೆ ಕೂಗುತ್ತ ಗಟ್ಟಿಯಾಗಿ— ಇಲ್ಲ, ಈಕೆಯು ಬದುಕಿರುವದಿಲ್ಲ. ಈಕೆಯ ಈ ದೇಹವು ಪ್ರೇತರೂಪವಾಗಿರುವದು; ಆದರೆ ಈಕೆಯು ಸ್ವಾಭಾವಿಕವಾಗಿ ಸತ್ತಿರದೆ ಆತ್ಮಹತ್ಯ ಮಾಡಿಕೊಂಡಿರುವಳು. ಶಾಹೀ! ನನ್ನ ಪ್ರೀಯೆ ನೀನು ಕಡೆಗೆ ನನ್ನನ್ನು ಬಿಟ್ಟು ಹೋದೆಯಲ್ಲವೆ? ಇನ್ನು ನಿನ್ನ ಅಭಾವದಲ್ಲಿ ಈ ರಾಜಸಂಸಾರವು ನನಗೆ ಹೇಗೆ ಸುಖಾವಹವಾಗುವದು? ದಯಾಳುವಾದ ಪರಮೇಶ್ವರನು ನಿನ್ನಂಥ ಅಮೂಲ್ಯ ರತ್ನವನ್ನು ದೊರಕಿಸಿಕೊಟ್ಟಿದ್ದನು; ಆದರೆ ಮೂರ್ಖನು ನಾನು ಆ ರತ್ನವನ್ನು ಕಾಜಿನ ತುಣುಕೆಂದು ತಿಳಿದು ತಿಪ್ಪಿಯಮೇಲೆ ಚಲ್ಲಿಕೊಟ್ಟಂತಾಯಿತು. ಹಾಯ! ಹಾಯ! ಇನ್ನು ಮರಣ ಪರ್ಯಂತವಾಗಿ ನನಗೆ ಶಾಂತಿಯು ದೊರೆಯಲಾರದು. ಖುದಾ! ನನ್ನ ಮೇಲೆ ದಯಮಾಡಿ ನನ್ನ ಶಾಹೀ ಬೇಗಮೆಯನ್ನು ನನಗೆ ತಿರುಗಿಕೊಡು. ಇನ್ನು ಮೇಲೆ ನಾನು ನನ್ನ ಶಾಹೀ ಬೇಗಮೆಯ ಮಾತನ್ನು ಉಗುಳು ಹಾಕಿ ದಾಟುವದಿಲ್ಲ! ನಾನು ಅತ್ಯಂತ ಕ್ಷಮಾಶೀಲನಾಗುವೆನು. ನನಗೆ ದಿಲ್ಲಿಯ ಸಿಂಹಾಸನವೂ ಬೇಡ, ಜಗತ್ತಿನ ಐಶ್ವರ್ಯವೂ ಬೇಡ, ಅಧಿಕಾರವೂ ಬೇಡ, ಆ ಅಧಿಕಾರದ ಇಲ್ಲದ ಗರ್ವವೂ ಬೇಡ; ಬಹಳ ಹೇಳುವದೇನು, ನನ್ನ

ಶಾಹಿಯ ಸಲುವಾಗಿ ರಾಜಭಾಂಡಾರವನ್ನು ಕಾಲಿಲಿ ಒದ್ದು ಅದನ್ನು ಯಮುನೆಯಲ್ಲಿ ಸುರುವಿ ನಾನು ಶಾಹಿಯೊಡನೆ ಪ್ರೇಮದಿಂದ ಆಕೆಯ ಆಪ್ಪಣೆಯನ್ನು ಪಾಲಿಸುತ್ತ ಇರಲು ಸಿದ್ಧನಾಗಿರುವೆನು; ಆದರೆ ಖುದಾ, ನನ್ನ ಶಾಹಿಯನ್ನು ನನಗೆ ತಿರುಗಿ ಕೊಡು, ಎಂದು ಬಗೆಬಗೆಯಾಗಿ ಶೋಕಿಸಿದನು. ಪ್ರಿಯ ವಾಚಕರೇ, ನಾಚಿಕೆಗೇಡಿ ಸಾಂಸಾರಿಕರ ರೀತಿಯು ಹೀಗೆಯೇ ಸರಿ! ಇರುವತನಕ ಸೌಜನ್ಯದಿಂದ ನಡೆದುಕೊಳ್ಳುವಹಾಗಿಲ್ಲ, ಸತ್ತ ಬಳಿಕ ಮಾತ್ರ "ಸತ್ತ ಎಮ್ಮೆಗೆ ಸೇರು ತುಪ್ಪವೆಂ"ಬಂತೆ ಹಂಡಿ ಹಾಡಿಕೊಂಡು ಆಳುವದು! ಇರುವತನಕ ತಾಯಿತಂದೆಗಳನ್ನು ಬಡಿದು-ಹೊಡೆದು ಪ್ರಸಂಗ ಬಂದರೆ ಅವರ ಪ್ರಾಣ ತಕ್ಕೊಳ್ಳುವದಕ್ಕೂ ಹಿಂದೆಮುಂದೆ ನೋಡುವಹಾಗಿಲ್ಲ; ಆದರೆ ಸತ್ತಬಳಿಕ ಅವರ ಶ್ರಾದ್ಧ ಮಾಡುವಾಗ "ನಮ್ಮ ತಂದೆಗೆ ಉಂಡಿ ಖೀರುಗಳ ಮೇಲೆ ಪ್ರೀತಿ ಬಹಳ" ಎಂದು ಅನ್ನುತ್ತ ನಾಚಿಕೆಯಿಲ್ಲದೆ ತಮ್ಮ ನಾಲಿಗೆಯ ಸವಿಯನ್ನು ತೀರಿಸಿಕೊಳ್ಳುವದು! ಇಂಥ ನೀಚ ಸಂಸಾರಿಕರನ್ನು ಶಿಕ್ಷಿಸಲು ಯಮನೇ ಸಮರ್ಥನಲ್ಲದೆ ಅನ್ಯರ ಭಯವು ಇಂಥವರಿಗೆ ಎಂದೂ ತೋರಲಾರದು.

ಹೀಗೆ ಸೇಲೀಮನು ಶಾಹಿಯ ಸಲುವಾಗಿ ಶೋಕಮಾಡುತ್ತಿರಲು, ಹೊರಗೆ ಯಾರದೋ ಕಾಲಸಪ್ಪಳವಾದಂತಾಯಿತು. ಕೂಡಲೆ ಆತನು ಮೆಟ್ಟಿಬಿದ್ದು ಅತ್ತಕಡೆಗೆ ನೋಡಲು, ಆತನಿಗೆ ತನ್ನ ಶಾಹಿಯೇ ಬಂದಂತೆ ತೋರಿತು; ಆದರೆ ನೋಡುತ್ತಾನೆ, ಎರಡನೆಯದೇ ಒಂದು ವ್ಯಕ್ತಿಯು!! ಆಗ ಸೇಲೀಮನು ದ್ವೇಷದಿಂದ ಗದ್ದರಿಸಿ ಆ ವ್ಯಕ್ತಿಯನ್ನು ಕುರಿತು ಕರ್ಕಶ ಸ್ವರದಿಂದ—

ಸೇಲೀಮ— ಯಾರು ನೀನು ?

ವ್ಯಕ್ತಿ— ಜನಾಬಅಲಿ! ನಾನು ದಾಸಿಯ ದಾಸಿಯಿರುವೆನು, ನನ್ನ ಹೆಸರು ರುಬಿಯಾ. ನಾನು ಶಾಹೀ ಬೇಗಮೆಯ ದಾಸಿಯು!

ಸೇಲೀಮ— ರುಬಿಯಾ? ನೀನೆಂಥ ರುಬಿಯಾ? ನೀನು ಸೈತಾನ-ಳಿರುತ್ತೀ. ನನಗೆ ಚೇಷ್ಟೆ ಮಾಡಲಿಕ್ಕೆ ಇಲ್ಲಿಗೆ ಬಂದಿರುತ್ತೀ!

ರುಬಿಯಾ— ಅಂಥ ಸಾಹಸವು ಈ ಕ್ಷುದ್ರ ದಾಸಿಯಿಂದ ಹೇಗಾದೀತು ಶಹಾಜಾದೇ ಸಾಹೇಬ!

ಈ ಉತ್ತರದಿಂದ ಸೇಲೀಮನು ಸಮಾಧಾನವಾಗಲಿಲ್ಲ. ಆತನು ಅತ್ಯಂತ ಕ್ರುದ್ಧ ಸ್ವರದಿಂದ ಒಬ್ಬ ತಾರ್ತರ ಸ್ತ್ರೀಯನ್ನುದ್ದೇಶಿಸಿ "ಜುಮರಾನ" ಎಂದು ಕೂಗಿದನು. ಕೂಗಿನ ಕಡೆಯ ಅಕ್ಷರದ ಉಚ್ಚಾರವು ಮುಗಿಯುವದರೊಳಗೆ ಒಬ್ಬ ಇದ್ದಲಿಯ ವೈಬಣ್ಣದ ಬೆಕ್ಕಿನ ಕಣ್ಣಿನ ತಾರ್ತರಿ ಸ್ತ್ರೀಯೊಬ್ಬಳು ಬಂದು ಕುರ್ನಿಸಮಾಡಿ ನಿಂತುಕೊಂಡಳು. ಆಗ ಸೇಲೀಮನು ಆಕೆಯನ್ನು ಕುರಿತು ಕರ್ಕಶ ಸ್ವರದಿಂದ— ಈ ರುಬಿಯಾ ದಾಸಿಯು ನಾನು ಹೀಗೆ ದುಃಖಿಸುತ್ತಿರುವದನ್ನು ನೋಡಿ ನನ್ನ ಚೇಷ್ಟೆ ಮಾಡಲಿಕ್ಕೆ ಇಲ್ಲಿಗೆ ಬಂದಿರುವಳು; ಆದ್ದರಿಂದ ಈಕೆಯನ್ನು ನಿನ್ನ ಕೋಣೆಗೆ ಕರಕೊಂಡು ಹೋಗಿ ಹತ್ತು ಬಾರಕೋಲಿನ ಪೆಟ್ಟುಗಳನ್ನು ಹಾಕಿ ಜನಾನಖಾನೆಯಿಂದ ಈಕೆಯನ್ನು ಹೊರಗೆ ಹಾಕಿಬಿಡು, ಎಂದು ಆಜ್ಞಾಪಿಸಿದನು. ಸೇಲೀಮನ ಈ ಅಪ್ಪಣೆಯನ್ನು ಕೇಳಿ ಆ ತಾರ್ತರಿ ಸ್ತ್ರೀಯು ಬೆಪ್ಪಾಗಿ ಸೇಲೀಮನ ಮೋರೆಯ ಕಡೆಗೆ ನೋಡುತ್ತ ನಿಂತುಕೊಂಡಳು. ರುಬಿಯಾನಿಗಂತು ಸೇಲೀಮನಿಗೆ ನಿಜವಾಗಿ ಹುಚ್ಚು ಹಿಡಿದಿರುವದೆಂಬಂತೆ ತೋರಿತು. ಆಕೆಯು ಕೈಜೋಡಿಸಿ ಸೇಲೀಮನನ್ನು ಕುರಿತು— ಶಾಹಾಜಾದೇಸಾಹೇಬ, ತಮ್ಮ ಕಲ್ಯಾಣದ ಸಲುವಾಗಿ ನಾನು ಸಾಯಲಿಕ್ಕೂ ಸಿದ್ಧಳಾಗಿರುವೆನು. ಈಗ ನಾನು ಮೂರ್ತಿಜಖಾನರ ಹೇಳಿಕೆಯಂತೆ ತಮ್ಮ ಕಡೆಗೆ ಬಂದಿದ್ದೇನೆ. ಅವರು ಒಂದು ಜರೂರಿಯ ಸುದ್ದಿಯನ್ನು ತಂದಿದ್ದು, ದಿವಾಣಖಾನೆಯಲ್ಲಿ ನಿಮ್ಮ ಹಾದಿಯನ್ನು ನೋಡುತ್ತ ಕುಳಿತುಕೊಂಡಿರುವರು, ಎಂದು ಹೇಳಿದಳು.

ಮೂರ್ತಿಜಖಾನನ ಹೆಸರು ಕೇಳಿದಕೂಡಲೆ ಸೇಲೀಮನು ಎಚ್ಚತ್ತನು. ಕೂಡಲೆ ಆತನು ದಿವಾಣಖಾನೆಗೆ ಹೋಗಿ ನೋಡಲು, ಬಾದಶಹನ ಸೇನಾಪತಿಯೂ, ತನ್ನ ಜೀವದ ಗೆಳೆಯನೂ ಆದ ಮೂರ್ತಿಜಖಾನನು ತನ್ನ ಹಾದಿಯನ್ನು ನೋಡುತ್ತ ಕುಳಿತುಕೊಂಡಿದ್ದನು. ಆತನ ಬಾಡಿದ ಮೋರೆಯನ್ನು ನೋಡಿ ಸೇಲೀಮನ ಶೋಕಮಗ್ನ ಹೃದಯಕ್ಕೆ ಬಲವಾದ ಆಘಾತವಾಯಿತು. ಆತನು ಅಸ್ವಸ್ಥತೆಯಿಂದ ಮೂರ್ತಿಜಖಾನನನ್ನು ಕುರಿತು—

ಸೇಲೀಮ— ಖಾನ, ಏನು ಸುದ್ದಿಯು ?

ಮೂರ್ತಿಜಖಾನ—ಸುದ್ದಿಯೇತರದು ? ನಾಲ್ಕೂ ಕಡೆಗೂ ಅಮಂಗಲ

ಸ್ಥಿತಿಯೇ ಪಸರಿಸಿರುವಂತೆ ತೋರುತ್ತಿರುವದು. ಬಾದಶಹರ ಬೇನೆಯು ವಿಕೋಪಕ್ಕೆ ಹೋಗಿದ್ದು, ಖುಸ್ರುವಿಗೆ ಸಿಂಹಾಸನವು ಪ್ರಾಪ್ತವಾಗಬೇಕೆಂದು ಮಾನಸಿಂಹನೂ, ಅಜಮುಖಾನನೂ ಕೃಷ್ಣಕಾರಸ್ಥಾನಗಳನ್ನು ನಡೆಸಿರುವರು. ನೀವು ಆಗ್ರಾದ ಅರಮನೆಗೆ ಬಾದಶಹರನ್ನು ನೋಡಲಿಕ್ಕೆ ಹೋದರೆ, ಅವರು ನಿಶ್ಚಯವಾಗಿ ನಿಮ್ಮನ್ನು ಸೆರೆ ಹಿಡಿಯುವರು; ಅಂದಬಳಿಕ ಇದಕ್ಕಿಂತಲೂ ಅಮಂಗಲವಾದ ಸುದ್ದಿಯು ಮತ್ತೇನಿರಬೇಕು ?

ಸೇಲೀಮ (ಚಿಂತಾಯುಕ್ತ ಸ್ವರದಿಂದ)— ಹೌದು, ನೀನನ್ನುವದು ನಿಜವಿರುತ್ತದೆ.

ಮೂರ್ತಿಜ— ಆದರೂ ಸುಲ್ತಾನ, ನೀವು ಇಷ್ಟು ಖಿನ್ನರಾಗುವ ಕಾರಣವಿಲ್ಲ. ಶಾಹಿಮಂದಿರದ ಛಾವಣಿಯಲ್ಲಿ ನಿಮ್ಮ ಅನ್ನವನ್ನು ಉಂಡು ಚಕ್ಕಂದವಾಡುತ್ತಿದ್ದ ಐದು ಸಾವಿರ ಮೊಗಲ ಸೈನ್ಯವಿರುತ್ತದಷ್ಟೇ ? ಅವರಿಗೆ ಈಗಲೇ ಸಿದ್ಧವಾಗಬೇಕೆಂದು ಆಜ್ಞಾಪಿಸಿರಿ. ಅಂದರೆ ಅವರು ದೌಲತ ಬಾಗೆಯ ಘಾಟನ್ನು ದಾಟಿಹೋಗಿ ಆಗ್ರಾದಿಂದ ಒಂದು ಹರದಾರಿಯಮೇಲೆ ತಳವೂರಿ ಕುಳಿತುಕೊಳ್ಳುವರು. ನಾನೂ ನನ್ನ ಸೈನ್ಯದೊಡನೆ ಸಿದ್ಧವಾಗಿ ರುವೆನು. ಸೈಯ್ಯದಖಾನರೂ ನಿಮ್ಮ ಪಕ್ಷದವರಿರುವರು. ಅಂದಬಳಿಕ ಅಂಜುವದೇಕೆ ? ನಿಮಗೆ ಹೇಳತಕ್ಕ ಇನ್ನೊಂದು ಮಹತ್ವದ ಮಾತೆಂದರೆ, ಶಾಹೀ ಬೇಗಮೆಯ ಶೋಚನೀಯ ಮೃತ್ಯುವಿನ ಸುದ್ದಿಯನ್ನು ಎಲ್ಲಿಯೂ ಒಡೆಯಗೊಡಬೇಡಿರಿ. ಸುಲ್ತಾನಸಾಹೇಬ, ಅಳಲಿಕ್ಕೆ ಮುಂದೆ ಹೊತ್ತು ಇರುತ್ತದೆ; ಆದರೆ ಈಗಿನ ಕಾಲವು ಹೀಗೆ ಅಳುತ್ತ ಕುಳಿತುಕೊಳ್ಳತಕ್ಕದ್ದಲ್ಲ. ಈಗ ಅಳುತ್ತ ಕುಳಿತುಕೊಂಡರೆ ನೀವು ಕಡೆತನಕ ಅಳುತ್ತಲೇ ಕುಳಿತು ಕೊಳಬೇಕಾದೀತು.

ಈ ಮೇರೆಗೆ ನುಡಿದು ಮೂರ್ತಿಜಖಾನನು ಅವಸರದಿಂದ ಹೊರಟು ಹೋದನು. ಇತ್ತ ಸೇಲಿಮನಾದರೂ ತನ್ನ ಎದೆಯನ್ನು ಕಲ್ಲುಮಾಡಿ ಕೂಡಲೆ ಶಾಹೀ ಬೇಗಮೆಗೆ ದೌಲತಾಬಾದದಲ್ಲಿ ಗುಪ್ತ ರೀತಿಯಿಂದ ಮಣ್ಣುಕೊಟ್ಟನು.



## ೧೯ನೆಯ ಪ್ರಕರಣ

# ಅರಸನಾಗುವವನು ಅಂಧನಾದನು !



ಮಖಮಲಿನಿಂದ ಹೊದಿಸಿದ ಸುವರ್ಣಖಚಿತವಾದ ಪಲ್ಲಂಗದಮೇಲೆ ಬೇನೆಯಿಂದ ಜರ್ಜರನಾಗಿದ್ದ ಅಕಬರ ಬಾದಶಹನು ನಿದ್ರೆ ಹೋಗಿದ್ದನು. ಈಗ ಬಹು ದಿವಸಗಳಲ್ಲಿ ಇಷ್ಟು ಗಾಢವಾದ ನಿದ್ರೆಯು ಆತನಿಗೆ ಹತ್ತಿದ್ದಿಲ್ಲ; ಆದ್ದರಿಂದ ಆತನಿಗೆ ಎಚ್ಚರವಾಗಬಾರದೆಂದು ಎಲ್ಲರೂ ಮಿಸಿಕಾಡದೆ, ಪಿಟ್ಟೆಂದು ಮಾತಾಡದೆ ಸ್ತಬ್ಧವಾಗಿ ಕುಳಿತಿದ್ದರು; ಆದರೂ ಬಾದಶಹನ ನಾಡಿಗಳು ಮಂದವಾಗಿ, ಶ್ವಾಸೋಚ್ಛ್ವಾಸವು ಬಹುಮೆಲ್ಲಗೆ ಆಡಹತ್ತಿದ್ದರಿಂದ, ಆತನು ಬದುಕುವ ವಿಷಯವಾಗಿ ಎಲ್ಲರೂ ನಿರಾಶೆಪಟ್ಟು ಚಿಂತಾಕ್ರಾಂತರಾಗಿದ್ದರು. ಇನ್ನು ಸಂಸಾರಮಗ್ನರಾಗಿದ್ದ ಅಲ್ಲಿಯ ಸ್ವಾರ್ಥಪರ ಅಮೀರ ಉಮರಾವರಲ್ಲಿಯೂ, ರಾಜರು-ಮಹಾರಾಜರಲ್ಲಿಯೂ, ವೀರರು-ಮುತ್ಸದ್ದಿಗಳಲ್ಲಿಯೂ ಬಾದಶಹರ ಮರಣದ ವಿಷಯವಾಗಿ ನಿಜವಾದ ದುಃಖವು ಯಾರಿಗೆ ಎಷ್ಟರಮಟ್ಟಿಗೆ ಆಗಿತ್ತೆಂಬದನ್ನು ಮೇಲೆಮೇಲೆ ನೋಡಿ ಹೇಳುವದು ಅಶಕ್ಯವೇ ಸರಿ. ಬಾದಶಹನು ಜೀವದಿಂದಿದ್ದರೆ ತಮ್ಮ ಹಿತ ಸಾಧಿಸೀತೆಂದು ತಿಳಿದಿದ್ದ ಜನರಿಗೆ, ಬಾದಶಹನು ಸತ್ತರೆ ತಮ್ಮ ಹಿತವು ಮುಣುಗುವದಲ್ಲ, ಎಂಬ ಚಿಂತೆಯಿಂದ ಸ್ವಾರ್ಥಮೂಲಕ ದುಃಖವಾಗಿತ್ತು; ಅದರಂತೆ, ಬಾದಶಹನು ಸತ್ತರೆ ತಮ್ಮ ಹಿತಸಾಧನಕ್ಕೆ ಅನುಕೂಲವಾಗುವದೆಂದು ತಿಳಿದವರಿಗೆ, ಇನ್ನು ತಮ್ಮ ಹಿತಸಾಧನದ ಕಾಲವು ಸಮೀಪಿಸಿತೆಂಬ ಭಾವನೆಯಿಂದ ಅಂತರಂಗದಲ್ಲಿ ಸ್ವಾರ್ಥಮೂಲಕ ಸಮಾಧಾನವೇ ಆಗಿತ್ತು. ಹೀಗೆ ಬಾದಶಹನ ಮರಣದ ನೆವದಿಂದ ಅಲ್ಲಿ ಕುಳಿತಿದ್ದ ಪ್ರತಿಒಬ್ಬರ ಮನಸ್ಸಿನಲ್ಲಿ ಭಿನ್ನ ಭಿನ್ನ ವಿಚಾರಗಳು, ಭಿನ್ನ ಭಿನ್ನ ಆಕಾಂಕ್ಷೆಗಳು ಸುಳಿದಾಡುತ್ತಿರಲು, ಅವರೆಲ್ಲರು, "ಸಮುದ್ರನಾಥನು ತನ್ನಲ್ಲಿಯ ಹಲವು ಬಗೆಯ ಹುಚ್ಚು ಹುಳಕುಗಳನ್ನು ಮುಚ್ಚಿಕೊಂಡು ಜಲರಾಶಿಯನ್ನಷ್ಟೇ ತೋರಿಸಿ

ಗಂಭೀರನಾಗಿರುವಂತೆ," ಅವರು ತಮ್ಮ ವಿವಿಧ ಮನೋವ್ಯಾಪಾರಗಳನ್ನು ಮುಚ್ಚಿಕೊಂಡು ಬಾದಶಹನ ಮರಣದ ಸಲುವಾಗಿ ದುಃಖಿಸುವವರಂತೆ ಮ್ಲಾನವದನವನ್ನಷ್ಟೇ ಮುಂದೆ ಮಾಡಿ ಕುಳಿತಿದ್ದರು. ಅಷ್ಟರಲ್ಲಿ ಅಕಸ್ಮಾ-ತ್ತಾಗಿ ಬಾದಶಹನ ತುಟಿಯು ಅಲ್ಲಾಡಿತು. ಆಗ ರಾಜವೈದ್ಯನಾದ ಅಲ್ಲೀಖಾನನು ಬಾದಶಹನ ಕಿವಿಯ ಹತ್ತರ ತನ್ನ ಮುಖವನ್ನು ಒಯ್ದು ಮೃದುಸ್ವರದಿಂದ—"ಜಹಾಪನಾಹರ ಮನಸ್ಸಿನಲ್ಲಿ ಯಾವ ಅಪ್ಪಣೆ ಮಾಡ ಬೇಕೆನ್ನುವ ಹಾಗೆ ಆಗಿರುತ್ತದೆ?" ಎಂದು ಕೇಳಿದನು. ಆಗ ಅಕಬರ ಬಾದಶಹನು ಕ್ಷೀಣ ಸ್ವರದಿಂದ—"ಅಲ್ಲೀ! ಇನ್ನು ಎಂಥ ಅಪ್ಪಣೆಯು!! ಈ ಮರ್ತ್ಯ ಜಗತ್ತಿನಲ್ಲಿ ನಾನು ಇರುವ ಅವಧಿಯು ಮುಗಿಯುತ್ತ ಬಂದಿತು. ಖುದಾನು ನನ್ನನ್ನು ಕರೆಯುತ್ತಿರುವನು; ಆದರೆ ಸೇಲೀಮನು ಎಲ್ಲಿರುವನು? ಇನ್ನೂ ಆತನು ಇಲ್ಲಿಗೆ ಬಂದಿಲ್ಲವೇ? ಹಾಯ! ನನ್ನ ಕಟ್ಟಕಡೆಯ ಕರ್ತವ್ಯ ವನ್ನು ಮಾಡುವದು ಹಾಗೆಯೇ ಉಳಿಯುವದೆನ್ನುವಹಾಗೆ ತೋರುತ್ತದೆ, ಎಂದು ನುಡಿಯುತ್ತಿರಲು, ಅದೇ ಕಾಲದಲ್ಲಿ ಸೇಲೀಮನು ಅಲ್ಲಿಗೆ ಬಂದು ಹಕೀಮನ ಅಪ್ಪಣೆಯಂತೆ ಬಾದಶಹನ ಹಾಸಿಗೆಯಹತ್ತರ ನಿಂತುಕೊಂಡನು. ಆತನು ಅಶ್ರುಪೂರ್ಣ ನೇತ್ರಗಳಿಂದ ತಂದೆಯ ಮೋರೆಯಕಡೆಗೆ ನೋಡುತ್ತ ಮೃದು ಸ್ವರದಿಂದ—"ಶಹಾನಜಹಾ! ನಿಮ್ಮ ಈ ನರಾಧಮನಾದ ಮಗನು ನಿಮ್ಮ ಚರಣದೆಡೆಯಲ್ಲಿ ನಿಂತಿರುವನು, ಅಪ್ಪಣೆಯಾಗಬೇಕು, ಎಂದು ಬೇಡಿಕೊಂಡನು. ಸೇಲೀಮನ ಶಬ್ದಗಳನ್ನು ಕೇಳಿದಕೂಡಲೆ ಬಾದಶಹನಿಗೆ ಆನಂದವಾಯಿತು. ಆತನು ಸ್ನೇಹಪೂರ್ಣ ಸ್ವರದಿಂದ ತನ್ನ ಆ ಮಗನನ್ನು ಕುರಿತು—"ಸೇಲೀಮಾ, ಪ್ರೇಮಲನಾದ ತಂದೆಯು ಯಾವ ಮಗನನ್ನೂ ಉದ್ಧಟನನ್ನಾಗಿಯೂ, ಬಂಡುಗಾರನನ್ನಾಗಿಯೂ ತಿಳಿಯುವದಿಲ್ಲ. ಆತನು ತನ್ನ ಹೆಸರಿಗೆ ಒಪ್ಪುವಂತೆ ಮಗನ ಯಾವತ್ತು ಅಪರಾಧಗಳನ್ನೂ ಪ್ರೇಮ-ವಶನಾಗಿ ಕ್ಷಮಿಸಿ ಮಗನನ್ನು ಮುಂದಕ್ಕೆ ಕರೆಯುವನು. ಸೇಲೀಮ, ನಾನು ಬಹಳ ಹೇಳುವದರಿಂದೇನು ಪ್ರಯೋಜನವು? ಮುಖ್ಯವಾಗಿ ಮೂರು ಬಗೆಯ ಚಿಂತೆಯಲ್ಲಿಯೇ ನನ್ನ ಜೀವನದ ಪರಿಸಮಾಪ್ತಿಯಾಯಿತು. ಒಂದನೆಯ ಚಿಂತೆಯೆಂದರೆ, ದಯಾಳುವಾದ ಖುದಾನು ನನಗೆ ದಯಪಾಲಿಸಿರುವ ಈ ಭರತಖಂಡದ ಸಾಮ್ರಾಜ್ಯವನ್ನು ಸರಿಯಾಗಿ ನಾನು ಆಳುವೆನೋ ಇಲ್ಲವೋ

ಎಂಬದು; ಎರಡನೆಯ ಚಿಂತೆಯೆಂದರೆ, ಏನು ಮಾಡಿದರೆ ನನ್ನ ಈ ಪ್ರೀಯ ಹಿಂದುಸ್ಥಾನದ ಕಲ್ಯಾಣವಾದೀತೆಂಬದು; ಇನ್ನು ಮೂರನೆಯ ಚಿಂತೆ ಯೆಂದರೆ, ನಿನ್ನ ವಿಷಯದ್ದು; ನೀನು ಎಂಥವನಿದ್ದರೂ ನಿನಗೇ ಹಿಂದು ಸ್ಥಾನದ ಸಿಂಹಾಸನವು ಹೇಗೆ ಪ್ರಾಪ್ತವಾದೀತೆಂಬದು; ಆದರೆ ಪ್ರೀಯ ಸೇಲೀಮ, ಈಗ ನಾನು ನಿನಗೆ ಹಿಂದುಸ್ಥಾನದ ಸಿಂಹಾಸನವನ್ನು ಕೊಟ್ಟು ಹೊರಟೆನು. ಇನ್ನು ಈ ಪೃಥ್ವಿಯಲ್ಲಿ ಇರಲಿಕ್ಕೆ ನನಗೆ ಖುದಾನ ಅಪ್ಪಣೆ ಯಿಲ್ಲ. ನನ್ನ ಅನುಕರಣ ಮಾಡಿ ಈ ಸಾಮ್ರಾಜ್ಯದ ಕಾರಭಾರವನ್ನು ನಡಿಸಿ ಲೋಕಕಲ್ಯಾಣವನ್ನು ಮಾಡು. ಇನ್ನು ಎಲ್ಲ ಭಾರವನ್ನು ನಿನ್ನ ಮೇಲೆ ಹೊರಿಸಿ ನಾನು ಹೊರಟೆನು. ಅಜೀಮಖಾನ, ನನ್ನ ಅಪ್ಪಣೆಯಂತೆ ಎಲ್ಲ ಅಮೀರ ಉಮರಾವರನ್ನು ಕರೆದೆಯೋ ?

ಬಾದಶಹನ ಈ ಪ್ರಶ್ನವನ್ನು ಕೇಳಿ ಅಜೀಮಖಾನನು ಕೈಜೋಡಿಸಿ— ಜಹಾಪನಾಹರ ಅಪ್ಪಣೆಯಂತೆ ಯಾವತ್ತು ಜನರು ಬಂದಿದ್ದು, ಹಿಂದಿನ ಕೋಣೆಯಲ್ಲಿ ಅಪ್ಪಣೆಯ ಹಾದಿಯನ್ನೇ ನೋಡುತ್ತ ಕುಳಿತುಕೊಂಡಿರು ವರು, ಎಂದು ಹೇಳಿದನು. ಆಗ ಅಕಬರ ಬಾದಶಹನು— " ಬಹೋತ ಅಚ್ಛಾ, ಅವರೆಲ್ಲರನ್ನು ನಾನು ಕರೆದಿರುವೆನೆಂದು ಹೇಳು, ತಡಮಾಡಬೇಡ. ಎಂದು ಆಜ್ಞಾಪಿಸಿದನು. ಕೂಡಲೆ ಅಜೀಮಖಾನನು ಅವರೆಲ್ಲರನ್ನು ಕರೆಯಲು, ಆ ರಾಜನಿಷ್ಠ ಮಂಡಲಿಯು ತತ್‌ಕ್ಷಣ ಒಳಗೆ ಬಂದು ಮರಣೋನ್ಮುಖ ಬಾದಶಹನನ್ನು ಅಭಿವಂದಿಸಿ ತಲೆಬಾಗಿಸಿ ನಿಂತುಕೊಂಡಿತು. ಎಲ್ಲರ ಮುಖಗಳಲ್ಲಿ ಒಂದು ಬಗೆಯ ಗಾಂಭೀರ್ಯವು ತೋರುತ್ತಿದ್ದು, ಅದರಲ್ಲಿ ಖಿನ್ನತೆಯ ಲಕ್ಷಣವು ಒಡೆದು ಕಾಣುತ್ತಲಿತ್ತು. ಅಕಬರ ಬಾದ- ಶಹನು ಒಮ್ಮೆ ಎಲ್ಲರ ಮೋರೆಗಳ ಕಡೆಗೆ ನೋಡಿದನು. ಆಗ ಆತನ ಮುಖ ದಲ್ಲಿ ಒಂದು ಪ್ರಕಾರದ ದೈವೀತೇಜಸ್ಸು ಮಿನುಗುತ್ತಲಿತ್ತು. ಕೆಲ ಹೊತ್ತಿನ ತನಕ ಎಲ್ಲರ ಕಡೆಗೆ ನೋಡುವದಾದಮೇಲೆ ಬಾದಶಹನು ಕ್ಷೀಣ ಸ್ವರದಿಂದ, ಆದರೆ ಗಾಂಭೀರ್ಯದಿಂದ ಎಲ್ಲರನ್ನುದ್ದೇಶಿಸಿ ಮಾತಾಡತೊಡಗಿದನು.— " ಇನ್ನು ನನಗೆ ಹೆಚ್ಚು ಮಾತಾಡುವ ಸಾಮರ್ಥ್ಯವು ಉಳಿದಿರುವದಿಲ್ಲ. ನನ್ನ ನಾಲಿಗೆಯು ಕ್ರಮವಾಗಿ ಒಳಗೆ ಎಳೆಯುತ್ತಿರುವದು. ಕಣ್ಣುಗಳ ನೋಡುವ ಸಾಮರ್ಥ್ಯವು ನಷ್ಟವಾಗುತ್ತ ನಡೆದಿದ್ದು ಆದರೂ, ನಿಮ್ಮೊಡನೆ

ಕಡೆಯವೆಂದು ನಾಲ್ಕು ಮಾತುಗಳನ್ನು ಆಡಬೇಕಾಗಿರುವದು; ಹಾಗೆ ಮಾತಾಡುವ ಪ್ರಯತ್ನವನ್ನೂ ನಾನು ಮಾಡುವೆನು. ನೀವೆಲ್ಲರೂ ಶೂರರೂ, ನಂಬಿಗೆಯುವರೂ ಇದ್ದು, ನನ್ನ ಆಶ್ರಯದಿಂದ ಪ್ರತಿಪಾಲಿತರಾಗಿರುವಿರಿ; ಮತ್ತು ನಿಮ್ಮ ಪ್ರತಿಒಬ್ಬರ ಬಳಿಯಲ್ಲಿ ಅಪಾರ ದ್ರವ್ಯಸಂಚಯವೂ ಆಗಿರುತ್ತದೆ. ಅದರಂತೆ ನನ್ನ ಕೈಕೆಳಗಿದ್ದು ಭಯಂಕರ ರಣಕ್ಷೇತ್ರದಲ್ಲಿಯೂ ನಿಮ್ಮ ಜೀವದ ಹಂಗನ್ನಿಡನೆ ಅಪೂರ್ವ ಸಮರ ಕೌಶಲ್ಯವನ್ನು ತೋರಿಸುವದರಲ್ಲಿ ನೀವು ಹಿಂದೆ ಮುಂದೆ ನೋಡಿರುವದಿಲ್ಲ; ಆದ್ದರಿಂದ ಈಗ ನೀವು ನನ್ನ ಸನ್ಮಾನಕ್ಕಾಗಿ ನಿಮ್ಮ ಖಡ್ಗಗಳನ್ನು ಒರೆಗಳಿಂದ ಹಿರಿದು ನನ್ನ ಮುಂದಿಟ್ಟು ಮೊಣಕಾಲೂರಿ ನನ್ನ ಬಳಿಯಲ್ಲಿ ಕುಳಿತುಕೊಳ್ಳಿರಿ. ಇನ್ನು ನಾನು ನಿಮ್ಮ ಬಹು ಸ್ವಲ್ಪಕಾಲದ ಸಂಗಡಿಗನಾಗಿರುವೆನು.

ಈ ಮೇರೆಗೆ ಬಾದಶಹನು ನುಡಿದಕೂಡಲೆ ಅಸಂಖ್ಯ ಖಡ್ಗಗಳು ಕೋಶಮುಕ್ತವಾಗಿ ದೀಪಪ್ರಕಾಶದಲ್ಲಿ ವಿದ್ಯುತ್ತಿನಂತೆ ಲಕಲಕಿಸಹತ್ತಿದವು. ಬಾದಶಹನು ಹೇಳಿದಂತೆ ಯಾವತ್ತು ಅಮೀರ–ಉಮರಾವರೂ, ರಾಜರು–ಮಹಾರಾಜರೂ ಮೊಣಕಾಲೂರಿ ಕುಳಿತು ಬಾದಶಹನ ಅಪ್ಪಣೆಯ ಹಾದಿಯನ್ನು ಉತ್ಕಂಠೆಯಿಂದ ನೋಡಹತ್ತಿದರು. ಈ ಕಾಲದಲ್ಲಿ ಬಾದಶಹನ ಎರಡೂ ನೇತ್ರಗಳು ಅಶ್ರುಪೂರ್ಣವಾಗಿದ್ದವು. ಎಲ್ಲರೊಡನೆ ಕಟ್ಟಕಡೆಯ ಮಾತಾಡುವ ಪ್ರಸಂಗ ಬಂದದ್ದಕ್ಕಾಗಿ ಆತನ ಕಂಠಬಿಗಿದು, ಆತನ ಮುಖದಿಂದ ಶಬ್ದಗಳು ಹೊರಡದಾದವು. ಈ ಮೇರೆಗೆ ಕೆಲಹೊತ್ತು ಮುಗ್ಧಾವಸ್ಥೆಯಲ್ಲಿಯೂ ಭೀಷಣವಾದ ಸ್ತಬ್ಧತೆಯಲ್ಲಿಯೂ ಹೋದಬಳಿಕ ಬಾದಶಹನು ಮಾತಾಡಲಾರಂಭಿಸಿದನು. ಆತನು ಎಲ್ಲರನ್ನುದ್ದೇಶಿಸಿ–“ಈ ವರೆಗೆ ನೀವು ನನ್ನ ಯಾವತ್ತು ಅಪ್ಪಣೆಗಳನ್ನು ಈಶ್ವರಾಜ್ಞೆಗಳೆಂದು ತಿಳಿದು ಆದರಪೂರ್ವಕವಾಗಿ ಪಾಲಿಸುತ್ತ ಬಂದಿರುವಿರಿ. ಇನ್ನು ನಾನು ಈ ಲೋಕವನ್ನು ಬಿಟ್ಟು ಹೋಗುವಾಗ ನನ್ನ ಹಿರಿಯ ಮಗನಾದ ಸೇಲೀಮನನ್ನು ಸಿಂಹಾಸನದ ಮಾಲಕನನ್ನಾಗಿ ಮಾಡಿಟ್ಟಿರುವೆನು. ನಮ್ಮ ರಾಜನಿಷ್ಠ ಪರಿವಾರವಾದ ನೀವು ನಿಮ್ಮ ಜನ್ಮವಿರುವತನಕ ಸೇಲೀಮನನ್ನು ರಕ್ಷಿಸಿರಿ. ಇನ್ನು ನೀವೇ ನನ್ನ ಈ ಉಚ್ಛೃಂಖಲಮಗನ ತಂದೆಯಂತೆಯೂ, ಬಂಧುಗಳಂತೆಯೂ, ಮಿತ್ರರಂತೆಯೂ ಇರುವಿರಿ; ಆದ್ದರಿಂದ “ನಾವು ಹೀಗೆಯೇ ಸೇಲೀಮನೊಡನೆ ನಡೆದುಕೊಳ್ಳುವೆವು”

ಎಂದು ನನ್ನ ಈ ಕಟ್ಟಕಡೆಯ ಹಾಸಿಗೆಯನ್ನು ಸ್ಪರ್ಶಮಾಡಿ ನೀವು ಪ್ರತಿಜ್ಞೆ ಮಾಡಿರಿ. ನಿಮ್ಮ ಈ ಪ್ರತಿಜ್ಞೆಯನ್ನು ಕೇಳಿದಕೂಡಲೆ ನನ್ನ ತಳಮಳಿಸುವ ಆತ್ಮವು ಶಾಂತವಾಗುವದು. ಇದಷ್ಟು ನನ್ನ ಕಟ್ಟಕಡೆಯ ಇಚ್ಛೆಯನ್ನು ಪೂರ್ಣಮಾಡಿರಿ. ಎಂದು ನುಡಿಯಲು, ಬಾದಶಹನ ಇಚ್ಛೆಯಂತೆ ಎಲ್ಲರೂ ಸದ್ಗದಿತ ಕಂಠಗಳಿಂದ ಪ್ರತಿಜ್ಞೆ ಮಾಡಿದರು. ಆಗ ಬಾದಶಹನು ಸೇಲೀಮನನ್ನು ಕರೆದು— ಪ್ರಿಯ ಸುಲ್ತಾನ ಸೇಲೀಮ ನಿನ್ನ ಮರಣೋನ್ಮುಖ ತಂದೆಗೆ ನೀನೂ ಒಂದು ಮಾತಿನ ಸಲುವಾಗಿ ವಚನ ಕೊಡು. ನೀನು ನಿನ್ನ ಮಗನಾದ, ಹಾಗು ನನ್ನ ಅತ್ಯಂತ ಪ್ರೀತಿಯ ಮೊಮ್ಮಗನಾದ ಖುಸ್ರುವಿನ ಸರ್ವಾಪರಾಧಗಳನ್ನು ಕ್ಷಮಿಸಿ, ಆತನನ್ನು ಪ್ರೀತಿಸುವೆನೆಂದು ನನ್ನ ಚರಣ ಸ್ಪರ್ಶಮಾಡಿ ಹೇಳು." ಎಂದು ನುಡಿಯುವಾಗ ಬಾದಶಹನ ಕಣ್ಣುಗಳು ಪುನಃ ಅಶ್ರುಪೂರ್ಣವಾದವು. ಆಗ ಸೇಲೀಮನೂ ಕಣ್ಣೀರು ಸುರಿಸುತ್ತ ತಂದೆಯ ಚರಣಸ್ಪರ್ಶ ಮಾಡಿ ತನ್ನ ತಂದೆಯ ಇಚ್ಛೆಯಂತೆ ಪ್ರತಿಜ್ಞೆ ಮಾಡಿದನು. ಆದರಿಂದ ಬಾದಶಹನಿಗೆ ಒಂದು ಬಗೆಯ ಭಾರವು ಇಳಿದಂತಾಯಿತು. ಅಷ್ಟರಲ್ಲಿ ಅವನ ಜೀವನ ದೀಪದ ತೇಜವು ಕಡಿಮೆಯಾಗುತ್ತ ಹೋಯಿತು. ನೇತ್ರಪಾಟವವು ತೀರ ಕಡಿಮೆಯಾಗಿ ಸುತ್ತು ಮುತ್ತು ಅಂಧಃಕಾರವು ಪಸರಿಸಿದಂತೆ ಬಾದಶಹನಿಗೆ ತೋರಹತ್ತಿತು. ಶ್ವಾಸೋಚ್ಛ್ವಾಸವು ಕಡಿಮೆ ಕಡಿಮೆಯಾಗುತ್ತ ಅಕಸ್ಮಾತ್ ಕಡೆಗೆ ನಿಂತುಹೋಯಿತು! ಆಯಿತು, ಸಾಮ್ರಾಟನು ತಾಯಿಯ ಹೊಟ್ಟೆಯಿಂದ ಹೊರಬಿದ್ದಕೂಡಲೆ ಮೊಟ್ಟ-ಮೊದಲು ಮಾರವಾಡದ ರಣಗುಟ್ಟುವ ಮರುಭೂಮಿಯಲ್ಲಿ ಎಳೆದುಕೊಂಡ ಶ್ವಾಸವು, ಈಗ ಸ್ವರ್ಗತುಲ್ಯವಾದ ಆಗ್ರಾದ ಅರಮನೆಯಲ್ಲಿ ಒಮ್ಮೆ ಹೊರಟು ಹೋಗಿಬಿಟ್ಟಿತು! ಬಾದಶಹನು ಇದ್ದದ್ದನ್ನೆಲ್ಲ ಇಲ್ಲಿಯೇ ಬಿಟ್ಟು ಪರಲೋಕಕ್ಕೆ ತೆರಳಿದನು. ಕಟ್ಟಕಡೆಯಲ್ಲಿ ಬಾದಶಹನ ಮುಖದಿಂದ— "ಸೇಲೀಮ, ಶಾಹೀ ಬೇಗಮೆಯ ಕಡೆಗೆ ಲಕ್ಷವಿರಲಿ, ಖುಸರು, ಖು–ಸ–ರು; ಖುದಾ, ಖು–ದಾ" ಎಂಬ ಶಬ್ದಗಳು ಕ್ಷೀಣ ಸ್ವರದಿಂದ ಹೊರಟವು!!" ಆಯಿತು, ದೀಪವು ಶಾಂತವಾಗಿ ಹೋಯಿತು. ನಕ್ಷತ್ರವು ಪತನಹೊಂದಿತು. ಒಂದು ಪ್ರಕಾರದ ಧರಣೀಕಂಪವಾಯಿತೆಂತಲೂ ಹೇಳಬಹುದು. ಯಾಕಂದರೆ ಧರಣಿಯೊಳಗಿನ ಒಂದು ಅಮೂಲ್ಯವಾದ ರತ್ನವು ಕಳೆದುಹೋಯಿತು!

ಈ ಕಾಲದಲ್ಲಿ ಆಕಾಶದೊಳಗಿನ ನಕ್ಷತ್ರಗಳು ನಿಸ್ತೇಜವಾಗಿ ತೋರತೊಡ ಗಿದವು. ಚಂದ್ರನಿಗೆ ಅತ್ಯಂತ ದುಃಖವಾದದ್ದರಿಂದ, ಆತನು ಯಾವಾಗೋ ತನ್ನ ಮೋರೆಯನ್ನು ಒಂದು ಕಪ್ಪು ಮೋಡದ ಮರೆಯಲ್ಲಿ ಅಡಗಿಸಿದ್ದನು! ಹೀಗೆ ಅಕಬರ ಬಾದಶಹನು ಮರಣಹೊಂದಲು, ಆತನ ತರುವಾಯು ಸೇಲೀಮನು "ಅಬುಲ ಮುಜಫರ ನೂರಉದ್ದೀನ ಮುಹಮ್ಮದ ಜಹಾಂಗೀರ" ಎಂಬ ಹೆಸರನ್ನು ಧರಿಸಿ ಹಿಂದುಸ್ಥಾನದ ಬಾದಶಹನಾದನು.

ಅಕಬರನ ಮರಣದನಂತರ ಯಾವತ್ತು ಹಿಂದುಸ್ಥಾನವು, ವಿಶೇಷ ವಾಗಿ ಆಗ್ರಾ ರಾಜಧಾನಿಯು ಶೋಕಮಗ್ನವಾಯಿತು. ಸೇಲೀಮನೂ, ಆಗ್ರಾದೊಳಗಿನ ಯಾವತ್ತು ಮುಸಲ್ಮಾನ ಉಮರಾವರೂ ಅಕಬರ ಬಾದಶಹನ ದೇಹವಿಟ್ಟ ಪೆಟ್ಟಿಗೆಯನ್ನು ಹೆಗಲಮೇಲೆ ಹೊತ್ತುಕೊಂಡು ಬರಿಗಾಲು ಬಕ್ಕನೆತ್ತಿಗಳಿಂದ ಶಿಕಂದರಬಾದದ ಕಬರಸ್ಥಾನದ ಕಡೆಗೆ ಸಾಗಿ ದ್ದರು. ಅವರು ಬಾದಶಹನಿಗೆ ಕಡೆತನಕ ಶಾಂತಿಸುಖವು ದೊರೆಯುವಂತೆ ಆತನ ಶವವನ್ನು ಕಬರಸ್ಥಾನದಲ್ಲಿಟ್ಟು ತಿರುಗಿಬಂದರು. ಇವರೆಲ್ಲರ ಸಂಗಡ ದುರ್ದೈವಿಯಾದ ಖುಸರುವೂ ಇದ್ದನು. ತನ್ನ ಅಜ್ಜನು ಸತ್ತದ್ದರಿಂದ ಖುಸರುವು ಬಹು ದುಃಖಿತನಾಗಿದ್ದನು. ಆತನಿಗೆ ತನ್ನ ತಾಯಿಯಾದ ಶಾಹೀ ಬೇಗಮೆಯು ಸತ್ತ ಸುದ್ದಿಯು ಗೊತ್ತಾಗಿದ್ದಿಲ್ಲ; ಆತನಿಗೊಬ್ಬನಿಗೇ ಏಕೆ, ಸೇಲೀಮನ ಗೂಢ ತಂತ್ರದ ಮೂಲಕ ಆ ಸುದ್ದಿಯು ಕೆಲವು ನಿಯಮಿತ ಜನರ ಹೊರತು ಯಾರಿಗೂ ಗೊತ್ತಾಗಿದ್ದಿಲ್ಲವೆಂದು ಹೇಳಬಹುದು. ಇದರ ಮೇಲಿಂದ ಸೇಲೀಮನ ಗೂಢ ತಂತ್ರದ ಮಹಿಮೆಯು ಎಷ್ಟು ಬಲಿಷ್ಠವಾದದ್ದಿತ್ತೆಂಬದು ಚನ್ನಾಗಿ ವ್ಯಕ್ತವಾಗುತ್ತದೆ. ಸೇಲೀಮನು ತನ್ನ ತಂದೆಯು ಹಾಕಿಕೊಟ್ಟ ಮೇಲುಪಂಕ್ತಿಯಂತೆ ರಾಜ್ಯಕಾರಭಾರವನ್ನು ನಡಿಸಿ ಎಲ್ಲರ ಪ್ರೇಮವನ್ನು ಸಂಪಾದಿಸತೊಡಗಿದನು. ಜಾಹಾಂಗೀರನ ಸ್ಥಳದಲ್ಲಿ ಬೇರೆ ಯಾವನೊಬ್ಬ ಬಾದಶಹನು ಇದ್ದರೆ ಮಾನಸಿಂಹನನ್ನೂ, ಅಜೀಮ ಖಾನನನ್ನೂ ಕೊಲ್ಲಿಸದೆ ಇರುತ್ತಿದ್ದಿಲ್ಲ; ಆದರೆ ಸೇಲೀಮನು ಆಪ್ತರ ರಕ್ತದಿಂದ ತನ್ನ ಕೈಗಳನ್ನು ಕಲಂಕಿತವಾಗಿ ಮಾಡಿಕೊಳ್ಳಲಿಕ್ಕಿಲ್ಲವೆಂದು ನಿಶ್ಚಯಿಸಿದನು, ಆತನು ಎಲ್ಲರ ಅಪರಾಧಗಳನ್ನು ಉದಾರಾಂತಃಕರಣದಿಂದ ಮನಃಪೂರ್ವಕ ಕ್ಷಮಿಸಿ, ತನ್ನ ಔದಾರ್ಯದ ಗುರುತನ್ನು ಜನರಿಗೆ ಮಾಡಿಕೊಡುವದಕ್ಕಾಗಿ

ರಾಜಾ ಮಾನಸಿಂಹನಿಗೆ ಮೊದಲಿಗಿಂತಲೂ ಹೆಚ್ಚು ಉಚ್ಚ ಪದವಿಯ ಸ್ಥಳವನ್ನು ಕೊಟ್ಟು, ಬಂಗಾಲದ ಜಮೀನದಾರರ ಜಗಳ ತೀರಿಸುವ ಕೆಲಸದ ಮೇಲೆ ಆತನನ್ನು ಹೊಸದಾಗಿ ನಿಯಮಿಸಿ, ಒಳ್ಳೇ ಸನ್ಮಾನದಿಂದ ಆತನನ್ನು ಅತ್ತ ಕಡೆಗೆ ಕಳಿಸಿದನು. ಅದರಂತೆಯೇ ಖುಸರುವಿನ ಮಾವನಾದ ಅಜೀಮ ಖಾನನನ್ನು ಪಂಚನದದ ಕಾರಭಾರಿಯನ್ನಾಗಿ ನಿಯಮಿಸಿ, ಆತನನ್ನು ಸನ್ಮಾನದಿಂದ ಅತ್ತ ಕಡೆಗೆ ಕಳಿಸಿಕೊಟ್ಟನು. ಅಬುಲಫಜಲನನ್ನು ಕೊಂದ ರಾಜಾ ವೀರಸಿಂಹದೇವನಿಗೂ ಸೇಲೀಮನು ವಿಪುಲ ಪಾರಿತೋಷಕವನ್ನು ಕೊಟ್ಟದ್ದಲ್ಲದೆ, ದೊಡ್ಡ ಜಹಗೀರು ಹಾಕಿಕೊಟ್ಟು ಅವನ ಮನಸ್ಸನ್ನು ಸಂತೋಷಪಡಿಸಿದನು.

ಈ ಬಗೆಯ ಉದಾರ ಚರಿತದಿಂದ ಲೋಕಪ್ರಿಯನಾಗತೊಡಗಿದ್ದ ಸೇಲೀಮನು ತನ್ನ ಅಪರಾಧಿ ಮಗನಾದ ಖುಸರುವನ್ನು ನಿರಾಕರಿಸಲಿಲ್ಲ. ಬಾದಶಹನ ಮರಣದ ಮರುದಿವಸವೇ ಖುಸರುವಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು, ಬೇಕಾದಲ್ಲಿ ಹೋಗಿಬರಲಿಕ್ಕೆ ಆತನಿಗೆ ಆಸ್ಪದ ಕೊಟ್ಟನು. ಆತನು ಖುಸರುವಿನ ಯಾವತ್ತು ಅಪರಾಧವನ್ನು ಕ್ಷಮಿಸಿ, ಆತನನ್ನು ಅಲಹಾಬಾದದ ಸುಬೇದಾರನನ್ನಾಗಿ ಮಾಡಬೇಕೆಂದು ಮಾಡಿದ್ದನು; ಆದರೆ ಖುಸರುವೇ ಆ ಜವಾಬದಾರಿಯ ಕೆಲಸವನ್ನು ನಿರಾಕರಿಸಿದನು. ಹೀಗೆ ತನ್ನ ಮಗನು ತನ್ನ ಅಪ್ಪಣೆಯನ್ನು ಮೀರುವದಕ್ಕಾಗಿ ಸೇಲೀಮನಿಗೆ ಸಿಟ್ಟು ಬರಲಿಲ್ಲ; ಯಾಕಂದರೆ ಆತನು ಮೇಲೆ ಹೇಳಿದಂತೆ ಮಗನ ಅಪರಾಧಗಳನ್ನೆಲ್ಲ ಕ್ಷಮಿಸಿ ಮೊದಲಿನಂತೆಯೇ ಆತನನ್ನು ಪ್ರೀತಿಸತೊಡಗಿದ್ದನು. ತಾಯಿ ಸತ್ತ ಮಗನೆಂಬ ಅಂತಃಕರಣದಿಂದಲೂ ಸೇಲೀಮನ ಮನಸ್ಸು ತಿರುಗಿರಬಹುದು? ತಂದೆಯ ಈ ಕೃಪೆಗಾಗಿ ಖುಸರುವೂ ಸಮಾಧಾನಪಟ್ಟನು; ಆದರೆ ತನ್ನ ತಂದೆಯ ರಾಜ್ಯಾಭಿಷೇಕದ ಉತ್ಸವಗಳಾದರೂ ತನ್ನ ತಾಯಿಯು ತನ್ನ ಕಣ್ಣಿಗೆ ಬೀಳದ್ದರಿಂದ ಖುಸರುವಿಗೆ ಬಹಳ ಅಸಮಾಧಾನವಾಯಿತು. ಒಂದು ದಿವಸ ಆತನು ತನ್ನ ತಂದೆಯಾದ ಸೇಲೀಮನನ್ನು ಕುರಿತು:— "ಜಹಾಪನಾಹ! ನಮ್ಮ ಅವ್ವನು ಎಲ್ಲಿ ಇರುವಳು ?" ಎಂದು ಕೇಳಿದನು. ಮಗನ ಈ ಕಾರುಣ್ಯದ ದೀನ ವಾಣಿಯನ್ನು ಕೇಳಿ ಸೇಲೀಮನ ಕಣ್ಣೊಳಗಿಂದ ನೀರುಗಳು ಸುರಿಯಹತ್ತಿದವು; ಮೋರೆಯು ಖಿನ್ನವಾಯಿತು, ತಂದೆಯು ಹೀಗೆ ದುಃಖಿತ

ನಾದದ್ದನ್ನು ನೋಡಿ ಖುಸರುವು ಅಧೀರತೆಯಿಂದ ಅಳುವವನೋರೆ ಮಾಡಿ— "ಜಹಾಪನಾಹ, ಅವ್ವನು ಎತ್ತ ಹೋದಳು ? ನೀವು ಹೀಗೆ ದುಃಖಿಸುವಿರೇಕೆ ?" ಎಂದು ಕೇಳಿದನು. ಆಗ ಸೇಲೀಮನು ಕಣ್ಣೀರು ಸುರಿಸುತ್ತ ಮಗನನ್ನು ಕುರಿತು— ನನ್ನ ಪ್ರೀಯ ಖುಸರೂ, ನಿನ್ನ ತಾಯಿಯು ಈ ಮೃತ್ಯುಲೋಕವನ್ನು ಬಿಟ್ಟು ಹೊರಟು ಹೋದಳು, ಎಂದು ಹೇಳಿ ಅಂದಿನ ಯಾವತ್ತು ಸಂಗತಿಯನ್ನು ಮಗನಿಗೆ ಹೇಳಿದನು. ಅದನ್ನು ಕೇಳಿ ಖುಸರುವು ದೊಡ್ಡ ದನಿತೆಗೆದು ಅಳುತ್ತ ತನ್ನ ತಂದೆಯನ್ನು ಕುರಿತು— "ಅಪ್ಪಾ ಇನ್ನು ನನ್ನವರೆನ್ನುವವರು ಈ ಜಗತ್ತಿನಲ್ಲಿ ಯಾರೂ ಉಳಿಯಲಿಲ್ಲ ! ನನ್ನ ಗತಿಯೇನು ?" ಎಂದು ಹಂಬಲಿಸಲು, ಸೇಲೀಮನು ಮಗನನ್ನು ಪರಿಪರಿಯಿಂದ ಸಮಾಧಾನ ಪಡಿಸಿದನು. ತನ್ನ ತಂದೆಗೆ ತಾನು ಕೊಟ್ಟಿರುವ ವಚನದ ನೆನಪಾಗಿ ಸೇಲೀಮನು ಮಗನ ಕಣ್ಣುಗಳನ್ನು ಒರಿಸುತ್ತ— ಬಾಳಾ, ಹೀಗೇಕೆನ್ನುವೆ ? ನಾನು ಇದ್ದೇನಲ್ಲವೇ ? ಈ ಯಾವತ್ತು ಹಿಂದುಸ್ಥಾನದ ಬಾದಶಾಹಿಯು ಒತ್ತಟ್ಟಿಗೆ, ನೀನು ಒತ್ತಟ್ಟಿಗೆ ! ನಿನಗೆ ನಾನು ಯಾತರ ಕೊರತೆಯನ್ನೂ ಉಂಟು ಮಾಡಲಿಕ್ಕಿಲ್ಲ, ಎಂದು ನುಡಿಯಲು, ಖುಸರುವು ತಂದೆಯ ಚರಣಗಳಿಗೆರಗಿ— ಅಪ್ಪಾ, ನಾನು ಅತ್ಯಂತ ಕೃತಘ್ನನು. ನನ್ನ ಯಾವತ್ತು ಅಪರಾಧಗಳನ್ನು ಕ್ಷಮಿಸಬೇಕು; ಮತ್ತು ಕೆಲದಿನ ದೌಲತ್ತಾ-ಬಾಗದೊಳಗಿನ ಮಹಾಲಿನಲ್ಲಿ ಇರಲಿಕ್ಕೆ ನನಗೆ ಅಪ್ಪಣೆ ಕೊಡಬೇಕು ಅಂದರೆ, ನಾನು ದಿನಾಲು ತಾಯಿಯ ಹಾಗು ಅಜ್ಜನ ಕಬರಸ್ಥಾನಗಳ ದರ್ಶನ ಮಾಡಿಕೊಂಡು ಅವುಗಳ ಮೇಲೆ ಕಣ್ಣೀರು ಸುರಿಸಿ ನನ್ನ ಮನಸ್ಸನ್ನು ಶಾಂತವಾಗಿ ಮಾಡಿಕೊಳ್ಳುವೆನು, ಎಂದು ಬೇಡಿಕೊಂಡನು. ಮಗನ ಈ ಯೋಗ್ಯ ಪ್ರಾರ್ಥನೆಯನ್ನು ನಡೆಸಲು ಒಪ್ಪಿ, ಆತನಿಗೆ ಯಾವ ವೈಭವಕ್ಕೂ ಕೊರತೆ ಬಾರದಂತೆ ಸೇಲೀಮನು ಎಲ್ಲ ಅನುಕೂಲತೆಯನ್ನು ಮಾಡಿಕೊಟ್ಟನು. ಯಮುನೆಯ ಆಚೆಯ ದಂಡೆಯಲ್ಲಿ ಶಾಹಿ ಮಂಜಿಲಿನಿಂದ ಎರಡು ಹರದಾರಿಯ ಮೇಲೆ ದೌಲತ್ತಾಬಾಗು ಇದ್ದಿತು. ಅಲ್ಲಿಗೆ ಖುಸರುವು ತನ್ನ ಹೆಂಡತಿಯಾದ ಪ್ಯಾರಿಬಾನುವನ್ನೂ, ನಿಯಮಿತ ಪರಿವಾರವನ್ನೂ ಕರಕೊಂಡು ಹೋಗಿ ಇರತೊಡಗಿದನು.

ಖುಸರುವು ಹೀಗೆಯೇ ವಿವೇಕಿಯಾಗಿ ತಂದೆಯ ಆಜ್ಞಾಪಾಲನ ಮಾಡುತ್ತ ಇದ್ದದ್ದಾಗಿದ್ದರೆ ಸೇಲೀಮನ ತರುವಾಯದಲ್ಲಿ ಆತನೇ ಹಿಂದು

ಸ್ಥಾನದ ಬಾದಶಹನಾಗಬಹುದಾಗಿತ್ತು; ಆದರೆ, ಅಂಥ ಸುಯೋಗವು ಖುಸರುವಿಗೆ ಒದಗತಕ್ಕದ್ದಾಗಿದ್ದಿಲ್ಲ. ಕೇವಲ ಸ್ವತಂತ್ರದಿಂದ ಇರಹತ್ತಿದ ಖುಸರುವಿಗೆ ದುಷ್ಟರೂ, ದುರ್ವ್ಯಸನಿಗಳೂ ಆದ ಮಿತ್ರರ ಸಹವಾಸವಾಗಿ, ಆತನು ಮಿತಿಮೀರಿ ಸೆರೆ ಕುಡಿದು ವಾರಾಂಗನೆಯರ ಸಹವಾಸದಲ್ಲಿ ಕಾಲ ಕಳೆಯಹತ್ತಿದನು. ಈ ಎಲ್ಲ ಸಂಗತಿಗಳು ಸೇಲೀಮನ ಕಿವಿಗೆ ಗುಪ್ತಚಾರರ ಮುಖಾಂತರ ಮುಟ್ಟುತ್ತಲೇ ಇದ್ದವು. ಖುಸರುವಿನ ದುಷ್ಟ ಮಿತ್ರರ ದುಷ್ಟ ಸಹವಾಸದ ದುಷ್ಪರಿಣಾಮದ ಮೇರೆಯು ಇಷ್ಟಕ್ಕೇ ಮುಗಿಯದೆ, ಸೇಲೀಮನ ವಿರುದ್ಧವಾಗಿ ಬಂಡಾಯ ಮಾಡಲು, ಅವರು ಖುಸರುವನ್ನು ಹುರಿದುಂಬಿಸಿದರು. ಅವರ ದುರ್ಬೋಧಕ್ಕೆ ಕಿವಿಗೊಟ್ಟು ತಂದೆಯನ್ನು ದೂಡಿ ತಾನೇ ಹಿಂದುಸ್ಥಾನದ ಬಾದಶಹನಾಗಬೇಕೆಂದು ಖುಸರುವು ಯತ್ನಿಸತೊಡಗಿದನು. ಆತನು ಪಂಜಾಬ ಪ್ರಾಂತಕ್ಕೆ ಹೋಗಿ ಅದನ್ನು ಸ್ವಾಧೀನ ಪಡಿಸಿಕೊಳ್ಳುವ ಯತ್ನ ನಡಿಸಿದನು. ಈ ಬಗೆಯ ಮಗನ ದ್ರೋಹದ ಕೆಲಸಗಳಿಂದ ಸೇಲೀಮನ ಚಿತ್ತಕ್ಕೆ ಸಮಾಧಾನವಿಲ್ಲದಾಯಿತು. ಮೊದಲೇ ಮಗನನ್ನು ಕಂಡರೆ ಆಗದೆ ಇದ್ದ ಆತನು ತಂದೆಗೆ ಕೊಟ್ಟ ವಚನವನ್ನು ಪಾಲಿಸುವದಕ್ಕಾಗಿ ಆತನನ್ನು ಪ್ರೀತಿಸುತ್ತಿದ್ದನು. ಆದರೆ ಖುಸರುವಿನ ಈ ಕೃತಘ್ನತೆಯ ಕಾರ್ಯಗಳಿಗಾಗಿ ಆತನು ಸಂತಾಪಗೊಂಡು ಆತನನ್ನು ಶಿಕ್ಷಿಸಲು ಯತ್ನಿಸತೊಡಗಿದನು. ಮರಣೋನ್ಮುಖನಾದ ತನ್ನ ತಂದೆಗೆ ಕೊಟ್ಟ ವಚನವನ್ನು ಕಡೆತನಕ ಪಾಲಿಸುವಷ್ಟು ಶಾಂತಗುಣವೂ, ಔದಾರ್ಯವೂ, ಸೇಲೀಮನಲ್ಲಿ ಇದ್ದಿಲ್ಲ; ಮೇಲಾಗಿ ಖುಸರುವು ಹಾದಿಗೆ ಬರುವದಕ್ಕಾಗಿ ಮಾಡಿದ ಸೇಲೀಮನ ಯತ್ನಗಳೆಲ್ಲ ನಿಷ್ಫಲವಾದವು. ಈ ಸಂಸಾರದಲ್ಲಿ ಕೇವಲ ಸ್ವಾರ್ಥಪರಾಯಣರಾದ ಬಂಧುಬಾಂಧವರು ಪರಸ್ಪರರ ಮೇಲೆ ಮಾಡುತ್ತಿರುವ ಪ್ರೇಮವು ಹೀಗೆ ಚಂಚಲವಾಗಿರತಕ್ಕದ್ದೇ ಸರಿ. ತಮ್ಮ ಹಿತಕ್ಕೆ ಅನುಕೂಲರಾಗಿರುವಾಗ ಅವರು ಪರಸ್ಪರರನ್ನು ಪ್ರೀತಿಸುವರು, ಪ್ರತಿಕೂಲವಾದಕೂಡಲೆ ಪರಸ್ಪರರನ್ನು ದ್ವೇಷಿಸುವರು. ತಾಯಿ, ತಂದೆ, ಮಕ್ಕಳು, ಹೆಂಡತಿ, ಗಂಡ, ಬಂಧುಗಳು ಮೊದಲಾದ ಸಂಬಂಧಿಕರು, ತಮ್ಮ ತಮ್ಮ ಸಂಬಂಧಗಳಿಗನುಸರಿಸಿ ಆಯಾ ಸಂಬಂಧಗಳ ಧರ್ಮದಂತೆ ಪರಸ್ಪರರೊಡನೆ ನಿಸ್ಪೃಹರಾಗಿ ತಮ್ಮ ಕರ್ತವ್ಯವೆಂದು ತಿಳಿದು ನಡೆದುಕೊಳ್ಳುವದಿಲ್ಲ, ಆದರೆ ಸ್ವಹಿತಕ್ಕೆ, ಅರ್ಥಾತ್ ಸ್ವಾರ್ಥಕ್ಕೆ ಮಹತ್ವಕೊಟ್ಟು ಅದನ್ನು ಸಾಧಿಸಿಕೊಳ್ಳು

ವದಕ್ಕಾಗಿಯೇ ಆ ಬೇರೆಬೇರೆ ಸಂಬಂಧಗಳನ್ನು ಮುಂದೆಮಾಡಿ ಪರಸ್ಪರರನ್ನು ಮೋಸಗೊಳಿಸಲು ಯತ್ನ ಮಾಡುತ್ತಿರುವರು; ಆದ್ದರಿಂದ ವಾಡಿಕೆಯಾಗಿ ಸಾಂಸಾರಿಕರು ಪರಸ್ಪರರನ್ನು ಪ್ರೀತಿಸುವದರಲ್ಲಿ, ಅಥವಾ ದ್ವೇಷಿಸುವದರಲ್ಲಿ ಸ್ವಾರ್ಥವಿರುತ್ತದಲ್ಲದೆ ಧರ್ಮವಿರುವದಿಲ್ಲವೆಂಬದನ್ನು ಸ್ಪಷ್ಟವಾಗಿ ತಿಳಿದು ಕೊಂಡು, ಧರ್ಮಕ್ಕೆ ಬಾಧೆಬರದಂತೆ ನಡೆದುಕೊಳ್ಳಬೇಕು. ಶ್ರೀರಾಮನು ತನ್ನ ತಂದೆ–ದಶರಥನನ್ನು ಪ್ರೀತಿಸಿದ್ದೂ, ಜಾನಕಿಯು ತನ್ನ ಪತಿ–ಶ್ರೀರಾಮ ನನ್ನು ಪ್ರೀತಿಸಿದ್ದೂ, ರಾಮ-ಲಕ್ಷ್ಮಣ-ಭರತ-ಶತ್ರುಘ್ನರು ಪರಸ್ಪರರಲ್ಲಿ ಬಂಧು ಪ್ರೇಮವ ತಾಳಿದ್ದೂ, ಗುಹನು ತನ್ನ ಸ್ವಾಮಿ–ಶ್ರೀರಾಮನಲ್ಲಿ ಭಕ್ತಿಯ ವಹಿ ಸಿದ್ದೂ ಕೇವಲ ಧರ್ಮಕ್ಕಾಗಿಯಲ್ಲದೆ, ಸುಖಕ್ಕಾಗಿಯಲ್ಲವೆಂಬದನ್ನು ಲಕ್ಷ ದಲ್ಲಿಟ್ಟು, ಸಾಚಿಕೊಂಡು ಎಚ್ಚರದಿಂದ ನಡೆದುಕೊಳ್ಳಬೇಕು; ಯಾಕಂದರೆ, "ಧರ್ಮೋರಕ್ಷತಿ ರಕ್ಷಿತಃ" ಅಂದರೆ "ನಾವು ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುವದೆಂ"ಬ ಉಕ್ತಿಯು ಪ್ರಸಿದ್ಧವಿರುವದು.

ಖುಸರುವಿಗೆ ಮೇಲಿನ ಉದಾತ್ತವಾದ ಧಾರ್ಮಿಕ ಪ್ರೇಮದ ಪರಿಚಯವೇ ಇದ್ದಿಲ್ಲವೆಂದು ಹೇಳಬಹುದು. ಆತನು ಮದ್ಯಪಾನ-ವೇಶ್ಯಾಸಂಗಗಳ ಯೋಗ ದಿಂದ ಶ್ರೇಷ್ಠ ಪತಿವ್ರತೆಯಾದ ತನ್ನ ಹೆಂಡತಿ ಪ್ಯಾರಿಜಾನುವನ್ನು ತಿರಸ್ಕರಿಸಿ ಬಿಟ್ಟುಕೊಟ್ಟನು. ಆತನು ರಾಜ್ಯತೃಷ್ಣೆಯ ಎಳತಕ್ಕೆ ಸಿಕ್ಕು ತನ್ನ ತಂದೆ ಯನ್ನು ಪ್ರಸಿದ್ಧರೀತಿಯಿಂದ ವಿರೋಧಿಸತೊಡಗಿದನು. ಇದನ್ನೆಲ್ಲ ನೋಡಿ ಸೇಲೀಮನು ಬೇಸತ್ತು ಈ ದುಷ್ಟ ಮಗನನ್ನು ದಂಡಿಸಲು ಉಪಾಯವೇನು ಮಾಡಬೇಕೆಂದು ಯೋಚಿಸತೊಡಗಿದನು. ಇದೇ ಸಂಧಿಯಲ್ಲಿ ದುರ್ಜಯ ಸಿಂಹನು ಸೇಲೀಮನನ್ನು ಕಂಡು, ಖುಸರುವು ಮಾನಸಿಂಹನಿಗೆ ಹಿಂದಕ್ಕೆ ಬರೆದಿದ್ದ ಹಲವು ಪತ್ರಗಳನ್ನು ಆತನಿಗೆ ತೋರಿಸಿದನು. ಆ ಪತ್ರಗಳೊಳಗಿನ ದೊಂದು ಪತ್ರದಲ್ಲಿ ಖುಸರುವು ಮಾನಸಿಂಹನಿಗೆ— "ನೀವು ನನ್ನ ತಂದೆ ಯನ್ನು ಸೆರೆ ಹಿಡಿಯಲು ಸಮರ್ಥರಾದರೆ ನಾನು ಆತನನ್ನು ಕೊಲ್ಲದೆ, ಆತನ ಕಣ್ಣುಮಾತ್ರ ಕಿತ್ತಿಸುವೆನು. ಈ ಕೆಲಸ ಮಾಡಿದ್ದಕ್ಕಾಗಿ ಪಾರಿತೋಷಕ ವೆಂದು ಅರ್ಧ ಹಿಂದುಸ್ಥಾನವನ್ನು ನಿಮಗೆ ಕೊಡುವೆನು." ಎಂದು ಬರೆದಿ-ದ್ದನು. ಬಹುದಿವಸಗಳ ಹಿಂದೆ ಬರೆದಿರುವ ತನ್ನ ಮಗನ ಈ ಪತ್ರದ ವಿಷಯವಾಗಿ ಜಹಾಂಗೀರನು ದುರ್ಜಯಸಿಂಹನನ್ನು ಕುರಿತು ಕೇಳ-ಬಾರದ್ದನ್ನು ಕೇಳಿ ತನ್ನ ನಂಬಿಗೆ ಮಾಡಿಕೊಂಡನು. ಆಗ ಉರಿಯಲ್ಲಿ ತುಪ್ಪವನ್ನು ಸುರವಿದಂತಾಯಿತು. ಮೊದಲೇ ಮಗನಮೇಲೆ ಸಿಟ್ಟಾಗಿ

ಆತನನ್ನು ಸೆರೆ ಹಿಡಿಯಬೇಕೆಂದು ಮಾಡಿದ್ದ ಜಹಾಂಗೀರನು, ದುರ್ಜಯ ಸಿಂಹನು ತೋರಿಸಿದ ಈ ಪತ್ರದಿಂದ ಮತ್ತಿಷ್ಟು ಸಿಟ್ಟಾಗಿ, ನಾಳೆ ಮಾಡುವದನ್ನು ಈ ದಿನವೇ ಮಾಡಿಬಿಡಬೇಕೆಂದು ಆತುರಪಟ್ಟನು. ಆಗ ಖುಸರುವು ಪಂಜಾಬ ಪ್ರಾಂತಕ್ಕೆ ಹೋಗಿ ಲಾಹೋರವನ್ನು ಮುತ್ತಿ, ಸುತ್ತುಮುತ್ತಲಿನ ಪ್ರದೇಶದಲ್ಲಿ ಸುಲಿಗೆಯ ಕೆಲಸ ನಡಿಸಿ ದುಡ್ಡು ಕೂಡಿಸತೊಡಗಿದ್ದನು. ಅಷ್ಟರಲ್ಲಿ ಸ್ವತಃ ಜಹಾಂಗೀರನೇ ದಂಡೆತ್ತಿಹೋಗಲು, ಮೊದಲು ಚುಣಿಯಲ್ಲಿಯೇ ಖುಸರುವಿನ ಸೈನ್ಯವು ಸೋತು ಅವನು ಜಹಾಂಗೀರನ ಸೆರೆಯಾಳಾದನು.

ಇನ್ನು ಮುಂದಿನ ದುಃಖಕಾರಕ ಸ್ಥಿತಿಯನ್ನು ಕಾದಂಬರಿಯಲ್ಲಿ ವರ್ಣಿಸಲು ನಾನು ಇಚ್ಛಿಸುವದಿಲ್ಲ. ಅಕಬರನಷ್ಟು ಉದಾರ ಹೃದಯದವನು ಸೇಲೀಮನು ಅಲ್ಲವೇ ಅಲ್ಲ; ಆದ್ದರಿಂದ ಆತನು ಮಗನ ವಿಷಯವಾಗಿ ತ್ವೇಷಗೊಂಡು ಆತನ ಕಣ್ಣುಗಳನ್ನು ಕಿತ್ತಿಸಿದನು. ಹೀಗೆ ತನ್ನ ಕಣ್ಣುಗಳೊಳಗಿಂದ ರಕ್ತವು ಸೋರುವಾಗ ಖುಸರುವಿಗೆ ಮಂದಾಕಿನಿಯ ಶಾಪವಾಣಿಯು ಸ್ಮರಣವಾಗಿ ಆತನು ಪಶ್ಚಾತ್ತಾಪಪಡತೊಡಗಿದನು. ಸಾಂಸಾರಿಕರ ರೀತಿಯು ಹೀಗೆಯೇ ಸರಿ! ಮೊದಲು ಅಹಂಕಾರದಿಂದ ಪಾಪಕೃತ್ಯಗಳನ್ನು ಮಾಡುವದು, ಹಿಂದುಗಡೆ ಅವುಗಳ ಫಲಗಳನ್ನು ಭೋಗಿಸುವಾಗ ಅಳುವದು! ಖುಸರುವಿನ ದುರ್ದೆಸೆಯು ಇಲ್ಲಿಗೇ ಮುಗಿಯಲಿಲ್ಲ. ಮುಂದೆ ಸೇಲೀಮನು ನೂರಜಹಾನಳನ್ನು ಲಗ್ನವಾದ ಬಳಿಕ ಆಕೆಯು, ಪಟ್ಟದ ಬಾಧ್ಯಸ್ಥಿಕೆಯನ್ನು ತೋರಿಸುವ ಈ ಕುರುಡನೂ ಜೀವದಿಂದಿರಲಾಗದೆಂದು ಕೊಲೆಗಡಕರಿಂದ ಖುಸರುವಿನ ಕೊಲೆಮಾಡಿಸಿದಳಂತೆ! ಪ್ರಿಯ ವಾಚಕರೇ, ನೋಡಿರಿ, ರಾಜಸಂಸಾರದ ಸುಖವು ಹೇಗಿರುತ್ತದೆ! ರಾಜಸಂಸಾರದಲ್ಲಿ ಇಂಥ ಕಲಹ-ಕೊಲೆಗಳು, ಮರೆ-ಮೋಸಗಳು ದೊಡ್ಡ ಪ್ರಮಾಣದಿಂದ ಕಂಡುಬಂದರೆ ನಮ್ಮ ಬಡವರ ಸಂಸಾರದಲ್ಲಿ ಅವು ಸಣ್ಣ ಪ್ರಮಾಣದಿಂದ ಕಂಡುಬರುತ್ತವೆ; ಆದ್ದರಿಂದ ತತ್ವತಃ ಸಂಸಾರವು ದುಃಖಮಯವೆಂದು ತಿಳಿದು, ಯಾವನದೇನು, ಯಾವಳದೇನು, ಅನ್ನುತ್ತ ಮನಸ್ಸಿಗೆ ಬಂದಂತೆ ನಡೆದುಕೊಳ್ಳದೆ ಧರ್ಮಕ್ಕೂ, ಪಾಪ-ಪುಣ್ಯಗಳಿಗೂ, ದೇವರಿಗೂ, ಲೋಕಕ್ಕೂ, ಬಹಳವೇಕೆ ತನ್ನ ನೆರಳಿಗೂ ಅಂಜಿ ತಾನು ಸಂಸಾರ ಮಾಡಬೇಕು. ಅಂದರೆ ಈ ಅಸಾರ ಸಂಸಾರವೇ ಸಾರವುಳ್ಳದ್ದಾಗಿ ಇಹಪರ ಸುಖಕ್ಕೂ ಕೀರ್ತಿಗೂ ಕಾರಣವಾಗುವದು.

**ಸಮಾಪ್ತ**